ಓಂ

ಶ್ರೀಗುರುಭ್ಯೋ ನಮಃ

# ಆತ್ಮಾನುಭವದರ್ಶಿನೀ

ಶ್ರೀ ಪದ್ಮನಾಭಗುರು ವಿರಚಿತ

'ಆತ್ಮಾನುಭವ' ದ

(ಭಾವಾನುವಾದ ಮತ್ತು ವಿವರಣೆ)

## ತೃತಿಯೋಽಧ್ಯಾಯಃ

(ಕರ್ಮ-ಭಕ್ತಿ ನಿರೂಪಣೆ)

(ಓವೀ ಸಂ.1-244)

ಓಂ ಸ್ವಯಂಪ್ರಕಾಶಾಯ ನಮಃ

ಓವೀ ಸಂಖ್ಯೆ 1 : ಶ್ರೀ ಗುರುನಾಥನು ಅಭಯಪಾಣಿಯೂ, ವೇದವಾಣಿಯೂ ಆಗಿದ್ದಾನೆ. ಅವನು ಅಜ್ಞಾನವೆಂಬ ಕತ್ತಲೆಗೆ ಸೂರ್ಯನಂತಿದ್ದಾನೆ. ಸಕಲ ವಿಷಯಗಳ ಸುಖದ ಮೂಲನೂ ಅವನೊಬ್ಬನೇ ಆಗಿದ್ದಾನೆ.

ವಿವರಣೆ : ಶ್ರೀಗಳು ಉಳಿದ ಎಲ್ಲ ಅಧ್ಯಾಯಗಳಲ್ಲಿರುವಂತೆ ಈ ಅಧ್ಯಾಯದಲ್ಲೂ ಕೆಲವು ಓವೀಗಳನ್ನು ತಮ್ಮ ಗುರುಗಳಿಗೆ ಪ್ರಣಾಮ ಸಲ್ಲಿಸಲು ಅರ್ಪಣೆ ಮಾಡಿದ್ದಾರೆ. ಈ ರೀತಿ ತಮ್ಮ ಗುರುಗಳಿಗೆ ಗ್ರಂಥಾರಂಭದಲ್ಲಿ ವಂದನೆ ಸಲ್ಲಿಸುವುದು ಎಲ್ಲ ಗ್ರಂಥಕರ್ತರಿಗೆ ವಾಡಿಕೆಯಾದರೂ ಈ ಗ್ರಂಥದಲ್ಲಿ ಶ್ರೀಗಳು ತಮ್ಮ ಗುರುಗಳಿಗೆ ವಂದನೆ ಸಲ್ಲಿಸುವ ನಿಮಿತ್ತದಿಂದ ಸಕಲ ವೇದಾಂತ ಸಾರವನ್ನು ಸೂರೆಗೊಂಡಿರುವುದು ವಿಶೇಷವಾಗಿರುತ್ತದೆ. ಈ ಓವೀಯಲ್ಲಿ ತಮ್ಮ ಗುರುಗಳ ಬಗ್ಗೆ ಅಭಯವಾಣಿ, ವೇದವಾಣಿ, ಎಂದು ಕೊಂಡಾಡಿದ್ದಾರೆ. 'ಅಭಯವಾಣಿ'

ಎಂದರೆ ಶ್ರೀಗುರುವಿಗೆ ಅಭಯಹಸ್ತವಿದ್ದು ಅವರ ಅನುಗ್ರಹದಿಂದ ತಮ್ಮ ಶಿಷ್ಯರಿಗೆ ಯಾವುದೇ ರೀತಿಯ ಭಯವಾಗಲೀ ಚಿಂತೆಯಾಗಲೀ ಇರುವುದಿಲ್ಲವೆಂದೂ ಅವರ ಸಮಸ್ಯೆಗಳಿಗೆ ತಾವೇ ಪರಿಹಾರ ಹುಡುಕುವವರೆಂದೂ ಭರವಸೆ ಕೊಡುವುದೇ ಆಗಿರುತ್ತದೆ. 'ವೇದವಾಣಿ' ಎಂಬ ಮಾತು ಗುರುಗಳ ನುಡಿಯು ಮತ್ತು ನಡೆಯು ವೇದೋಪನಿಷತ್ತುಗಳ ಸಾರವೇ ಆಗಿರುತ್ತದೆ. ಹಾಗೆಯೇ ಅವರ ಶಿಷ್ಯರ ಅಜ್ಞಾನವನ್ನು ಗಾಢಾಂಧಕಾರವು ಹೇಗೆ ಸೂರ್ಯನಿಂದ ಕ್ಷಣಾರ್ಧದಲ್ಲಿ ನಾಶ ಮಾಡುವುದೋ ಹಾಗೆಯೇ ಶ್ರೀಗುರುನಾಥನು ಜ್ಞಾನಸೂರ್ಯನಂತೆ ಇದ್ದು ಅಜ್ಞಾನವನ್ನು ನಾಶಮಾಡುವುದು ಖಚಿತವಾಗಿರುತ್ತದೆ. ಶ್ರೀಗುರುವು ಸಕಲ ವಿಷಯ-ವಸ್ತುಗಳ ಸುಖದ ಮೂಲವಾಗಿದ್ದು ಬ್ರಹ್ಮಸ್ವರೂಪನಾದ ಅವನು ಆನಂದಸಾಗರನೇ ಆಗಿದ್ದಾನೆ.

ಓ.ಸಂ.2 : ಶ್ರೀಗುರುನಾಥನು ಸಚ್ಚಿದಾನಂದ ಸ್ವರೂಪನು, ನಿಗಮಾಗಮಗಳೇ ಅವನ ಕೀರ್ತಿ, ಈಶ್ವರನಿಂದ ಹಿಡಿದು ಸ್ಥಾವರದವರೆಗೆ ಇರುವ ಇರುವು ಅವನ ಸ್ಫೂರ್ತಿಯೇ ಆಗಿರುತ್ತದೆ.

ವಿವರಣೆ : ಹಿಂದಿನ ಓವೀಯಲ್ಲಿ ವಿಷಯ ವಸ್ತುಗಳೆಲ್ಲಾ ನಮಗೆ ತೋರುವ ಸುಖದ ಮೂಲವು ಗುರುನಾಥನೆಂದೇ ಹೇಳಿದೆ. ಹೀಗೆ ಲೌಕಿಕ ವಸ್ತುಗಳಿಂದ ಉಂಟಾಗುವ ಸುಖ-ದುಃಖಗಳಿಗೆ ಅತೀತನಾಗಿದ್ದರೂ ಅವುಗಳ ಮೂಲವಾದ ಶುದ್ಧ ಆನಂದಸ್ವರೂಪನೇ ಇವನು. ಈ ಓವೀಯಲ್ಲಿ ಸತ್ ಹಾಗೂ ಚಿತ್ ಸ್ವರೂಪನೂ ಕೂಡ ಅವನೇ ಇದ್ದಾನೆಂದು ಹೇಳಲಾಗಿದೆ. ಆನಂದ ತತ್ತ್ವವು ಸತ್ ಚಿತ್‌ಗಳನ್ನು ಒಳಗೊಳ್ಳುತ್ತದೆ. ಏಕೆಂದರೆ ಸತ್ ಚಿತ್ ಇಲ್ಲದೇ ಆನಂದವು ಇರುವಂತಿಲ್ಲ. 'ಸತ್' ಎಂದರೆ ಶುದ್ಧ ಇರವು. ಈ ಇರವು ಇಲ್ಲದೇ ಯಾವುದೇ ವಸ್ತುವು ನಮಗೆ ತೋರುವಂತೆಯೂ ಇಲ್ಲ. ಮತ್ತೆ ನಮ್ಮ ಕಲ್ಪನೆಗೂ ಅದು ಬರುವಂತಿಲ್ಲ. ಈಶ್ವರನಿಂದ ಹಿಡಿದು ಸ್ಥಾವರದವರೆಗೆ ಸಕಲ ಪ್ರಾಣಿಗಳ ಸಕಲ ಜಡದ ಇರವೂ ಕೂಡ ಇವನದೇ ಇರುತ್ತದೆ. ಆದರೆ ಇವೆಲ್ಲ ನಾಮ ರೂಪಾತ್ಮಕವಾಗಿದ್ದು ಅನಿತ್ಯವಾಗಿರುತ್ತವೆ. ಆದರೆ ಈ ಸತ್ ಸ್ವರೂಪವು ಮಾತ್ರ ನಿತ್ಯವಾಗಿರುತ್ತದೆ. 'ಚಿತ್' ಎಂದರೆ ಶುದ್ಧ ಚೈತನ್ಯವು. ಇಲ್ಲಿ ಸಕಲ ಪ್ರಾಣಿಗಳಲ್ಲಿರುವುದು ಇದೇ ಚೈತನ್ಯವೇ ಆದರೂ ಇದು ವೃತ್ತಿಗಳ ಜೊತೆ ಸೇರಿಕೊಂಡಿರುವುದರಿಂದ ಶುದ್ಧ ಚೈತನ್ಯವಲ್ಲ.

ನಿಗಮಗಳು ಎಂದರೆ ವೇದಗಳು. ವೇದಗಳು ನಾಲ್ಕು ಇವೆ. ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳು - ಇವೇ ನಾಲ್ಕು ವೇದಗಳು. ಸಕಲ ಉಪನಿಷತ್ತುಗಳೂ ವೇದಗಳ ಭಾಗಗಳೇ ಆಗಿವೆ. "ಸಕಲ ವೇದಗಳಿಂದಲೂ ಪರಮಾತ್ಮನೇ ತಿಳಿಯತಕ್ಕವನು. ವೇದಾಂತವನ್ನು ರಚಿಸಿದವನು ಪರಮಾತ್ಮನೇ ಇದ್ದಾನೆ. ವೇದಗಳನ್ನು ತಿಳಿದವನು ಕೂಡ ಈ ಪರಮಾತ್ಮನೇ ಇದ್ದಾನೆ" ಎಂದು ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಹೇಳಿದ್ದಾನೆ.

ಆದರೆ ಸದ್ಗುರುವೇ ಪರಬ್ರಹ್ಮ ಸ್ವರೂಪನಾಗಿರುವುದರಿಂದ ಈ ಓವೀಯು ಶ್ರೀ ಗುರುವನ್ನು ನಿಗಮಾಗಮಗಳ ಕೀರ್ತಿ ಎಂದು ಹೊಗಳಲಾಗಿದೆ. ಆಗಮವೆಂದರೆ ನಿಗಮಗಳಿಂದ ಬಂದದ್ದೇ ಆಗಿರುತ್ತದೆ. ಇವೆಲ್ಲ ತಂತ್ರ ಶಾಸ್ತ್ರಗಳಾಗಿವೆ. ಅನೇಕ ಆಗಮಗಳಿವೆ. ವೈಷ್ಣವಾಗಮ, ಶೈವಾಗಮ, ಇತ್ಯಾದಿಗಳಿದ್ದು ಇವುಗಳು ಆಯಾದೇವತೆಗಳ ಪಾರಮ್ಯವನ್ನು ಹೇಳುತ್ತವೆ. ಆದರೆ ಈ ಎಲ್ಲ ಆಗಮಗಳಲ್ಲೂ ಕೂಡ ಶ್ರೀಗುರುವಿಗೇ ಅತ್ಯಂತ ಹೆಚ್ಚಿನ ಸ್ಥಾನವಿರುವುದು ತಿಳಿಯುತ್ತದೆ. ಎಲ್ಲ ನಿಗಮಾಗಮಗಳು ಅವನಿಂದಲೇ ಬಂದಿರುವುದರಿಂದ ಅವುಗಳು ಅವನ ಸ್ಫೂರ್ತಿಯಾಗಿವೆ.

**ಓ.ಸಂ.3 :** ನಾಮರೂಪಗಳಿಗೆ ಆದಿ–ಅಂತ್ಯಗಳಿರುವುದರಿಂದ ಅವುಗಳಿಗೆ ಅಸ್ತಿತ್ವವಿರುವುದಿಲ್ಲ. ವಾಸನಾರೂಪವಾಗಿರುವ ಅವು ಅಂತಃಕರಣದ ಭಾಗವಾದ ಚಿತ್ತದಲ್ಲಿದ್ದರೂ ನಮಗೆ ಹೊರಗೆ ಇದ್ದಂತೆ ತೋರುತ್ತವೆ.

**ವಿವರಣೆ:** ಚತುರ್ಮುಖ ಬ್ರಹ್ಮನಿಂದ ಹಿಡಿದು ಸ್ಥಾವರದವರೆಗೆ ಸಕಲ ಜೀವಿಗಳಿಗೂ ನಾಮ–ರೂಪಗಳಿರುತ್ತವೆ. ಇವುಗಳು, ಹುಟ್ಟುವ ಮೊದಲಾಗಲೀ ಅಥವಾ ನಾಶವಾದಮೇಲಾಗಲೀ ಇರುವುದಿಲ್ಲ. ಇರುವಾಗ ಕೂಡ ಅವು ವಿಕಾರವಾಗುತ್ತಾ ಇರುತ್ತವೆ. ಆದರೆ ಇದು ಸತ್ಯದ ಲಕ್ಷಣವಲ್ಲ. ಯಾವ ರೀತಿಯಲ್ಲೂ ಬದಲಾವಣೆಯಾಗದೇ ನಿರಂತರ ಇರುವುದೇ ಸತ್ಯದ ಲಕ್ಷಣವಾಗಿರುತ್ತದೆ. ಆದುದರಿಂದ ನಾಮ–ರೂಪಗಳಿಗೆ ನಿಜವಾದ ಅಸ್ತಿತ್ವವಿರದೇ ಅವುಗಳು ಹೇಗೆ ಭ್ರಾಂತಿಯ ಹಾವು ಹಗ್ಗದ ಬದಲಿಗೆ ಕಾಣುತ್ತದೋ ಹಾಗೆಯೇ ಇರುತ್ತವೆ. ಹಾವಿನ ಅನುಭವವು ಚಿತ್ತದಲ್ಲಿ ವಾಸನಾರೂಪದಲ್ಲಿರುತ್ತದೆ. ಆ ವಾಸನೆಯು ಹಗ್ಗವನ್ನು ನೋಡಿದ ಕೂಡಲೇ ಭ್ರಾಂತಿಯ ಹಾವಾಗಿ ಹಗ್ಗದಲ್ಲಿ ತೋರುತ್ತದೆ. ಹಾಗೆಯೇ ಹಿಂದಿನ ಜನ್ಮದಲ್ಲಿ ಅಥವಾ ಹಿಂದಿನ ಕಲ್ಪದಲ್ಲಿ ನೋಡಿರುವ ಈ ನಾಮರೂಪಾತ್ಮಕ ಜಗತ್ತು ವಾಸನಾರೂಪದಲ್ಲಿ ಅನಾದಿಕಾಲದಿಂದ ಇರುತ್ತದೆ. ನಾವು ಜನ್ಮತಾಳಿದ ಕೂಡಲೇ ಆ ಜಗತ್ತಿನ ವಾಸನೆಯು ನಮ್ಮ ಸ್ಮೃತಿಪಟಲದಲ್ಲಿ ಬಂದು ಬ್ರಹ್ಮನ ಅಥವಾ ಆತ್ಮನ ಅಧಿಷ್ಠಾನದಲ್ಲಿ ನಾಮರೂಪಾತ್ಮಕ ಜಗತ್ತಾಗಿ ತೋರುತ್ತದೆ.

**ಓ.ಸಂ.4 :** ನಾಮ–ರೂಪಗಳು ಮನಸ್ಸಿಗೆ ವಿಷಯಗಳಾಗಿರುವುದರಿಂದ ಅವುಗಳಿಗೆ ಸ್ಫುರಣವು ಇರುವಂತಿಲ್ಲ. ಅಲ್ಲದೇ ಅವುಗಳು ಅಸತ್–ಜಡ ದುಃಖ ಸ್ವರೂಪವು ಆಗಿರುತ್ತವೆ.

**ವಿವರಣೆ :** ಇಡೀ ಜಗತ್ತು ನಾಮ-ರೂಪಾತ್ಮಕವಾಗಿರುತ್ತದೆ. ಮತ್ತು ಆ ಪ್ರತಿಯೊಂದು ನಾಮ-ರೂಪವು ಮನಸ್ಸಿಗೆ ದೃಶ್ಯವಾಗಿದೆ. ಅಂದರೆ ಅವು ಮನಸ್ಸಿಗೆ ವಿಷಯಗಳಾಗಿವೆ. ಮನಸ್ಸಿಗೆ ವಿಷಯವಾದ ಪ್ರತಿಯೊಂದು ವಸ್ತುವೂ ಮನಸ್ಸಿನಿಂದಲೇ ಪ್ರಕಟವಾಗಬೇಕಾಗಿರುತ್ತದೆ. ಮನಸ್ಸು ಸಾತ್ವಿಕ ಪ್ರಧಾನವಾಗಿದ್ದು ಅದರ ವೃತ್ತಿಗಳು ಆತ್ಮನ ಪ್ರಭೆಯಿಂದ ಬೆಳಗುವುದರಿಂದ ಅವು 'ನಾನು' ಎಂಬ ಅರಿವಿನಿಂದೊಡಗೂಡಿ ತಮಗೆ ತಾವೇ ಪ್ರಕಟವಾಗುತ್ತವೆ. ಆದರೆ ದೃಶ್ಯರೂಪವಾಗಿರುವ ನಾಮ-ರೂಪಗಳು ತಾಮಸ ಪ್ರಧಾನವಾಗಿರುವುದರಿಂದ ಅವು ಮನೋವೃತ್ತಿಗಳಿಗೆ ವಿಷಯಗಳಾಗಿದ್ದು ಮನಸ್ಸಿನಿಂದ ತಿಳಿಯಲ್ಪಡುತ್ತವೆ. ಅವುಗಳಿಗೆ ತಮಗೆ ತಾವೇ ಪ್ರಕಟಗೊಳ್ಳುವ (ಸ್ಫುರಣಗೊಳ್ಳುವ) ಶಕ್ತಿ ಇರುವುದಿಲ್ಲ. ಅಂದರೆ ಈ ನಾಮ-ರೂಪಕಗಳಿಗೆ ತಮ್ಮನ್ನು ತಾವು ತಿಳಿಯುವುದಾಗಲೀ, ಬೇರೇ ವಸ್ತುಗಳನ್ನು ತಿಳಿಯುವುದಾಗಲೀ ಸಾಧ್ಯವಿಲ್ಲ. ಅವುಗಳ ಅಸ್ತಿತ್ವವು ಅವು ತಿಳಿಯಲ್ಪಡುವುದರಿಂದಲೇ ಸಿದ್ಧವಾಗುತ್ತದೆ. ಆದ್ದರಿಂದ ಅವು ಅಸತ್ ಸ್ವರೂಪವಾಗಿರುತ್ತವೆ. ಯಾವುದು ಅಸತ್ ಸ್ವರೂಪವೋ ಅದು ಜಡವೂ ಮತ್ತು ದುಃಖಕಾರಕವೂ ಆಗಿರುತ್ತದೆ.

**ಓ.ಸಂ.5 :** ಅಸತ್ ಆಗಿರುವುದೆಲ್ಲ ಕೇವಲ ತೋರುವುದೇ ಹೊರತಾಗಿ ಅದು ನಿಜವಾಗಿ ಇರುವುದಿಲ್ಲ. ಆದರೆ ಗುರುನಾಥನು ಮಾತ್ರ ಕಾಲತ್ರಯದಲ್ಲಿ ಇದ್ದೇ ಇರುತ್ತಾನೆ. ಕಾಲವೂ ಕೂಡ ಕಲ್ಪನೆಯಲ್ಲಿ ಮಾತ್ರ ತೋರುವುದರಿಂದ ಅದು ನಿಜವಾಗಿ ಇರುವುದಿಲ್ಲ.

**ವಿವರಣೆ :** ಇಡೀ ಪ್ರಪಂಚದಲ್ಲಿ ಕಣ್ಣಿಗೆ ಕಾಣುವುದೆಲ್ಲವೂ ಜಡವೇ ಆಗಿರುತ್ತದೆ ಮತ್ತು ಅದು ವಿಕಾರವಾಗಿ ನಾಶವಾಗಿ ಅದಕ್ಕೆ ನಿಜವಾದ ಅಸ್ತಿತ್ವವಿರುವುದಿಲ್ಲ. ಏಕೆಂದರೆ ಅದು ನಿಜವಾಗಿ ಇರುವಂತಹುದು ಆಗಿದ್ದಿದ್ದರೆ ಅದಕ್ಕೆ ವಿಕಾರವಾಗುವುದಾಗಲೀ ಅಥವಾ ನಾಶವಾಗುವುದಾಗಲೀ ಇರಬಾರದಾಗಿತ್ತು. ಆದ್ದರಿಂದ ಅದೆಲ್ಲವೂ ಹಗ್ಗದಲ್ಲಿ ತೋರುವ ಭ್ರಾಂತಿಯ ಹಾವಿದ್ದಂತೆಯೇ ಕೇವಲ ತೋರುವಂತಹದು ಆಗಿರುತ್ತದೆ. ಆದರೆ ಶ್ರೀಗುರುನಾಥನು ಬ್ರಹ್ಮ ಸ್ವರೂಪವೇ ಆಗಿರುವುದರಿಂದ ಅವನು ಮಾತ್ರ ಅವಸ್ಥೆಗಳಿಗೆ ಸಾಕ್ಷಿಯಾಗಿಯೂ ಕಾಲತ್ರಯಗಳಲ್ಲಿ ಇರುವವನಾಗಿಯೂ ಆಗಿರುತ್ತಾನೆ. ಅಂದರೆ ಅವನು ಎಲ್ಲದರಲ್ಲೂ ಅಂತರ್ಯಾಮಿಯಾಗಿದ್ದುಕೊಂಡು ಅಸ್ತಿ-ಭಾತಿ-ಪ್ರಿಯ ಸ್ವರೂಪದಿಂದಿರುತ್ತಾನೆ. ಆದರೆ ಸಮಾಧಿ-ಸುಷುಪ್ತಿಗಳಲ್ಲಿ ಕಾಲವೂ ಕೂಡ ನಾಶವಾಗುತ್ತದೆ. ಆಗ ಇವನು ನಿರುಪಾಧಿಕವಾಗಿ ಒಬ್ಬನೇ ನಿತ್ಯವಿರುತ್ತಾನೆ. ಸಚ್ಚಿದಾನಂದಸ್ವರೂಪದಿಂದ ತಾನೇ ತಾನಾಗಿ ಇರುತ್ತಾನೆ.

**ಓ.ಸಂ.6 :** ಹೀಗೆ ನಿರುಪಾಧಿಕನಾದ ಶ್ರೀಗುರುವನ್ನು ಬಿಟ್ಟು ಬೇರೆ ಏನೂ ಇಲ್ಲದಿರುವಾಗ ತಿಳಿಯುವ 'ನಾನು' ಎನ್ನುವುದಾಗಲೀ ತಿಳಿಯಲ್ಪಡುವ 'ಅದು' ಎನ್ನುವುದಾಗಲೀ ಇರಲಾರದು. ಇಂತಹ ಅದ್ವಯ ಸ್ಥಿತಿಯನ್ನು ಪಡೆಯುವುದೇ ಶ್ರೀಗುರುವಿನ ಪಾದಕ್ಕೆ ನಿತ್ಯ ವಂದನೆಯಾಗಿರುತ್ತದೆ.

**ವಿವರಣೆ :** ಸುಷುಪ್ತಿ–ಸಮಾಧಿಗಳಲ್ಲಿ ಪ್ರಕಟವಾಗುವ ಶ್ರೀಗುರುವಿನ ನಿರುಪಾಧಿಕ ಸ್ವರೂಪವು ಅವನಿಗೆ ನಿತ್ಯವಾಗಿರುತ್ತದೆ. ಜೀವನ್ಮುಕ್ತನು ಜೀವಂತವಾಗಿರುವಾಗ ತಾತ್ಕಾಲಿಕವಾಗಿ ತೋರುವ ಈ ಅನಿತ್ಯ ಪ್ರಪಂಚವು ಅವನು ವಿದೇಹಮುಕ್ತನಾದ ಮೇಲೆ ತೋರುವುದಿಲ್ಲ. ಆ ಸ್ಥಿತಿಯಲ್ಲಿ ಪರಬ್ರಹ್ಮಸ್ವರೂಪನಾದ ಶ್ರೀಗುರುವು ತಾನೇತಾನಾಗಿ ಇರುವನು. ಈ ಅದ್ವಯ ಸ್ಥಿತಿಯಲ್ಲಿ 'ನಾನು', 'ನೀನು', 'ಅವನು' ಮತ್ತು 'ಅದು' ಎಂಬ ಭೇದವಿರುವುದಿಲ್ಲ. ಆದುದರಿಂದ ಶ್ರೀಗುರುವಿಗೆ ಈ ಸ್ಥಿತಿಯಲ್ಲಿ ನಮಸ್ಕಾರವನ್ನು ಸಲ್ಲಿಸುವುದು ಸಾಧ್ಯವಾಗುವುದಿಲ್ಲ. ಆದುದರಿಂದ ಜೀವನ್ಮುಕ್ತ ಸ್ಥಿತಿಯಲ್ಲಿರುವ ಶ್ರೀಗಳು ತಮ್ಮ ಗುರುಗಳಲ್ಲಿ ಐಕ್ಯವನ್ನು ಹೊಂದಿರುವ ಈ ಅದ್ವೈತ ಸ್ಥಿತಿಯಲ್ಲಿ ಅವರ ಪಾದಗಳಿಗೆ ನಿತ್ಯ ಸಲ್ಲಿಸುವ ಪ್ರಣಾಮವಾಗಿರುತ್ತದೆ ಎಂದು ಬರೆದಿದ್ದಾರೆ. ಪ್ರತಿಯೊಂದು ಅಧ್ಯಾಯದಲ್ಲಿ ತಮ್ಮ ಗುರುಗಳಿಗೆ ಇದೇ ರೀತಿ.ವಂದನೆಗಳನ್ನು ಸಲ್ಲಿಸಿರುತ್ತಾರೆ. ಈ ಅಧ್ಯಾಯದಲ್ಲಿ ಈ ಓವೀಯೇ ತಮ್ಮ ಗುರುಗಳಿಗೆ ವಂದನೆಗಾಗಿ ಇರುವ ಓವೀಗಳಲ್ಲಿಯೇ ಕಡೆಯದಾಗಿರುತ್ತದೆ.

**ಓ.ಸಂ. 7 :** ಹಿಂದಿನ ಅಧ್ಯಾಯದಲ್ಲಿ ಶಿಷ್ಯನು ಗುರುಗಳನ್ನು ನಿಷ್ಕಾಮಕರ್ಮದ ಲಕ್ಷಣಗಳನ್ನು ವಿವರಿಸುವಂತೆ ಕೇಳಿಕೊಂಡಿದ್ದನು. ಅವನು ಅತ್ಯಂತ ಯೋಗ್ಯವಾದ ಪ್ರಶ್ನೆಯನ್ನೇ ಕೇಳಿರುತ್ತಾನೆ ಎಂದು ಗುರುವು ತಿಳಿಸಿರುತ್ತಾನೆ.

**ವಿವರಣೆ :** ಹಿಂದಿನ ಅಧ್ಯಾಯವು ಜ್ಞಾನ ಸಂಪಾದನೆಗೆ ಯೋಗ್ಯತೆಯನ್ನು ಪಡೆಯಲು ವಿವೇಕ, ವೈರಾಗ್ಯ, ಶಮ–ದಮಾದಿಷಟ್ಕ ಮತ್ತು ಮುಮುಕ್ಷುತ್ವಗಳೆಂಬ ಸಾಧನ ಚತುಷ್ಟಯಗಳನ್ನು ವಿವರಿಸಲಾಗಿತ್ತು. ಈ ಸಾಧನೆಗಳ ಪ್ರಾಪ್ತಿಯಿಂದ ಮಾತ್ರವೇ ಚಿತ್ತಶುದ್ಧಿಯು ಉಂಟಾಗುತ್ತದೆ ಮತ್ತು ಈ ಚಿತ್ತಶುದ್ಧಿ ಹಾಗೂ ಚಿತ್ತದ ಏಕಾಗ್ರತೆ ಇಲ್ಲದೇ ಸಾಧಕನಿಗೆ ಗುರುಗಳ ಸಮ್ಮುಖದಲ್ಲಿ ಶ್ರವಣ–ಮನನಾದಿ ಅಂತರಂಗ ಸಾಧನೆಗಳನ್ನು ಕೈಕೊಳ್ಳುವುದು ಸಾಧ್ಯವಿಲ್ಲ. ಈ ಅಂತರಂಗ ಸಾಧನೆಗಳಿಲ್ಲದೇ ಬ್ರಹ್ಮಾತ್ಮೈಕ್ಯ ಜ್ಞಾನ ಉಂಟಾಗುವಂತಿಲ್ಲ. ಈ ಜ್ಞಾನ ಉಂಟಾಗದೇ ಮೋಕ್ಷ ಸಿಗುವಂತಿಲ್ಲ. ಆದುದರಿಂದ ಶಿಷ್ಯನಿಗೆ ಗುರುಗಳು ಮೊದಲು ಸಾಧನ ಚತುಷ್ಟಯ ಸಂಪನ್ನನಾಗಲು ಹೇಳುತ್ತಾರೆ. ಆದರೆ ಈ ಸಾಧನಗಳು ಅವಗತವಾಗಲು ನಿಷ್ಕಾಮಕರ್ಮಗಳಿಂದ ಚಿತ್ತಶುದ್ಧಿಯನ್ನೂ ಹಾಗೂ ಉಪಾಸನೆಗಳಿಂದ ಚಿತ್ತದ ಏಕಾಗ್ರತೆಯನ್ನೂ ಪಡೆಯಬೇಕಾಗುತ್ತದೆ ಎಂದೂ ಗುರುಗಳು ತಿಳಿಸಿದ್ದರು. ಆದುದರಿಂದ ಶಿಷ್ಯನು ನಿಷ್ಕಾಮಕರ್ಮಗಳು ಯಾವುವು ಎಂದು ಕೇಳಿದ ಪ್ರಶ್ನೆಯು ಅತ್ಯಂತ ಯೋಗ್ಯವಾಗಿರುತ್ತದೆ ಎಂದು ಗುರುಗಳು ಅವನನ್ನು ಶ್ಲಾಘಿಸಿದ್ದಾರೆ. ಅಧ್ಯಾಯದ ವಿಷಯವು ಈ ಓವೀಯಿಂದ ಪ್ರಾರಂಭವಾಗುತ್ತದೆ.

**ಓ.ಸಂ.8 :** ಗುರುಗಳು ಶಿಷ್ಯನಿಗೆ ತಮ್ಮ ಮಾತನ್ನು ಮನಸ್ಸಿಟ್ಟು ಕೇಳಲು ಹೇಳುತ್ತಿದ್ದಾರೆ. ಏಕೆಂದರೆ ಅವರು ಅವನ ಪ್ರಶ್ನೆಗೆ ಅವನಿಗೆ ತಿಳಿಯುವ ಹಾಗೆ ಉತ್ತರವನ್ನು ಹೇಳುತ್ತೇನೆ ಎಂದು ತಿಳಿಸಿದ್ದಾರೆ.

ಅದಕ್ಕೆ ಶ್ರೀಗಳು ಒಪ್ಪಿಕೊಂಡು ಈ ಪ್ರಶ್ನೆಗೆ ಉತ್ತರವನ್ನು ಹೇಳುತ್ತೇನೆ ಎಂದು ತಿಳಿಸಿದ್ದಾರೆ. ಗುರುಗಳು ಶಿಷ್ಯನಿಗೆ ಅವರು ಹೇಳುವುದನ್ನು ಅವನು ತನ್ನ ಮನಸ್ಸನ್ನೇ ಕಿವಿಯಾಗಿಸಿ ಶ್ರವಣಮಾಡಬೇಕೆಂದು ತಿಳಿಸಿದ್ದಾರೆ. ಇದರ ಅರ್ಥವು ಹೀಗಿರುತ್ತದೆ : ಶಿಷ್ಯನ ಕಿವಿಗಳು ಯಾಂತ್ರಿಕವಾಗಿ ಗುರುಗಳ ಪ್ರವಚನವನ್ನು ಕೇಳುತ್ತಿರುತ್ತವೆಯಾದರೂ ಮನಸ್ಸು ಚಂಚಲ ಸ್ವಭಾವದ್ದಾಗಿರುತ್ತದೆ. ಶಿಷ್ಯನಿಗೆ ವೇದಾಂತ ವಿಷಯವು ಆಸಕ್ತಿಯಿದ್ದರೆ ಮಾತ್ರ ಅವನು ತನ್ನ ಮನಸ್ಸನ್ನು ಗುರುಗಳ ಪ್ರವಚನದ ಮೇಲೆ ಗಮನವಿಡುತ್ತಾನೆ. ಇಲ್ಲದಿದ್ದರೆ ಅದು ರುಚಿಸುವ ಕಡೆ ಹೋಗಬಹುದಾದ್ದರಿಂದ ಗುರುಗಳು ಅದನ್ನು ತಪ್ಪಿಸಲು, ಮನಸ್ಸು ಕಿವಿಗೋಳಗಳ ಮೂಲಕವೇ ಹರಿದು ಅವುಗಳ ವಿಷಯವನ್ನೇ ತಮ್ಮ ವಿಷಯ ಮಾಡಿಕೊಂಡು ಸರಿಯಾಗಿ ಗ್ರಹಿಸಬೇಕೆಂದು ಅವನಿಗೆ ತಿಳಿಸಿದ್ದಾರೆ. ಅಂದರೆ ಅವನು ಮನಸ್ಸಿಟ್ಟು ಅವರ ಪ್ರವಚನವನ್ನು ಕೇಳಬೇಕೆಂದು ಅರ್ಥವಾಗುತ್ತದೆ.

**ಓ.ಸಂ.9 :** ದೇಹ, ಇಂದ್ರಿಯಗಳು ಮತ್ತು ಮನಸ್ಸು – ಇವುಗಳ ಕ್ರಿಯೆಗಳಿಗೆ ಕರ್ಮಗಳೆನ್ನುತ್ತಾರೆ. ಈ ಕರ್ಮಗಳನ್ನು ಮುಖ್ಯವಾಗಿ ಮೂರುಭಾಗಗಳನ್ನಾಗಿ ಮಾಡುತ್ತಾರೆ.

**ವಿವರಣೆ :** ಯಾವುದೇ ಮನುಷ್ಯನು ತನ್ನನ್ನು ತಾನು 'ನಾನು' ಎಂದು ಗುರುತಿಸಿಕೊಳ್ಳುವುದು ತನ್ನ ದೇಹ, ಇಂದ್ರಿಯಗಳು ಹಾಗೂ ಮನಸ್ಸುಗಳಿಗೆ ಮಾತ್ರವಾಗಿರುತ್ತದೆ. ಅವುಗಳ ಒಂದೊಂದರ ಕ್ರಿಯೆಯಾಗಲೀ ಅಥವಾ ಯಾವುದಾದರೂ ಎರಡು ಅಥವಾ ಮೂರು ಸೇರಿ ಮಾಡುವ ಕ್ರಿಯೆಗಳನ್ನು ತನ್ನ ಕ್ರಿಯೆಗಳೆಂದು ಹೇಳುತ್ತಾರೆ. ಮನಸ್ಸಿನ ಪಾತ್ರವಿಲ್ಲದೇ ಕೇವಲ ಇಂದ್ರಿಯಗಳ ಕ್ರಿಯೆಗಳಿಗೆ ಅರ್ಥವಿಲ್ಲವಾದರೂ ಇಂದ್ರಿಯಗಳ ಸೆಳೆತದಿಂದ ಅವು ಮೊದಲು ಪ್ರಚೋದನೆಗೊಂಡು ನಂತರ ಮನಸ್ಸು ಅದರಲ್ಲಿ ಪ್ರವೃತ್ತವಾಗುವುದು ರೂಢಿಯಾಗಿರುತ್ತದೆ. ಮನಸ್ಸಿನ ಕ್ರಿಯೆಯಿಲ್ಲದೇ ಯಾವುದೇ ಅರ್ಥವತ್ತಾದ ಕ್ರಿಯೆಯು ನಡೆಯುವುದಿಲ್ಲ. ಸಾಮಾನ್ಯವಾಗಿ ಎಲ್ಲ ಕ್ರಿಯೆಗಳಲ್ಲೂ ದೇಹೇಂದ್ರಿಯ ಮನಸ್ಸುಗಳು ಭಾಗವಹಿಸಿರುತ್ತವೆ. ದೇಹವು ಅತ್ತಲಿತ್ತ ಚಲಿಸುವ (ದೇಹಕ್ರಿಯೆ) ಅನೇಕ ಇಂದ್ರಿಯಗಳ ಕ್ರಿಯೆಗಳಿಗೆ ಮನೋವೃತ್ತಿಗಳು (ಮನಸ್ಸಿನ ಕ್ರಿಯೆಗಳು) ಸೇರಿದಾಗಲೇ ನೋಡುವ, ಕೇಳುವ, ಮುಂತಾದ ಕ್ರಿಯೆಗಳು ಸಂಪೂರ್ಣವಾಗುತ್ತವೆ. ಈ ಸಕಲ ಕ್ರಿಯೆಗಳಿಗೆ ಕರ್ಮಗಳೆನ್ನುತ್ತಾರೆ. ಈ ಕರ್ಮಗಳನ್ನು ಮುಖ್ಯವಾಗಿ ಮೂರುಭಾಗಗಳನ್ನಾಗಿ ವಿಂಗಡಿಸುತ್ತಾರೆ. ಈ ಒಂದೊಂದು ವಿಭಾಗದ ವಿವರಣೆಯನ್ನು ಮುಂದಿನ ಓವೀಗಳು ಕೊಡುತ್ತವೆ.

**ಓ.ಸಂ.10 :** ವಿಹಿತ, ಅವಿಹಿತ ಮತ್ತು ಉದಾಸೀನ ಕರ್ಮಗಳೇ ಕರ್ಮಗಳಲ್ಲಿರುವ ಮೂರು ಮುಖ್ಯ ಭಾಗಗಳು ಆಗಿರುತ್ತವೆ. ಉದಾಸೀನ ಕರ್ಮಗಳಿಗೆ ಯಾವ ಫಲವೂ ಇರುವುದಿಲ್ಲ. ವಿಹಿತ ಕರ್ಮಗಳಿಗೆ ಪ್ರಧಾನವಾಗಿ ಪೂರ್ಣ ಚಿತ್ತಶುದ್ಧಿಯೇ ಫಲವಾಗಿರುತ್ತದೆ.

**ವಿವರಣೆ :** ಹಿಂದಿನ ಓವೀಯಲ್ಲಿ ಕರ್ಮಗಳಲ್ಲಿ ಮೂರು ವಿಧಗಳಿರುವುದಾಗಿ ತಿಳಿಸಲಾಗಿತ್ತು. ಈ ಓವೀಯಿಂದ ಈ ಮೂರು ವಿಧದ ಕರ್ಮಗಳ ವಿವರಣೆಯು ಪ್ರಾರಂಭವಾಗಿದೆ. ಕರ್ಮಗಳಲ್ಲಿ ವಿಹಿತ, ಅವಿಹಿತ ಮತ್ತು ಉದಾಸೀನವೆಂಬ ಮೂರು ಭಾಗಗಳನ್ನು ಸ್ಥೂಲವಾಗಿ ಮಾಡಬಹುದು. ಈ ಮುಖ್ಯವಾದ ಮೂರು ಭಾಗಗಳಲ್ಲಿ ಕೊನೆಯದಾದ 'ಉದಾಸೀನ' ಕರ್ಮಗಳನ್ನು ಮಾಡಿದರೂ ಅವುಗಳಿಗೆ ಫಲವಿರುವುದಿಲ್ಲ. ಉದಾಸೀನ ಭಾವದಿಂದ ಯಾವುದೇ ಕರ್ಮಮಾಡಿದರೂ ಅದಕ್ಕೆ ಯಾವುದೇ ಫಲವಿರುವುದಿಲ್ಲ. ಆದರೆ 'ವಿಹಿತ' ವೆಂಬ ಕರ್ಮಗಳನ್ನು ಮಾಡಿದಾಗ ಪ್ರಧಾನವಾಗಿ ಅವುಗಳಿಗೆ ಪೂರ್ಣ ಚಿತ್ತಶುದ್ಧಿಯೇ ಲಭಿಸುತ್ತದೆ. ಅಂದರೆ ಇಂತಹ ಕರ್ಮಗಳ ಆಚರಣೆಯಿಂದ ಜ್ಞಾನಪ್ರಾಪ್ತ್ಯರ್ಥಯೋಗ್ಯ ಸಾಮರ್ಥ್ಯವು ಉಂಟಾಗುತ್ತದೆ. ಅಂದರೆ ಶ್ರವಣ–ಮನನಗಳಲ್ಲಿ ಆಸಕ್ತಿ ಉಂಟಾಗುತ್ತದೆ. ಈ ಕರ್ಮಾಚರಣೆಯಿಂದ ಬರುವ ಬೇರೆ ಫಲವನ್ನು ಮುಂದಿನ ಓವೀಗಳಲ್ಲಿ ವಿವರಿಸಲಾಗಿದೆ.

**ಓ.ಸಂ.11 :** ವಿಹಿತ ಕರ್ಮಗಳ ಆಚರಣೆಗೆ ಕನಿಷ್ಠ ಫಲವು ಇಹಲೋಕದ ಮತ್ತು ಸ್ವರ್ಗಾದಿ ಪರಲೋಕಗಳನ್ನು ಪಡೆಯುವುದೇ ಆಗಿರುತ್ತದೆ. ಅವಿಹಿತ ಕರ್ಮಗಳಿಗೆ ನರಕವಾಸದ ಪ್ರಾಪ್ತಿಯಾಗುತ್ತದೆ. ವಿಹಿತಕರ್ಮಗಳಲ್ಲಿ ಎರಡು ಭಾಗಗಳಿದ್ದು ಅವುಗಳಿಗೆ ಭಿನ್ನಭಿನ್ನ ಫಲಗಳಿರುತ್ತವೆ.

**ವಿವರಣೆ :** ಹಿಂದಿನ ಓವೀಯಲ್ಲಿ ವಿಹಿತಕರ್ಮಗಳಿಗೆ ಪ್ರಧಾನವಾಗಿ ಚಿತ್ತಶುದ್ಧಿಯೇ ಫಲವಾಗಿರುತ್ತದೆ ಎಂದು ತಿಳಿಸಲಾಗಿದೆ. ಈ ಓವೀಯಲ್ಲಿ ವಿಹಿತಕರ್ಮಗಳ ಆಚರಣೆಯಿಂದ ಇಹಲೋಕದಲ್ಲಿ ಸ್ವರ್ಗಾದಿ ಅನೇಕ ಪರಲೋಕಗಳಲ್ಲಿ ಕನಿಷ್ಠಫಲವಾದ ಸುಖವು ಪ್ರಾಪ್ತವಾಗುತ್ತದೆ. ಹೀಗೆ ಒಂದೇ ಕರ್ಮಕ್ಕೆ ಮುಖ್ಯ ಗೌಣ ಫಲಗಳು ಬರಲು ಕಾರಣವನ್ನು ಮುಂದೆ ವಿವರಿಸಲಾಗುವುದು. ಯಾವುದು ವಿಹಿತವಲ್ಲವೋ ಅವುಗಳೆಲ್ಲವೂ ಅವಿಹಿತ ಕರ್ಮಗಳಾಗಿವೆ. ಈ ಅವಿಹಿತಕರ್ಮಗಳಿಗೆ ನರಕವಾಸ ಮತ್ತು ಕೀಳುಯೋನಿಗಳಲ್ಲಿ ಜನ್ಮವೆತ್ತುವುದು ಮುಂತಾದ ದುಃಖಕಾರಕ ಫಲವು ಪ್ರಾಪ್ತಿಯಾಗಿರುತ್ತದೆ. ವಿಹಿತಕರ್ಮಗಳಲ್ಲಿ ಎರಡು ವಿಭಾಗಗಳಿದ್ದು ಅವುಗಳಿಗೆ ಫಲಗಳೂ ಕೂಡ ಭಿನ್ನಭಿನ್ನವಾಗಿದ್ದು ಅವುಗಳ ವಿವರಗಳು ಮುಂದಿನ ಓವೀಗಳಲ್ಲಿ ತಿಳಿದು ಬರುತ್ತದೆ.

**ಓ.ಸಂ.12 :** ಆಯಾ ವರ್ಣ ಮತ್ತು ಆಶ್ರಮಗಳಿಗೆ ತಕ್ಕಂತೆ ಪ್ರತಿಯೊಬ್ಬ ಮನುಷ್ಯನಿಗೆ ಯಾವ ಕರ್ಮಗಳನ್ನು ವೇದಗಳು ನಿಯೋಜಿಸಿವೆಯೋ ಆ ಕರ್ಮಗಳಿಗೆ ವಿಹಿತಕರ್ಮಗಳೆಂದು ಹೆಸರು.

**ವಿವರಣೆ :** ಈ ಓವೀಯಲ್ಲಿ 'ವಿಹಿತ' ಕರ್ಮಗಳ ವ್ಯಾಖ್ಯೆಯನ್ನು ಕೊಡಲಾಗಿದೆ. ಪ್ರತಿಯೊಬ್ಬ ವ್ಯಕ್ತಿಯೂ ಹುಟ್ಟುವಾಗ ತನ್ನ ಹಿಂದಿನ ಜನ್ಮದ ವಾಸನೆಗಳನ್ನು ಅಥವಾ ಸಂಸ್ಕಾರಗಳನ್ನು ಅವನ ಪ್ರವೃತ್ತಿ ರೂಪದಲ್ಲಿ ಪಡೆದು ಹುಟ್ಟುತ್ತಾನೆ. ಹುಟ್ಟಿದ ಮೇಲೆ ಈ ಪ್ರವೃತ್ತಿಯು ಅವನಲ್ಲಿ ವಿಶಿಷ್ಟವಾದ ಸತ್ವ–ರಜ–ತಮೋ ಗುಣಗಳ ಮಿಶ್ರಣವಾಗಿ ಕಾಣುತ್ತದೆ. ಇದಕ್ಕನುಗುಣವಾಗಿಯೇ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ–ಶೂದ್ರವೆಂಬ ನಾಲ್ಕು

ವರ್ಣಗಳಲ್ಲಿ ಯಾವುದೋ (ಒಂದು) ವರ್ಣದಲ್ಲಿ ಹುಟ್ಟುತ್ತಾನೆ. ಅವನು ಬೆಳೆದಂತೆಲ್ಲ ಬ್ರಹ್ಮಚರ್ಯ-ಗೃಹಸ್ಥ-ವಾನಪ್ರಸ್ಥ ಮತ್ತು ಸಂನ್ಯಾಸಗಳೆಂಬ ಆಶ್ರಮಗಳನ್ನು ದಾಟಿ ಹೋಗಬೇಕಾಗುತ್ತದೆ. ಹೀಗೆ ಪ್ರತಿಯೊಂದು ಘಟ್ಟದಲ್ಲೂ ಅವನ ವರ್ಣ ಹಾಗೂ ಆಶ್ರಮಗಳಿಗನುಗುಣವಾಗಿ ವೇದಗಳು ಅವನು ಮಾಡಬೇಕಾದ ಕರ್ಮಗಳನ್ನು ತಿಳಿಸಿರುತ್ತವೆ. ಈ ಕರ್ಮಗಳೇ ಅವನು ಮಾಡಬೇಕಾದ 'ವಿಹಿತ' ಕರ್ಮಗಳಾಗಿವೆ. ಹೀಗೆ ತಿಳಿಸದೇ ಇರುವ ಕರ್ಮಗಳು ಅವನಿಗೆ 'ಅವಿಹಿತ' ಕರ್ಮವಾಗುತ್ತವೆ. ವೇದಗಳು 'ಪ್ರಭುಸಂಹಿತೆ'ಗಳಾದ್ದರಿಂದ ವೇದಗಳ ಆಜ್ಞೆಯನ್ನು ಯಾವಕಾಲಕ್ಕೂ ತಪ್ಪಿ ನಡೆಯಬಾರದು.

<u>ಓ.ಸಂ.13 :</u> 'ವಿಹಿತ'ಕರ್ಮಗಳಲ್ಲಿ 'ಸಕಾಮ' ಮತ್ತು 'ನಿಷ್ಕಾಮ'ಗಳೆಂದು ಎರಡು ಮುಖ್ಯ ವಿಭಾಗಗಳಿವೆ. 'ಸಕಾಮ' ಕರ್ಮಗಳೆಂದರೆ ಯಾವುದಾದರೂ ಫಲವನ್ನು ಪಡೆಯುವುದಕ್ಕಾಗಿ ಮಾಡುವ ಕರ್ಮಗಳಾಗಿವೆ.

<u>ವಿವರಣೆ :</u> ಹಿಂದಿನ ಓವೀಯಲ್ಲಿ ಶಾಸ್ತ್ರೋಕ್ತವಾದ ಕರ್ಮಗಳನ್ನು 'ವಿಹಿತ' ವೆಂದು ಅದರ ವ್ಯಾಖ್ಯೆಯನ್ನು ತಿಳಿಸಲಾಗಿದೆ. ಈ ಓವೀಯಲ್ಲಿ 'ವಿಹಿತ' ಕರ್ಮದ ಎರಡು ವಿಭಾಗಗಳಾದ ಸಕಾಮ ಮತ್ತು ನಿಷ್ಕಾಮ ಕರ್ಮಗಳಲ್ಲಿ ಸಕಾಮ ಕರ್ಮದ ವ್ಯಾಖ್ಯೆಯನ್ನು ತಿಳಿಸಲಾಗಿದೆ. ಸಾಮಾನ್ಯ ಮನುಷ್ಯನಿಗೆ ವಿಷಯ ಸುಖಗಳಲ್ಲಿ ಮೋಹವು ಸಹಜವಾಗಿದ್ದು ಇದರ ಪರಿಣಾಮವಾಗಿ ಅವನಿಗೆ ಅನೇಕ ಕೌಟಂಬಿಕ ಸಮಸ್ಯೆಗಳು ಸಹಜವಾಗಿರುತ್ತವೆ. ಇಂತಹವರಿಗೆ ಫಲಾಪೇಕ್ಷೆ ಇಲ್ಲದೇ ಮಾಡುವ ಕರ್ಮಗಳ ಆಚರಣೆಯು ಕಷ್ಟವಾಗಿರುತ್ತದೆ. ಇಂತಹವರಿಗಾಗಿ ವೇದವು ಅನೇಕ ಸಮಸ್ಯೆಗಳನ್ನು ಈಡೇರಿಸಿಕೊಳ್ಳಲು ವಿವಿಧ ಕರ್ಮಗಳನ್ನು ಆಚರಿಸಲು ತಿಳಿಸಿದೆ. ಇವುಗಳಿಗೆ 'ಸಕಾಮ' ಕರ್ಮಗಳೆಂದು ಕರೆಯುತ್ತಾರೆ. ಇಲ್ಲಿ 'ಕಾಮ'ವೆಂದರೆ ಫಲಾಪೇಕ್ಷೆಯಾಗಿದೆ. 'ಸಕಾಮ'ಕರ್ಮವೆಂದರೆ ಫಲಾಪೇಕ್ಷೆಸಹಿತ ಮಾಡುವ ಕರ್ಮವು ಆಗಿರುತ್ತದೆ.

<u>ಓ.ಸಂ.14 :</u> 'ಪುತ್ರಕಾಮೇಷ್ಟಿ' ಎಂಬ ಯಾಗವನ್ನು ಯಾರಿಗೆ ಪುತ್ರನನ್ನು ಪಡೆಯುವ ಇಚ್ಛೆಯಿದೆಯೋ ಅವರು ಮಾಡುತ್ತಾರೆ. ಹಾಗೆಯೇ 'ರಾಜಸೂಯ' ಎಂಬ ಯಾಗವನ್ನು ಕ್ಷತ್ರಿಯರು ಸ್ವರ್ಗಕ್ಕಾಗಿ ಮಾಡುತ್ತಾರೆ.

<u>ವಿವರಣೆ :</u> ಹಿಂದಿನ ಓವೀಯಲ್ಲಿ 'ಸಕಾಮ' ಕರ್ಮದ ವ್ಯಾಖ್ಯೆಯನ್ನು ಕೊಡಲಾಗಿದೆ. ಈ ಓವೀಯಲ್ಲಿ ಎರಡು ಉದಾಹರಣೆಗಳ ಮೂಲಕ ಸಕಾಮ ಕರ್ಮಗಳನ್ನು ವಿವರಿಸಲಾಗಿದೆ. 'ಸಕಾಮ ಕರ್ಮ' ವಾಗಿರುವ ಪುತ್ರಕಾಮೇಷ್ಟಿ ಯಾಗವನ್ನು ಪುತ್ರಾಪೇಕ್ಷೆಯಿಂದ ಮಾಡುತ್ತಾರೆ. "ಅಪುತ್ರಸ್ಯ ಗತಿರ್ನಾಸ್ತಿ" – (ಮಹಾಸುಭಾಷಿತ ಸಂಗ್ರಹ, ಸರಣಿ ಸಂಖ್ಯೆ:2090) ಎನ್ನುವ ಶಾಸ್ತ್ರೋಕ್ತಿಯಂತೆ ಪುತ್ರ ಸಂತಾನವಿಲ್ಲದವನಿಗೆ ದೇಹಾಂತವಾದ ಮೇಲೆ ಸ್ವರ್ಗ ಮುಂತಾದ ದೇವಲೋಕಗಳಿಗೆ ಹೋಗುವ ಅಧಿಕಾರವಿರುವುದಿಲ್ಲ. ಏಕೆಂದರೆ ಪುತ್ರಾದಿಗಳಿಲ್ಲದಂತಹವರಿಗೆ ಶ್ರಾದ್ಧಾದಿಗಳು ಸಾಧ್ಯವಿಲ್ಲ. ದಶರಥನು ಪುತ್ರಕಾಮೇಷ್ಟಿ ಯಾಗವನ್ನು ಮಾಡಿದ ಮೇಲೆಯೇ ಅವನಿಗೆ ಶ್ರೀರಾಮ-ಲಕ್ಷ್ಮಣಾದಿಗಳು ಹುಟ್ಟಿದರು. ಇದೇ ರೀತಿ 'ರಾಜಸೂಯಯಾಗ'ವನ್ನು

ಕ್ಷತ್ರಿಯರು ಮಾಡುವ ರೂಢಿ ಇದೆ. ಧರ್ಮರಾಯ ಹಾಗೂ ಶ್ರೀರಾಮಚಂದ್ರರು ರಾಜಸೂಯ ಯಾಗವನ್ನು ಸ್ವರ್ಗಪ್ರಾಪ್ತಿಯ ಸಲುವಾಗಿ ಮಾಡಿದ ಉಲ್ಲೇಖವಿದೆ. ರಾಜ-ಮಹಾರಾಜರು ಮಾತ್ರ ಈ ಯಾಗವನ್ನು ಮಾಡುವ ರೂಢಿ ಇದೆ. ಏಕೆಂದರೆ ಇದನ್ನು ಮಾಡಲು ಬೇಕಾಗುವ ಅತೀವ ಖರ್ಚನ್ನು ಸಾಮಾನ್ಯರು ಮಾಡುವುದು ಕಷ್ಟಸಾಧ್ಯ. ನೂರು ರಾಜಸೂಯ ಯಾಗವನ್ನು ಮಾಡಿದವರು ಇಂದ್ರ ಪದವಿಯನ್ನು ಪಡೆಯುತ್ತಾರೆಂದು ಶಾಸ್ತ್ರೋಕ್ತಿ ಇರುತ್ತದೆ.

**ಓ.ಸಂ.15 :** ಈ ಸಕಾಮ ಕರ್ಮಗಳ ಆಚರಣೆಯಿಂದ ಮುಖ್ಯವಾಗಿ ಕಾಮಿತ ಫಲಗಳು ಈಡೇರುತ್ತವೆ ಹಾಗೂ ಗೌಣವಾಗಿರುವ ಚಿತ್ತಶುದ್ಧಿಯ ಫಲವು ಉಂಟಾಗುವುದು.

**ವಿವರಣೆ :** ಸಕಾಮ ಕರ್ಮಗಳ ಆಚರಣೆಯಿಂದ ಹಿಂದಿನ ಓವೀಯಲ್ಲಿ ತಿಳಿಸಿದಂತೆ ಇಚ್ಛಿತ ಫಲವು ಈಡೇರುವುದು. ಇದಲ್ಲದೆ ಗೌಣವಾಗಿ ಈ ಕರ್ಮಕರ್ತನ ಚಿತ್ತಶುದ್ಧಿಯೂ ಕೂಡ ಉಂಟಾಗುತ್ತದೆ. ಆದರೆ ಈ ಗೌಣಫಲವು ಕನಿಷ್ಠ ರೂಪದಲ್ಲಿರುವುದು. ಅಂದರೆ ಸಕಾಮ ಕರ್ತನಿಗೆ ಪೂರ್ಣ ಪ್ರಮಾಣದಲ್ಲಿ ಚಿತ್ತಶುದ್ಧಿಯು ಆಗದೇ ಸ್ವಲ್ಪ ಪ್ರಮಾಣದಲ್ಲಿ ಆಗುವುದು. ಹೇಗೆಂದರೆ ಸಕಾಮ ಕರ್ತನು ಕರ್ಮಾಚರಣೆಯು ಮುಗಿಯುವವರೆಗೆ ಕೆಲವೊಂದು ನಿಯಮಗಳನ್ನು ಕಟ್ಟುನಿಟ್ಟಿನಿಂದ ಪಾಲಿಸಲೇಬೇಕಾಗುವುದು. ಇಲ್ಲದಿದ್ದಲ್ಲಿ ಅವರಿಗೆ ಸರಿಯಾಗಿ ಫಲ ಉಂಟಾಗುವುದಿಲ್ಲ. ಈ ನಿಯಮಗಳು ಜೀವನದ ಮೌಲ್ಯಗಳನ್ನು ನಡವಳಿಕೆಯಲ್ಲಿ ತರುವುದೇ ಆಗಿರುತ್ತದೆ. ಅಲ್ಲದೇ ಬಡ-ಬಗ್ಗರಿಗೆ ದಾನ-ಧರ್ಮವನ್ನು ಮಾಡುವುದು, ಸತ್ಯ ಅಹಿಂಸೆಗಳನ್ನು ಆಚರಿಸುವುದು ಮುಂತಾದವುಗಳು ಸಕಾಮಕರ್ಮಕರ್ತನ ಅಂತಃಕರಣವನ್ನು ಹೆಚ್ಚು ಸಾತ್ವಿಕ ಮಾಡುವುದರಿಂದ ಅವನ ಚಿತ್ತಶುದ್ಧಿಯೂ ಕೂಡ ಹೆಚ್ಚಾಗುತ್ತದೆ.

**ಓ.ಸಂ.16 :** ಸಕಾಮ ಕರ್ಮವನ್ನು ವ್ಯಂಗ(ಭಂಗ)ವಾಗದಂತೆ ಆಚರಿಸಬೇಕು. ಇಲ್ಲದಿದ್ದರೆ ಕರ್ತನಿಗೆ ಫಲ ಉಂಟಾಗದೇ ದುಃಖವೇ ಉಂಟಾಗುವುದು.

**ವಿವರಣೆ :** ಯಾವುದೇ ಸಕಾಮ ಕರ್ಮವು ತನ್ನ ಪೂರ್ಣಫಲವನ್ನು ಕೊಡಬೇಕಾದರೆ ಅದು ಅವ್ಯಂಗವಾಗಿ ಆಚರಿಸಲ್ಪಡಬೇಕು. ಇಲ್ಲಿ 'ವ್ಯಂಗ'ವೆಂದರೆ ಊನವಾಗುವುದು. 'ಅವ್ಯಂಗ'ವೆಂದರೆ ಅದನ್ನು ಮಾಡುವ ಕ್ರಮದಲ್ಲೇ ಮಾಡಬೇಕು. ಆದರೆ ಯಾವುದೇ ಅಂಗವನ್ನು ಆಚರಿಸದೇಬಿಡಬಾರದು. ಅಲ್ಲದೇ ಅದನ್ನು ಶ್ರದ್ಧೆಯಿಂದಲೂ ಪ್ರಾಮಾಣಿಕವಾಗಿಯೂ ಆಚರಿಸಬೇಕು. ಹೀಗೆ ಮಾಡುವುದು ತಪ್ಪಿದಲ್ಲಿ ಉಂಟಾಗಬೇಕಾದ ಫಲವೂ ಉಂಟಾಗುವುದಿಲ್ಲ ಅಲ್ಲದೇ ಅದಕ್ಕೆ ಪ್ರತಿಯಾಗಿ ದುಃಖವು ಉಂಟಾಗುತ್ತದೆ. ಹೀಗೆ ಕರ್ಮಮಾಡಿದ ಮೇಲೆ ಸುಖ ಫಲವು ಉಂಟಾಗುವ ಬದಲು ವಿರುದ್ಧವಾಗಿ ದುಃಖವು ಉಂಟಾಗುವುದು. ಈ ರೀತಿಯ ವಿರುದ್ಧ ಫಲವು ಉಂಟಾಗುವುದಕ್ಕೆ 'ಪ್ರತ್ಯವಾಯ' ದೋಷವೆನ್ನುವರು. ಆದುದರಿಂದ ಯಾವುದೇ ಕರ್ಮವನ್ನು ವ್ಯಂಗವಾಗದಂತೆ ಆಚರಿಸಬೇಕು.

**ಓ.ಸಂ.17 :** ಯಾವುದೇ ಕರ್ಮವನ್ನು ನಿಷ್ಕಾಮವಾಗಿ ಈಶ್ವರಾರ್ಪಣ ಭಾವದಿಂದ ಆಚರಿಸಿದರೆ ಆಗ ಆಕಸ್ಮಾತ್ ವ್ಯಂಗವಾದರೂ ಅದು ಯಾವುದೇ ದೋಷವನ್ನು ಉಂಟುಮಾಡುವುದಿಲ್ಲ.

**ವಿವರಣೆ :** ಆದರೆ ಯಾವುದೇ ಕರ್ಮವನ್ನು ನಿಷ್ಕಾಮಬುದ್ಧಿಯಿಂದ ( ಅಂದರೆ ಅದರ ಫಲವನ್ನು ಅಪೇಕ್ಷಿಸದೇ) ಈಶ್ವರನಿಗೆ ಅರ್ಪಿಸಿದರೆ ( ಅಂದರೆ ಆ ಕರ್ಮವನ್ನು ಈಶ್ವರನ ಸೇವೆಯೆಂದು ಮಾಡಿದರೆ) ಆಗ ಅದರ ಆಚರಣೆಯ ವೇಳೆಯಲ್ಲಿ ಅಕಸ್ಮಾತ್ ಅದು 'ವ್ಯಂಗ'ವಾದರೆ ( ಅಂದರೆ ಅದನ್ನು ಸರಿಯಾದ ಕ್ರಮದಲ್ಲಿ ಮಾಡದಿದ್ದರೆ ಅಥವಾ ಅದರ ಕೆಲವು ಅಂಗಗಳನ್ನು ಆಚರಿಸದೇ ಮರೆತಿದ್ದರೆ) ಆಗ ಅದಕ್ಕೆ ಯಾವ ದೋಷವೂ ಉಂಟಾಗುವುದಿಲ್ಲ. ಅಂದರೆ ಹಿಂದಿನ ಓವೀಯಲ್ಲಿ ತಿಳಿಸಿದಂತೆ ಅದಕ್ಕೆ 'ಪ್ರತ್ಯವಾಯ' ದೋಷವು ಉಂಟಾಗುವುದಿಲ್ಲ ("ಪ್ರತ್ಯವಾಯೋ ನ ವಿದ್ಯತೇ.."–ಭ.ಗೀ.2–40). ಮುಂದಿನ ಅನೇಕ ಓವೀಗಳು ಈ ನಿಷ್ಕಾಮ ಕರ್ಮದ ಹೆಚ್ಚುಗಾರಿಕೆ ಹಾಗೂ ಮಹತ್ವವನ್ನು ಕುರಿತು ವಿವರಿಸುತ್ತವೆ. ಮುಂದಿನ ಓವೀಯು ಈ ಓವೀಯ ಮುಂದುವರೆದ ಭಾಗವಾಗಿದೆ.

**ಓ.ಸಂ.18 :** ನಿಷ್ಕಾಮಕರ್ಮಿಯು ತನ್ನ ಕರ್ಮವನ್ನು ಈಶ್ವರಾರ್ಪಣ ಭಾವದಿಂದ ಮಾಡಿದಾಗ ಅವನಿಗೆ ಚಿತ್ತಶುದ್ಧಿಯಾದರೂ ಈ ಜನ್ಮದಲ್ಲೇ ಜ್ಞಾನವಾಗದಿದ್ದರೆ, ಆಗ ಕರ್ಮದ ಫಲವು ಉಂಟಾಗುತ್ತದೆ.

**ವಿವರಣೆ :** ಇದನ್ನು ಮುಂದುವರೆಸಿ ಈ ಓವೀಯಲ್ಲಿ ಇಂತಹ ನಿಷ್ಕಾಮಕರ್ಮಿಗೆ ಒಂದು ವೇಳೆ ಚಿತ್ತಶುದ್ಧಯಾಗಿಯೂ ಇದೇ ಜನ್ಮದಲ್ಲಿ ಅವನಿಗೆ ಬ್ರಹ್ಮಜ್ಞಾನವು ಲಭಿಸದಿದ್ದರೆ ಆಗ ಅವನಿಗೆ ಆ ಕರ್ಮದಿಂದ ಉಂಟಾಗುವ ಫಲವು ಅವನು ಆ ದೇಹ ಬಿಟ್ಟ ಮೇಲೆ ಸಿಗುವುದು. ಅವನು ಆಚರಿಸಿದ ಪುಣ್ಯಕರ್ಮದಿಂದ, ಅದು ವ್ಯಂಗವಾದರೂ, ಅವನಿಗೆ ಸ್ವರ್ಗವು ಲಭಿಸುವುದಾದರೆ ಅವನಿಗೆ ಅದು ಲಭಿಸುವುದು. ಅಂದರೆ ಕರ್ಮಕ್ಕೆ ಅನುಗುಣವಾಗಿ ಅದು ಲಭಿಸುವುದು. ಇದನ್ನೇ ಮುಂದಿನ ಓವೀಯಲ್ಲಿ ತಿಳಿಸಲಾಗಿದೆ.

**ಓ.ಸಂ.19:** ಸಕಾಮ ಕರ್ಮಿಯು ಯಾವ ಕರ್ಮವನ್ನು ಅವ್ಯಂಗ ರೀತಿಯಲ್ಲಿ ಮಾಡಿದರೆ ಯಾವ ಫಲ ಸಿಗುತ್ತದೋ ಅದೇ ಫಲವು ನಿಷ್ಕಾಮ ಕರ್ಮಿಗೆ ಅದೇ ಕರ್ಮವನ್ನು ವ್ಯಂಗರೀತಿಯಲ್ಲಿ ಮಾಡಿದರೂ ಸಿಗುತ್ತದೆ.

**ವಿವರಣೆ:** ಈ ಓವೀಯು ಹಿಂದಿನ ಓವೀಯ ವಿಷಯವನ್ನೇ ಒಳಗೊಂಡಿದೆ. ಸಕಾಮಕರ್ಮಿಯು ಶಾಸ್ತ್ರೋಕ್ತ ಕರ್ಮಗಳನ್ನು ಮಾಡುವ ಕ್ರಮವನ್ನರಿತು ಅದರ ಯಾವುದೇ ಅಂಗಗಳಿಗೆ ಚ್ಯುತಿ ಬರದಂತೆ (ಅವ್ಯಂಗ) ಮಾಡಬೇಕು. ತನಗೆ ಮಾಡಲು ಬಾರದಿದ್ದರೆ ಬಂದವರ ಕೈಯಲ್ಲಿ ಮಾಡಿಸಬಹುದು. ಆದರೆ ನಿಷ್ಕಾಮ ಕರ್ಮಿಯು, ಅಂದರೆ ಅದೇ ಕರ್ಮವನ್ನು ಫಲಾಪೇಕ್ಷೆಯಿಲ್ಲದೇ ಮಾಡುವವನು, ಈಶ್ವರನ ಸೇವೆಯೆಂದು

ಅವನಿಗೆ ಅರ್ಪಿಸಿ ಮಾಡಿದಾಗ ಅದು ವ್ಯಂಗವಾದರೂ, ಅಂದರೆ ಅದನ್ನು ಮಾಡುವಾಗ ಅದರ ಅಂಗಗಳಿಗೆ ಒಂದುವೇಳೆ ಚ್ಯುತಿ ಬಂದರೂ ಕೂಡ, ಸಕಾಮಿಗಳಿಗೆ ಆ ಕರ್ಮವನ್ನು ಅವ್ಯಂಗ ಮಾಡಿದಾಗ ಬಂದ ಫಲವೇ ಅವನಿಗೂ ಬರುತ್ತದೆ. ಆದರೆ ಸಕಾಮಿಯ ಕರ್ಮವು ವ್ಯಂಗವಾದರೆ ಅದಕ್ಕೆ ವಿರುದ್ಧ ಫಲವೇ, ಅಂದರೆ ದುಃಖವೇ ಬರುತ್ತದೆ.

ಓ.ಸಂ.20: ನಿಷ್ಕಾಮ ಕರ್ಮಿಗೆ ಒಂದುವೇಳೆ ಚಿತ್ತಶುದ್ಧಿಯಾದರೂ ಜ್ಞಾನ ಬರದಿದ್ದಲ್ಲಿ ಮುಂದಿನ ಜನ್ಮದಲ್ಲಿ ಅವನಿಗೆ ಹುಟ್ಟುತ್ತಲೇ ಚಿತ್ತಶುದ್ಧಿಯುಳ್ಳವನಾಗಿ ಮುಂದೆ ಗುರುಕೃಪೆಯಿಂದ ಬ್ರಹ್ಮಾತ್ಮೈಕ್ಯ ಜ್ಞಾನವನ್ನು ಪಡೆದು ಮುಕ್ತನಾಗುತ್ತಾನೆ.

ವಿವರಣೆ: ಎಷ್ಟೋ ಧಾರ್ಮಿಕ ಜನರು ಈಶ್ವರನ ಉಪಾಸನೆ ಮಾಡುತ್ತಾರೆ. ಅವರು ತಮ್ಮ ಸರ್ವಸ್ವವನ್ನೂ ಈಶ್ವರನಿಗೆ ಅರ್ಪಣೆ ಮಾಡಿ ಚಿತ್ತಶುದ್ಧರಾಗುತ್ತಾರೆ. ಅಂತಹ ಕೆಲವರಿಗೆ ಸತ್ಸಂಗವಾಗಲೀ ಅಥವಾ ಸಮರ್ಥಗುರುಗಳಾಗಲೀ ಸಿಗುವುದಿಲ್ಲ. ಆದ್ದರಿಂದ ಅವರಿಗೆ ಈ ಜನ್ಮದಲ್ಲಿ ಬ್ರಹ್ಮಜ್ಞಾನವಾಗುವಂತಿಲ್ಲ. ಇನ್ನು ಕೆಲವರಿಗೆ ಚಿತ್ತಶುದ್ಧಿಯನ್ನು ಹೊಂದಿ ಗುರುಗಳ ಆಶ್ರಯವು ಸಿಕ್ಕರೂ ಜ್ಞಾನಸಾಧನೆಯು ಪೂರ್ಣ ಆಗದೇ, ಅಂದರೆ ಬ್ರಹ್ಮಾತ್ಮೈಕ್ಯ ಜ್ಞಾನ ಸಿಗದೇ, ಅವರು ದೇಹವನ್ನು ತ್ಯಾಗ ಮಾಡಬಹುದು. ಅಂತಹವರು ಮುಂದಿನ ಜನ್ಮದಲ್ಲಿ ಹುಟ್ಟುತ್ತಲೇ ಚಿತ್ತಶುದ್ಧಿಯನ್ನು ಹೊಂದಿದವರಾಗಿರುತ್ತಾರೆ (ನೇಹಾಭಿಕ್ರಮನಾ ಶೋಸ್ತಿ–ಭ.ಗೀ.2–40). ಅವರಿಗೆ ಸದ್ಗುರುವೂ ಸಿಕ್ಕು, ಅವನ ಕೃಪೆಯಿಂದ, ಬ್ರಹ್ಮಜ್ಞಾನವನ್ನು ಪಡೆದು ಮುಕ್ತರಾಗುತ್ತಾರೆ.

ಓ.ಸಂ.21: ವ್ಯವಹಾರಿಯೊಬ್ಬನು ದೃಷ್ಟಾಂತ ಒಂದರಲ್ಲಿ ಸಂಬಳಕ್ಕಾಗಿ ನೌಕರಿ ಮಾಡುತ್ತಿರುತ್ತಾನೆ. ಆಗ ಅವನು ಕೆಲಸದಲ್ಲಿ ಸ್ವಲ್ಪ ತಪ್ಪಿದರೂ ಅವನಿಗೆ ಸಂಬಳವು ಸಿಕ್ಕುವುದಿಲ್ಲ.

ವಿವರಣೆ: ಸಕಾಮ ಕರ್ಮಿಠನು ಮಾಡುವ ಅವ್ಯಂಗ ಕರ್ಮವು ಸುಖಫಲವನ್ನು ಕೊಡದೇ ದುಃಖಫಲವನ್ನೇ ಕೊಡುತ್ತದೆ ಎಂಬ ಧಾರ್ಮಿಕ ಸಂಗತಿಯು ಶಾಸ್ತ್ರೋಕ್ತಿಯಾದುದರಿಂದ ಅದರಲ್ಲಿ ನಂಬಿಕೆಯು ಅವಶ್ಯವಾಗಿರುತ್ತದೆ. ಆದ್ದರಿಂದ ಇಲ್ಲಿ ಒಂದು ವ್ಯಾವಹಾರಿಕ ದೃಷ್ಟಾಂತವನ್ನು ಕೊಡಲಾಗಿದೆ. ಇದರಿಂದ ನಮ್ಮ ಧಾರ್ಮಿಕ ನಂಬಿಕೆಯು ಬಲಗೊಳ್ಳುತ್ತದೆ. ಒಬ್ಬ ಯಜಮಾನನ ಹತ್ತಿರ ಒಬ್ಬ ಕೆಲಸದವನು ದಿನಗೂಲಿಗಾಗಿ ಸೇರಿಕೊಂಡಿರುತ್ತಾನೆ. ಅವನು ಕೆಲಸವನ್ನು ಸರಿಮಾಡದೇ ಇದ್ದರೆ ಅವನಿಗೆ ಕೂಲಿಹಣವು ಸಿಕ್ಕುವುದಿಲ್ಲ. ಇಲ್ಲಿ ಯಜಮಾನನನ್ನು ಈಶ್ವರನಿಗೂ ಹಾಗೂ ಕೂಲಿ ಆಳನ್ನು ಸಕಾಮ ಕರ್ಮಿಗೂ ಹೋಲಿಸಲಾಗಿದೆ. ಅಲ್ಲದೇ ಸರಿಮಾಡದಿರುವ ಕೆಲಸವನ್ನು ವ್ಯಂಗ ಕರ್ಮಕ್ಕೂ ಹೋಲಿಸಲಾಗಿದೆ. ಮುಂದಿನ ಓವೀಯೂ ಕೂಡ ಇದೇ ದೃಷ್ಟಾಂತವನ್ನು ಮುಂದುವರೆಸುತ್ತದೆ.

ಓ.ಸಂ.22: ಅಲ್ಲದೇ, ಯಜಮಾನನು ಸರಿಯಾಗಿ ಕೆಲಸಮಾಡದ ಕೂಲಿ ಆಳಿಗೆ ಹೊಡೆದು ಬುದ್ಧಿ ಕಲಿಸಿ ಸರಿ ದಾರಿಗೆ ತರುತ್ತಾನೆ.

ವಿವರಣೆ : ಹಿಂದಿನ ಓವೀಯಲ್ಲಿ ಕೂಲಿ ಆಳು ಸರಿಯಾಗಿ ಕೆಲಸ ಮಾಡದಿದ್ದರೆ ಆಗ ಯಜಮಾನನು ಕೂಲಿಹಣವನ್ನು ಕೊಡುವುದಿಲ್ಲವೆಂದು ತಿಳಿಸಲಾಗಿತ್ತು. ಈ ಓವೀಯು ಹಿಂದಿನ ಓವೀಯ ಮುಂದುವರೆದ ಭಾಗವಾಗಿರುತ್ತದೆ. ಸರಿಯಾಗಿ ಕೆಲಸಮಾಡದ ಕೂಲಿ ಆಳಿಗೆ ಕೂಲಿಹಣವನ್ನು ಕೊಡದಿರುವುದು ಮಾತ್ರವಲ್ಲ, ಅವನಿಗೆ ಸರಿಯಾಗಿ ಬೈದು, ಹೊಡೆದು, ಬುದ್ಧಿ ಕಲಿಸಿ ಸರಿಯಾಗಿ ಕೆಲಸ ಮಾಡುವಂತೆ ಮಾಡುತ್ತಾನೆ. ಅದೇ ಪ್ರಕಾರ, ಸಕಾಮಕರ್ಮಿಯು ಕರ್ಮವನ್ನು ವ್ಯಂಗವಾಗಿ ಮಾಡಿದರೆ ಆಗ ಈಶ್ವರನು ಅವನಿಗೆ ಇಚ್ಛಿತ ಫಲವನ್ನು ಕೊಡುವುದಿಲ್ಲವೆಂಬುದು ಮಾತ್ರವಲ್ಲ, ಅವನಿಗೆ ದುಃಖವನ್ನೇ ಕೊಡುತ್ತಾನೆ. ಹಾಗೆಯೇ ಒಂದು ವೇಳೆ ಅದೇ ಕೂಲಿ–ಆಳು ತನ್ನ ಕೆಲಸವನ್ನು ಪ್ರಾಮಾಣಿಕವಾಗಿ ಸರಿಯಾಗಿ ಮಾಡಿದ್ದಾದರೆ ಅದಕ್ಕೆ ಪ್ರತಿಫಲವಾದ ಕೂಲಿ ಹಣದ ಜೊತೆಗೆ ಆನಂದವೂ ಅವನಿಗೆ ತಪ್ಪದೇ ಬರುತ್ತದೆ. ಇದೇ ರೀತಿ ಹೋಲಿಸಿ ಸಕಾಮ ಕರ್ಮಠನ ಬಗ್ಗೆ ಮುಂದಿನ ಓವೀಯಲ್ಲಿ ತಿಳಿಸಲಾಗಿದೆ.

ಓ.ಸಂ.23: ಇದೇ ರೀತಿ ಈಶ್ವರನು ಸಕಾಮಕರ್ಮಿಗೆ ಅವನ ಅವ್ಯಂಗ ಕರ್ಮಕ್ಕಾಗಿ ಅದರ ಫಲವನ್ನು ನೀಡುತ್ತಾನೆ. ಇನ್ನು ಕೂಲಿ ಹಣವನ್ನೇ ಬೇಡದೇ ಪ್ರೇಮದಿಂದಲೇ ಕೆಲಸವನ್ನು ಮಾಡುವ ಕೂಲಿಯ ಆಳೂ ಕೂಡ ಸಿಗುತ್ತಾನೆ.

ವಿವರಣೆ: ಈಶ್ವರನು ಹೇಗೆ ವ್ಯಂಗಕರ್ಮಕ್ಕೆ ಫಲವನ್ನು ನೀಡದೇ ಶಿಕ್ಷಿಸುತ್ತಾನೋ ಹಾಗೆಯೇ ಅವನು ಅವ್ಯಂಗ ಕರ್ಮವನ್ನು ಮಾಡುವ ಸಕಾಮ ಕರ್ಮಿಗೆ ತಕ್ಕ ಫಲವನ್ನು ನಿಶ್ಚಯವಾಗಿಯೂ ಕೊಡುತ್ತಾನೆ. ಈ ಫಲಕ್ಕೆ ಕರ್ಮವು ಅವ್ಯಂಗವಾಗಿರಬೇಕು ಅಲ್ಲದೇ ಅದು ಪ್ರಾಮಾಣಿಕವಾಗಿಯೂ, ನಿಷ್ಠೆಯಿಂದಲೂ ಹಾಗೂ ಈಶ್ವರನ ಮೇಲೆ ಭಕ್ತಿಯಿಂದಲೂ ಕೂಡಿರಬೇಕು. ಆಗ ಮಾತ್ರ ಸಕಾಮಕರ್ಮಿಗೆ ಕರ್ಮದ ಪೂರ್ಣಫಲವು ದೊರಕುವುದು. ಈಗ ಹಿಂದೆ ಕೊಟ್ಟ ದೃಷ್ಟಾಂತವನ್ನು ನಿಷ್ಕಾಮಕರ್ಮಿಗಾಗಿ ಬೇರೆಯ ರೀತಿಯಲ್ಲಿ ಕೊಡಬಹುದು. ಒಂದು ವೇಳೆ ಕೂಲಿಯ ಆಳು ತನ್ನ ಕೂಲಿಯ ಹಣವನ್ನು ಬೇಡದೇ ಬಹಳ ಪ್ರೀತಿಯಿಂದ ಹಾಗೂ ಗೌರವದಿಂದ ತನ್ನ ಯಜಮಾನನನ್ನು ಕಂಡು ತನ್ನ ಕೆಲಸವನ್ನು ಮಾಡುತ್ತಾನೆ. ಆಗ ಯಜಮಾನನು ಆಳಿನ ಮೇಲೆ ತೋರುವ ಪ್ರತಿಕ್ರಿಯೆಯನ್ನು ಮುಂದಿನ ಓವೀಯಲ್ಲಿ ತಿಳಿಸಿದೆ.

ಓ.ಸಂ.24: ಹೀಗೆ ಕೂಲಿ ಹಣವನ್ನು ಕೇಳದೇ ಪ್ರೇಮದಿಂದಲೇ ಕೆಲಸ ಮಾಡುವ ಆಳು ಒಂದು ವೇಳೆ ಕೆಲಸದಲ್ಲಿ ತಪ್ಪಿದರೂ ಕೂಡ ಯಜಮಾನನ ಸಿಟ್ಟಿಗೆ ಗುರಿಯಾಗದೇ ಪ್ರೀತಿಗೆ ಪಾತ್ರನಾಗಿರುವುದಲ್ಲದೇ ದಿನಕ್ಕಿಂತ ಹೆಚ್ಚಿನ ಕೂಲಿ–ಹಣವನ್ನು ಪಡೆಯುತ್ತಾನೆ.

ವಿವರಣೆ : ಮುಂದಿನ ಓವೀಯ ಮೊದಲ ಎರಡು ಚರಣಗಳನ್ನು ಈ ಓವೀಯಲ್ಲೇ ಸೇರಿಸಿ ವಿವರವಾಗಿ ಹೇಳಲಾಗಿದೆ. ಹಿಂದಿನ ಓವೀಯಲ್ಲಿ ದಿನಗೂಲಿ ಹಣವನ್ನೇ ಬೇಡದೇ ಪ್ರೇಮದಿಂದ ಕೆಲಸಮಾಡುವ ಕೂಲಿ ಆಳಿನ ಕೆಲಸದ ಬಗ್ಗೆ ತಿಳಿಸಲಾಗಿತ್ತು. ಅಂತಹ ಕೆಲಸಗಾರನ ಬಗ್ಗೆ ಯಜಮಾನನಿಗೆ ಬಹಳ ಆದರವಿರುತ್ತದೆ. ಯಜಮಾನನ ಕೆಲಸವೇ ತನ್ನ ಕೆಲಸವೆಂಬ ಭಾವದಿಂದ ಪ್ರೀತಿಯಿಂದ ಕೆಲಸಮಾಡುವ ಆಳು ಆಕಸ್ಮಾತ್ ಕೆಲಸದಲ್ಲಿ ತಪ್ಪಿದರೂ ಕೂಡ ಯಜಮಾನನ ಕೆಂಗಣ್ಣಿಗೆ ಅಂದರೆ ಸಿಟ್ಟಿಗೆ ಗುರಿಯಾಗುವುದಿಲ್ಲ. ಆಳು ತಾನು ಕೂಲಿಹಣವನ್ನು ಇಚ್ಛಿಸದೇ ಪ್ರೇಮದಿಂದ ಕೆಲಸವನ್ನು ಮಾಡುವುದರಿಂದ ಯಜಮಾನನಿಗೆ ಅವನ ಮೇಲೆ ಪ್ರೀತಿ ಉಂಟಾಗುತ್ತದೆ ಮತ್ತು ಕೆಲಸವನ್ನು ಸರಿಯಾಗಿ ಮಾಡಿದವರಿಗೆ ಎಷ್ಟು ಕೊಡಬೇಕೋ ಅದಕ್ಕಿಂತ ಹೆಚ್ಚಿನ ಹಣವನ್ನೇ ಯಜಮಾನನು ಕೊಡುತ್ತಾನೆ. ಹೀಗೆ ಕೂಲಿಯ ಆಳು ತನ್ನ ಸಂಬಳವನ್ನು ಅಪೇಕ್ಷಿಸದೇ ಕೆಲಸಮಾಡಿದರೆ ಅವನು ಹೆಚ್ಚಿನ ಹಣವನ್ನೂ ಮತ್ತು ಪ್ರೀತಿಯನ್ನೂ ಹೀಗೆ ಎರಡನ್ನೂ ಗಳಿಸುತ್ತಾನೆ.

ಓ.ಸಂ.25: ಅದೇ ರೀತಿ ಈಶ್ವರನು ನಿಷ್ಕಾಮಕರ್ಮಿಗೆ ಎರಡನ್ನೂ- ಆ ಕರ್ಮದ ಫಲ ಮತ್ತು ಅದರ ಜೊತೆಗೆ ಚಿತ್ತಶುದ್ಧಿಯನ್ನೂ ಕರುಣಿಸುವನು.

ವಿವರಣೆ : ಈ ಓವೀಯ ಮೊದಲನೆಯ ಎರಡು ಚರಣಗಳನ್ನು ಹಿಂದಿನ ಓವೀಗೆ ಸೇರಿಸಿಕೊಂಡು ಅರ್ಥೈಸಲಾಗಿದೆ. ಈ ಓವೀಯಲ್ಲಿ ಹಿಂದಿನ ಓವೀಯಲ್ಲಿರುವ ದೃಷ್ಟಾಂತವನ್ನು ನಿಷ್ಕಾಮಕರ್ಮಿಗೆ ಹೋಲಿಸಿ ಬರೆಯಲಾಗಿದೆ. ಒಂದು ವೇಳೆ ಕೂಲಿಯ ಆಳು ತನಗೆ ಸಂಬಳವಿಲ್ಲದಿದ್ದರೂ ತಾನು ದುಡಿಯುತ್ತೇನೆ ಎಂದು ಕೆಲಸವನ್ನು ಮಾಡಿದರೆ ಆಗ ಅವನಿಗೆ ಸಂಬಳದ ಜೊತೆಗೆ ಯಜಮಾನನು ಪ್ರೀತಿಯನ್ನೂ ಕೊಡುತ್ತಾನೆ. ಅದೇ ರೀತಿ ಈಶ್ವರನೆಂಬ ಯಜಮಾನನು ನಿಷ್ಕಾಮಕರ್ಮಿಯು ತನಗೆ ಫಲವು ಬೇಡವಾದರೂ ನಿಷ್ಕಾಮಕರ್ಮಗಳನ್ನು ಮತ್ತು ಸಕಾಮಕರ್ಮಗಳನ್ನು ಈಶ್ವರಾರ್ಪಣ ಬುದ್ಧಿಯಿಂದ ನಿಷ್ಕಾಮವಾಗಿ ಮಾಡಿದರೆ ಆಗ ಅವನಿಗೆ ಎರಡೂ ಫಲಗಳು ಕೊಡಲ್ಪಡುತ್ತವೆ. ಒಂದನೆಯದು ಮುಖ್ಯಫಲವಾದ ಚಿತ್ತಶುದ್ಧಿಯು, ಎರಡನೆಯದು ಕರ್ಮಗಳ ಫಲ. ಈ ಜನ್ಮದಲ್ಲಿ ಜ್ಞಾನವಾಗದಿದ್ದರೆ ಗಳಿಸಿದ ಚಿತ್ತಶುದ್ಧಿಯು ನಾಶವಾಗುವುದಿಲ್ಲ. ಅದು ಕರ್ಮಫಲದ ಜೊತೆಗೆ ಮುಂದಿನ ಜನ್ಮದಲ್ಲಿ ಲಭಿಸುತ್ತವೆ.

ಓ.ಸಂ.26: ಯಾವ ವಿಹಿತ ಕರ್ಮಗಳಿಗೆ ಇಹ ಹಾಗೂ ಪರಲೋಕಗಳಲ್ಲಿ ಭೋಗಕ್ಕಾಗಿ ಫಲಗಳನ್ನು ನಿರೂಪಿಸಿಲ್ಲವೋ ಅವುಗಳಿಗೆ ನಿಷ್ಕಾಮ ಕರ್ಮಗಳೆಂದು ಶ್ರುತಿಯು ಹೇಳುತ್ತದೆ.

ಇರುವುದು. ಈ ವರೆಗೆ ಸಕಾಮ ಕರ್ಮಗಳ ವ್ಯಾಖ್ಯೆಯು ಇರುವುದು.

ವಿವರಣೆ : ಈ ಓವೀಯಲ್ಲಿ ನಿಷ್ಕಾಮಕರ್ಮಗಳ ವ್ಯಾಖ್ಯೆಯು ಇರುವುದು. ಈ ವರೆಗೆ ಸಕಾಮ ಕರ್ಮಗಳು ಶ್ರುತ್ಯುಕ್ತವಾದ್ದರಿಂದ ಅವುಗಳನ್ನು 'ವಿಹಿತ' ವೆಂದು ಕರೆಯುತ್ತಾರೆ. ಕೆಲವೊಂದು ಕರ್ಮಗಳು ವಿಹಿತವಿದ್ದರೂ ಕೂಡ ( ಶ್ರುತ್ಯುಕ್ತವಾಗಿದ್ದರೂ ಕೂಡ ) ಅವು 'ಸಕಾಮ'ವಿರಲೇ ಬೇಕೆಂಬ ನಿಯಮವಿರುವುದಿಲ್ಲ. ಏಕೆಂದರೆ ಅದು ನಿಷ್ಕಾಮವಾಗಿಯೂ ಕೂಡ ಇರಬಹುದು. ಆದ್ದರಿಂದ ಯಾವ ಕರ್ಮಗಳು ವಿಹಿತವಾಗಿದ್ದರೂ ಶ್ರುತಿಯು ಅವುಗಳಿಗೆ ಇಹದಲ್ಲಾಗಲೀ ಪರಲೋಕದಲ್ಲಾಗಲೀ ಯಾವುದೇ ಫಲವನ್ನು ಹೇಳಿಲ್ಲವಾದರೆ ಅದಕ್ಕೆ ನಿಷ್ಕಾಮ ಕರ್ಮವೆಂದು ಹೇಳಲಾಗಿದೆ. ಸಾಧಕನು ತನಗೆ ಯಾವಾಗ ವೈರಾಗ್ಯದಿಂದ ಯಾವಫಲವೂ ಬೇಡ ಎಂದು ಭಾವಿಸಿ ನಿಷ್ಕಾಮ ಕರ್ಮಗಳನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡಿದ್ದೇ ಆದರೆ ಆಗ ಅವನಿಗೆ ಅದರಿಂದ ಜ್ಞಾನಪ್ರಾಪ್ತಿಗೆ ಬೇಕಾದ ಚಿತ್ತಶುದ್ಧಿಯೆಂಬ ಯೋಗ್ಯತೆಯು ಉಂಟಾಗುತ್ತದೆ.

ಓ.ಸಂ.27: ನಿಷ್ಕಾಮ ಕರ್ಮದಲ್ಲಿ ನಿತ್ಯ, ನೈಮಿತ್ತಿಕ ಹಾಗೂ ಪ್ರಾಯಶ್ಚಿತ್ತವೆಂಬ ಮೂರು ವಿಧಗಳಿವೆ. ಸ್ನಾನ, ಸಂಧ್ಯಾವಂದನೆ, ತರ್ಪಣ, ಜಪ, ಪಂಚಮಹಾಯಜ್ಞಾದಿಗಳನ್ನು ನಿತ್ಯವೂ ಮಾಡಲೇಬೇಕು.

ವಿವರಣೆ : ಮುಂದಿನ ಓವೀಯ ಪ್ರಥಮ ಚರಣವನ್ನು ಈ ಓವೀಯಲ್ಲಿಯೇ ತೆಗೆದುಕೊಂಡು ಅರ್ಥೈಸಲಾಗಿದೆ. ನಿಷ್ಕಾಮ ಕರ್ಮದಲ್ಲಿ ಮೂರು ಪ್ರಕಾರಗಳುಂಟು ಅವುಗಳೇ ನಿತ್ಯ ಕರ್ಮಗಳು, ನೈಮಿತ್ತಿಕ ಕರ್ಮಗಳು ಮತ್ತು ಪ್ರಾಯಶ್ಚಿತ್ತ ಕರ್ಮಗಳು. ಇವುಗಳಲ್ಲಿ ನಿತ್ಯ ಕರ್ಮಗಳ ವಿವರಣೆಯನ್ನು ಈ ಓವೀ ಮತ್ತು ಮುಂದಿನ ಓವೀಗಳಲ್ಲಿ ಕೊಡಲಾಗಿದೆ. ನಿತ್ಯ ಮಾಡಬೇಕಾದ ಕರ್ಮಗಳಾದ ಸ್ನಾನ, ಸಂಧ್ಯಾವಂದನೆ, ಜಪ, ತರ್ಪಣ, ಪಂಚಮಹಾಯಜ್ಞಾದಿಗಳನ್ನು ನಿತ್ಯಕರ್ಮಗಳೆಂದು ಕರೆಯುತ್ತಾರೆ. ಇವುಗಳಲ್ಲಿ ಕೆಲವೊಂದು ಕರ್ಮಗಳನ್ನು ಸಾಮಾನ್ಯವಾಗಿ ದಿನಕ್ಕೊಮ್ಮೆ ಮಾಡಿದರೆ ಸಾಕು. ಉದಾ. ಸ್ನಾನ, ಅಗ್ನಿಕಾರ್ಯ, ಪಂಚಯಜ್ಞಗಳು ಮತ್ತು ಅದರಲ್ಲಿ ಬರುವ ದೇವಪೂಜೆ ತರ್ಪಣ ಮುಂತಾದವುಗಳು ನಿತ್ಯ ಕರ್ಮಗಳಾಗಿವೆ. ಸಂಧ್ಯಾವಂದನೆಯನ್ನು ತ್ರಿಕಾಲ ಮಾಡಬಹುದಾಗಿರುತ್ತದೆ. ಜಪವನ್ನು ಸದಾ ಮಾಡಬಹುದು. ಈ ಕರ್ಮಗಳಲ್ಲಿ ಈಗ ಬಹಳಷ್ಟು ಲುಪ್ತವಾಗಿರುತ್ತವೆ. ಉದಾ. ದೇವ ಋಣ, ಋಷಿ ಋಣ, ಪಿತೃ ಋಣ, ಮನುಷ್ಯ ಋಣ ಭೂತ ಋಣ – ಈ ಪಂಚ ಯಜ್ಞಗಳನ್ನು ನಿತ್ಯ ಮಾಡುವುದು ಲುಪ್ತವಾಗಿದೆ.

ಓ.ಸಂ. 28 : ಯಾವ ಕರ್ಮಗಳನ್ನು ಮಾಡದಿರುವುದರಿಂದ ದೋಷವು ಉಂಟಾಗುತ್ತದೆ ಎಂದು ವೇದಶಾಸ್ತ್ರಗಳು ಹೇಳುತ್ತವೆಯೋ ಅವುಗಳಿಗೆ ನಿತ್ಯಕರ್ಮಗಳೆಂದು ಹೆಸರು.

ವಿವರಣೆ : ಹಿಂದಿನ ಓವೀಯಲ್ಲಿ ನಿತ್ಯ ಮಾಡುವ ಕೆಲವೊಂದು ನಿತ್ಯಕರ್ಮಗಳನ್ನು ತಿಳಿಸಲಾಗಿದೆ. ಅವುಗಳು 'ನಿಷ್ಕಾಮ' ಕರ್ಮಗಳಾದ್ದರಿಂದ ಅವುಗಳ ಆಚರಣೆಯಿಂದ ಯಾವಫಲವೂ ಬರುವುದಿಲ್ಲವೆಂದು ಶ್ರುತಿ

ಹೇಳುತ್ತದೆ. ಆದರೆ ನಿತ್ಯಕರ್ಮಗಳನ್ನು ಆಚರಿಸಲಿಕ್ಕೇಬೇಕೆಂಬ ಆದೇಶ ಇರುತ್ತದೆ. ಏಕೆಂದರೆ ಅವುಗಳನ್ನು ಆಚರಿಸದಿದ್ದಲ್ಲಿ ದೋಷ ಪ್ರಾಪ್ತಿಯಾಗುತ್ತದೆ ಎಂದು ವೇದಶಾಸ್ತ್ರಗಳು ಹೇಳುತ್ತವೆ. ಇವುಗಳನ್ನು ಆಚರಿಸಿದಾಗ ನಮಗೆ ಚಿತ್ತಶುದ್ಧಿಯಾಗುತ್ತದೆ ಎಂದು ಶಾಸ್ತ್ರಗಳು ಹೇಳುತ್ತವೆ. ಆದ್ದರಿಂದ ಅವುಗಳನ್ನು ಆಚರಿಸದೇ ಬಿಟ್ಟಲ್ಲಿ ಬಹುಷಃ ನಮ್ಮ ಚಿತ್ತವು ಮಲಿನವಾಗಬಹುದು. ಇದರಿಂದ ನಮ್ಮ ಬುದ್ಧಿಯು ಇರುವ ಸಾತ್ವಿಕತೆಯನ್ನು ಕಳೆದುಕೊಳ್ಳಬಹುದು. ಅಂದರೆ ವಿವೇಕವು ಜಾಗ್ರತವಾಗಲು ಕಷ್ಟವಾಗುತ್ತದೆ.

<u>ಓ.ಸಂ.29:</u> ದೇವರ ಸಂಬಂಧವಾದ ನವರಾತ್ರಿ ಮುಂತಾದ ಹಬ್ಬಗಳು, ಪಿತೃಶ್ರಾದ್ಧಾದಿಗಳು, ಸಾಧು ಸಂತರ ಜಯಂತಿ, ಪುಣ್ಯತಿಥಿಗಳು, ವಿಶೇಷವಾಗಿ ಬರುವ ಸಂದರ್ಭಗಳಲ್ಲಿ ಪೂಜೆ ಮಾಡುವುದು ಮತ್ತು ಬ್ರಾಹ್ಮಣರಿಗೆ ದಾನಕೊಟ್ಟು ತೃಪ್ತಿಪಡಿಸುವುದು, ಮುಂತಾದ ಕಾರ್ಯಗಳಿಗೆ ನೈಮಿತ್ತಿಕ ಕರ್ಮವೆನ್ನುತ್ತಾರೆ.

<u>ವಿವರಣೆ :</u> ಆಗಾಗ ಬರುವ ಅನೇಕ ದೇವರ ಸಂಬಂಧವಾದ ಹಬ್ಬ-ಹರಿದಿನಗಳನ್ನು ಆಚರಿಸುತ್ತೇವೆ. ರಾಮನವಮಿ, ಹನುಮಜಯಂತಿ, ಕೃಷ್ಣಾಷ್ಟಮಿ, ನವರಾತ್ರಿ ಮುಂತಾದ ಹಬ್ಬಗಳನ್ನು ಆಚರಿಸುತ್ತೇವೆ. ಸಾವನ್ನಪ್ಪಿದ ತಂದೆ-ತಾಯಿ, ಅಜ್ಜ-ಅಜ್ಜಿ, ಸಹೋದರ ಮುಂತಾದವರಿಗೆ ಅವರು ದೇಹಬಿಟ್ಟ ತಿಥಿಯ ದಿನದಂದು ಶ್ರಾದ್ಧವನ್ನು ಆಚರಿಸುತ್ತೇವೆ. ಶಂಕರ, ರಾಮಾನುಜ, ಮಧ್ವ, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಮುಂತಾದ ಮಹಾತ್ಮರ ಜಯಂತಿಗಳನ್ನು ಹಾಗೂ ಅವರು ದೇಹಬಿಟ್ಟ ಪುಣ್ಯತಿಥಿಗಳನ್ನು ಅನೇಕ ರೀತಿಯಲ್ಲಿ ಅವರ ಅನುಯಾಯಿಗಳು ಆಚರಿಸುತ್ತಾರೆ. ಈ ಎಲ್ಲ ದಿನಗಳಂದು ವಿಶೇಷ ಪೂಜೆಯ ಜೊತೆಗೆ ಬ್ರಾಹ್ಮಣರಿಗೆ ದಾನ, ಬಡವರಿಗೆ ಅನ್ನದಾನ ಮತ್ತು ವಸ್ತ್ರದಾನ ಮುಂತಾದವುಗಳು ವಿಶೇಷವಾಗಿ ಕೊಡಲ್ಪಡುತ್ತವೆ. ಹೀಗೆ ಸಂದರ್ಭ ಬಂದಾಗ ಮಾಡುವ ವಿಶೇಷ ಕರ್ತವ್ಯಗಳಿಗೆ 'ನೈಮಿತ್ತಿಕ ಕರ್ಮ'ವೆನ್ನುವರು. ಅಂದರೆ ಆಯಾ ನಿಮಿತ್ತ ಮಾಡುವ ನೈಮಿತ್ತಿಕ ಕರ್ಮಗಳನ್ನು ಈ ಓವೀ ಮತ್ತು ಮುಂದಿನ ಓವೀಗಳು ತಿಳಿಸುವುವು.

<u>ಓ.ಸಂ.30:</u> ಅಥವಾ ತೀರ್ಥಕ್ಷೇತ್ರಗಳಿಗೆ ಹೋದಾಗ ಇಲ್ಲವೇ ಗ್ರಹಣಾದಿಗಳು ಪ್ರಾಪ್ತವಾದಾಗ ಮಾಡಬೇಕಾದ ವಿಶೇಷ ಧಾರ್ಮಿಕ ಕರ್ತವ್ಯಗಳಿಗೆ ಬಂಧುಗಳೊಂದಿಗೆ ಸಾಮಾಜಿಕ ಕರ್ತವ್ಯಗಳಲ್ಲಿ ನಿರತನಾಗುವುದಕ್ಕೆ ನೈಮಿತ್ತಿಕ ಕರ್ಮವೆನ್ನುತ್ತಾರೆ.

<u>ವಿವರಣೆ :</u> ಈ ಓವೀಯು ಹಿಂದಿನ ಓವೀಯ ಮುಂದುವರೆದ ಭಾಗವಾಗಿರುತ್ತದೆ. ಕಾಶಿ, ರಾಮೇಶ್ವರ, ಗೋಕರ್ಣ ಮೊದಲಾದ ತೀರ್ಥಕ್ಷೇತ್ರಗಳಿಗೆ ಹೋದಾಗ ಅಲ್ಲಿರುವ ಮುಖ್ಯವಾದ ತೀರ್ಥಗಳಲ್ಲಿ ಮತ್ತು ನದಿಯಲ್ಲಿ ಸ್ನಾನಮಾಡುವುದು; ಶ್ರಾದ್ಧಾದಿಗಳನ್ನು ಮಾಡುವುದು; ಪಿತೃಗಳಿಗೆ ತರ್ಪಣವನ್ನು ಕೊಡುವುದು; ದೇವಸ್ಥಾನಗಳಲ್ಲಿ ವಿಶೇಷ ಪೂಜೆಗಳನ್ನು ಮಾಡಿಸುವುದು; ಹಾಗೆಯೇ ಗ್ರಹಣಕಾಲಗಳಲ್ಲಿ ಮತ್ತು

ಸಂಕ್ರಮಣಕಾಲದಲ್ಲಿ ಪಿತೃಗಳಿಗೆ ತರ್ಪಣ ಸಲ್ಲಿಸುವುದು; ನದಿ, ಸಮುದ್ರ ಮುಂತಾದ ಪವಿತ್ರ ಕ್ಷೇತ್ರಗಳಲ್ಲಿ ಸ್ನಾನ, ಪೂಜೆ ಮುಂತಾದವುಗಳನ್ನು ಆಚರಿಸುವುದು; ಮುಂತಾದವುಗಳು ವಿಶೇಷ ಕರ್ತವ್ಯಗಳಾಗಿರುತ್ತವೆ. ಇದಲ್ಲದೇ ಕೆಲವೊಂದು ಸಾಮಾಜಿಕ ಸಾರ್ವತ್ರಿಕ ಧಾರ್ಮಿಕ ಕಾರ್ಯಗಳಲ್ಲಿ ಬಂಧು ಬಳಗಗಳ ಜೊತೆಗೆ ಸೇರುವುದೂ ಕೂಡ ನೈಮಿತ್ತಿಕ ಕರ್ಮಗಳಲ್ಲಿಯೇ ಬರುತ್ತದೆ. ಹೀಗೆ ವಿಶೇಷ ದಿನಗಳಲ್ಲಿ ಹಾಗೂ ವಿಶೇಷ ಸಂದರ್ಭಗಳಲ್ಲಿ ಮಾಡುವ ಆಚರಣೆಗಳಿಗೆ ನೈಮಿತ್ತಿಕ ಕರ್ಮಗಳೆಂದು ಹೆಸರು.

<u>ಓ.ಸಂ.31 :</u> ಜ್ಞಾತಪಾಪನಾಶಕ್ಕಾಗಿ ಶಾಸ್ತ್ರೋಕ್ತ ಯಾವ ಕರ್ಮದಿಂದ ಈ ಪಾಪನಾಶವಾಗುವುದೋ ಆ ಕರ್ಮವನ್ನೇ ಮಾಡಬೇಕು. ಆ ಕರ್ಮವನ್ನು ಪ್ರಾಯಶ್ಚಿತ್ತ ಕರ್ಮವೆನ್ನುತ್ತಾರೆ.

<u>ವಿವರಣೆ :</u> ಈ ಓವೀಯಲ್ಲಿ ಮುಂದಿನ ಓವೀಯ ಪ್ರಥಮ ಎರಡು ಚರಣಗಳನ್ನು ತೆಗೆದುಕೊಂಡು ಅರ್ಥೈಸಲಾಗಿದೆ. ಜ್ಞಾತಪಾಪವೆಂದರೆ ಯಾವ ದುಷ್ಕರ್ಮವು ಪಾಪಕರ್ಮವೆಂದು ತಿಳಿದಿದ್ದರೂ ಅದನ್ನೇ ಮಾಡುವುದು; ಸುಳ್ಳುಹೇಳುವುದು; ಕಳ್ಳತನಮಾಡುವುದು; ವ್ಯಭಿಚಾರವೆಸಗುವುದು; ವಂಚನೆ ಮಾಡುವುದು; ಮುಂತಾದವುಗಳು. ಪಾಪಕಾರ್ಯಗಳೆಂದು ತಿಳಿದರೂ ಕೂಡ ಇವುಗಳನ್ನೇ ಮಾಡಿದರೆ ಆಗ ಅದು ಜ್ಞಾತಪಾಪಕಾರ್ಯವಾಗುತ್ತದೆ. ಇದಕ್ಕಾಗಿ ಧರ್ಮಶಾಸ್ತ್ರಗಳು ಯಾವ ಯಾವ ಪಾಪಕಾರ್ಯ ಮಾಡುವುದರಿಂದ ಬರುವ ಪಾಪದ ನಾಶಕ್ಕಾಗಿ ಯಾವ ಯಾವ ಕರ್ಮಗಳನ್ನು ಹೋಮ-ಹವನಗಳನ್ನು ಮಾಡಬೇಕೆಂದು ವೇದ-ಶಾಸ್ತ್ರಗಳಲ್ಲಿ ಹೇಳಿದೆಯೋ ಅಂತಹ ಕರ್ಮಗಳನ್ನು ಮಾಡುವುದರಿಂದ ಈ ಜ್ಞಾತಪಾಪವು ನಾಶವಾಗುತ್ತದೆ. ಇಂತಹ ಕರ್ಮಗಳಿಗೆ ಪ್ರಾಯಶ್ಚಿತ್ತ ಕರ್ಮಗಳೆಂದು ಹೆಸರು. ಮುಂದಿನ ಓವೀಯು ಪ್ರಾಯಶ್ಚಿತ್ತ ಕರ್ಮದ ಬಗ್ಗೆಯೇ ಇರುತ್ತದೆ.

<u>ಓ.ಸಂ.32:</u> ಅಜ್ಞಾತ ಪಾಪ ನಿವೃತ್ತಿಗಾಗಿ ಯಾವ ಈಶ್ವರನಾಮ-ಸ್ಮರಣಾದಿ-ಕರ್ಮಗಳನ್ನು ಮಾಡಬೇಕೆಂದು ಹೇಳಲಾಗಿದೆಯೋ ಅವೂ ಕೂಡ ಪ್ರಾಯಶ್ಚಿತ್ತ ಕರ್ಮಗಳಾಗಿವೆ.

<u>ವಿವರಣೆ :</u> ಈ ಓವೀಯ ಮೊದಲ ಎರಡು ಚರಣಗಳನ್ನು ಹಿಂದಿನ ಓವೀಯಲ್ಲಿಯೇ ಅರ್ಥೈಸಲಾಗಿದೆ. ಅಲ್ಲದೇ ಮುಂದಿನ ಓವೀಯ ಪ್ರಥಮ ಎರಡು ಚರಣವನ್ನು ಈ ಓವೀಯಲ್ಲಿಯೇ ತೆಗೆದುಕೊಂಡು ಅರ್ಥೈಸಲಾಗಿದೆ. ಈ ಓವೀಯೂ ಕೂಡ 'ಪ್ರಾಯಶ್ಚಿತ್ತ ಕರ್ಮ'ಗಳ ಬಗ್ಗೆಯೇ ಇರುತ್ತದೆ. ಆದರೆ ಇಲ್ಲಿ ಅಜ್ಞಾತ ಪಾಪ ನಿವೃತ್ತಿಗಾಗಿ ಇರುವ ಪ್ರಾಯಶ್ಚಿತ್ತ ಕರ್ಮಗಳ ಬಗ್ಗೆ ಇರುತ್ತದೆ. ತಿಳಿಯದೇ ಮಾಡಲ್ಪಟ್ಟ ಕ್ರಿಯೆಗಳಿಂದ ಉಂಟಾಗುವ ಪಾಪವೇ 'ಅಜ್ಞಾತ ಪಾಪ'ವಾಗಿರುತ್ತದೆ. ಉದಾಹರಣೆಗೆ, ನಾವು ಓಡಾಡುವಾಗ ನಮಗೆ ತಿಳಿಯದೇ ಇರುವೆ ಮುಂತಾದ ಸಣ್ಣ-ಸಣ್ಣ ಕ್ರಿಮಿಕೀಟಗಳನ್ನು ಸಾಯಿಸುವುದು ಹಾಗೂ ಬಾಲ್ಯದಲ್ಲಿ ನಮಗೆ ತಿಳಿಯದೇ ಅನೇಕ ಪಾಪಗಳನ್ನು ಮಾಡುವುದು. ಕೆಲವರಿಗೆ ಸಹಾಯ ಮಾಡಲು ಹೋಗಿ ಬೇರೆಯವರಿಗೆ

ಅನ್ಯಾಯವಾಗಿರಬಹುದು. ಇಂತಹ ತಿಳಿಯದೇ ಮಾಡಿದ ಪಾಪಗಳಿಗಾಗಿ ಪವಿತ್ರ ಗ್ರಂಥಗಳ ಪಾರಾಯಣ, ಈಶ್ವರನಾಮಸ್ಮರಣೆ, ಮುಂತಾದವುಗಳು ಪ್ರಾಯಶ್ಚಿತ್ತ ಕರ್ಮಗಳಾಗಿವೆ.

ಓ.ಸಂ.33 : ಅಜ್ಞಾತ ಪಾಪ ನಿವೃತ್ತಿಗಾಗಿ ಯಾವ ಈಶ್ವರನಾಮ-ಸ್ಮರಣಾದಿ-ಕರ್ಮಗಳನ್ನು ಮಾಡಬೇಕೆಂದು ವೇದ ಶಾಸ್ತ್ರಗಳಲ್ಲಿ ಹೇಳಲಾಗಿದೆಯೋ ಆ ರೀತಿಯ ಕರ್ಮಗಳು ಪರಮಾತ್ಮನ ಸ್ಮರಣೆ ಮತ್ತು ಉಳಿದ ನಿಷ್ಕಾಮಕರ್ಮಗಳೇ ಆಗಿರುತ್ತವೆ.

ವಿವರಣೆ: ಈ ಓವೀಯ ಪ್ರಥಮ ಎರಡು ಚರಣಗಳನ್ನು ಹಿಂದಿನ ಓವೀಯಲ್ಲಿಯೇ ಅರ್ಥೈಸಲಾಗಿದೆ. ಇಲ್ಲಿಗೆ ಎಲ್ಲ ಮೂರು ಪ್ರಕಾರದ ನಿಷ್ಕಾಮ ಕರ್ಮಗಳ ವಿವೇಚನೆಯು ಮುಗಿಯುತ್ತದೆ. ನಿಷ್ಕಾಮ ಕರ್ಮದ ಮೂರು ಪ್ರಾಕಾರಗಳೆಂದರೆ ನಿತ್ಯಕರ್ಮಗಳು, ನೈಮಿತ್ತಿಕ ಕರ್ಮಗಳು ಮತ್ತು ಪ್ರಾಯಶ್ಚಿತ್ತ ಕರ್ಮಗಳಾಗಿವೆ. ಇವುಗಳಲ್ಲಿ ನಿತ್ಯ ಕರ್ಮಗಳೆಂದರೆ ಸ್ನಾನ, ಸಂಧ್ಯಾವಂದನೆ, ದೇವರ ಪೂಜೆ, ಮುಂತಾದವುಗಳು ಆಗಿವೆ. ಇವುಗಳನ್ನು ಪ್ರತಿದಿನ, ನಿತ್ಯ ತಪ್ಪದೇ ಮಾಡಲೇಬೇಕು. ಎರಡನೆಯದಾದ ನೈಮಿತ್ತಿಕ ಕರ್ಮಗಳಲ್ಲಿ, ಹಬ್ಬ-ಹರಿದಿನಗಳು, ಶ್ರಾದ್ಧಾದಿಗಳು, ತೀರ್ಥಯಾತ್ರೆಗಳು, ಗ್ರಹಣಾದಿಗಳು ಮುಂತಾದವುಗಳ ನಿಮಿತ್ತ ಆಗಾಗ ಮಾಡಲೇಬೇಕಾದ ಧಾರ್ಮಿಕ ಆಚರಣೆಗಳು ಬರುತ್ತವೆ. ಮೂರನೆಯದಾದ ಪ್ರಾಯಶ್ಚಿತ್ತ ಕರ್ಮಗಳಲ್ಲಿ, ಜ್ಞಾತಪಾಪ ನಾಶಕ್ಕಾಗಿ ವೇದ-ಶಾಸ್ತ್ರೋಕ್ತ ಕರ್ಮಗಳನ್ನೂ, ಅಜ್ಞಾತ ಪಾಪ ನಾಶಕ್ಕಾಗಿ ಈಶ್ವರನಾಮ -ಸ್ಮರಣೆ, ಪಾರಾಯಣ ಮುಂತಾದ ಕರ್ಮಗಳು ಬರುತ್ತವೆ. ಈ ಮೂರೂ ಪ್ರಾಕಾರದ ಕರ್ಮಗಳನ್ನು ನಿಷ್ಕಾಮಕರ್ಮಗಳೆಂದು ಕರೆಯುತ್ತಾರೆ.

ಓ.ಸಂ.34: ಸಕಾಮ ಕರ್ಮಗಳನ್ನು ಈಶ್ವರಾರ್ಪಣ ಭಾವದಿಂದ ಆಚರಿಸುವುದರಿಂದ ಮತ್ತು ಮೂರು ವಿಧದ ನಿಷ್ಕಾಮ ಕರ್ಮಗಳನ್ನು ಆಚರಿಸುವುದರಿಂದ ಸಂಪೂರ್ಣವಾದ ಚಿತ್ತಶುದ್ಧಿಯು ಉಂಟಾಗುತ್ತದೆ.

ವಿವರಣೆ : ಈ ಓವೀಯ ಕೊನೆಯ ಚರಣವನ್ನು ಮುಂದಿನ ಓವೀಯಲ್ಲಿ ತೆಗೆದುಕೊಳ್ಳಲಾಗಿದೆ. ಈವರೆಗೆ ಕರ್ಮದ ಬಗ್ಗೆ ಮಾಡಿರುವ ವಿವೇಚನೆಯು ಮುಗಿದಿದ್ದು ಈ ಓವೀಯಿಂದ ಅದರ ಸಮಾರೋಪವನ್ನು ಮಾಡಲಾಗಿದೆ. ಸಕಾಮ ಕರ್ಮಗಳನ್ನು ಸಕಾಮವಾಗಿ ಮಾಡದೇ ನಿಷ್ಕಾಮವಾಗಿ ಮಾಡಬೇಕು. ಇದಕ್ಕಾಗಿ ಸಕಾಮ ಕರ್ಮಗಳನ್ನು ಈಶ್ವರಾರ್ಪಣ ಭಾವದಿಂದ ಅಂದರೆ ಈಶ್ವರನ ಸೇವೆಯೆಂದು ಮಾಡಬೇಕು. ಆಗ ಸಕಾಮ ಕರ್ಮವು ನಿಷ್ಕಾಮದಂತೆಯೇ ಚಿತ್ತಶುದ್ಧಿಯೆಂಬ ಫಲವನ್ನು ಕೊಡಲು ಸಮರ್ಥವಾಗುತ್ತದೆ. ಈ ಸಕಾಮ ಕರ್ಮದೊಂದಿಗೆ ಮೂರೂ ಪ್ರಕಾರದ ನಿಷ್ಕಾಮ ಕರ್ಮಗಳನ್ನೂ ಕೂಡ ತಪ್ಪದೇ ಮಾಡಬೇಕು. ಅಂದರೆ ನಿತ್ಯ, ನೈಮಿತ್ತಿಕ ಹಾಗೂ ಪ್ರಾಯಶ್ಚಿತ್ತಗಳೆಂಬ ಮೂರುವಿಧದ ನಿಷ್ಕಾಮ ಕರ್ಮಗಳೊಂದಿಗೆ ಸಕಾಮ ಕರ್ಮಗಳನ್ನೂ ನಿಷ್ಕಾಮ ಭಾವದಿಂದ ಮಾಡಿದಾಗ ನಮಗೆ ಸಂಪೂರ್ಣವಾಗಿ ಚಿತ್ತಶುದ್ಧಿಯು ಪ್ರಾಪ್ತವಾಗುತ್ತದೆ.

ಓ.ಸಂ.35 : ಚಿತ್ತದ ಏಕಾಗ್ರತೆಯನ್ನು ಪಡೆಯಲು ಅನೇಕ ಉಪಾಯಗಳನ್ನು ಮಾಡುತ್ತಾರೆ. ಅವುಗಳಲ್ಲಿ ಸುಲಭ ಮಾರ್ಗಗಳು ಭಕ್ತಿ ಮತ್ತು ಯೋಗಗಳಾಗಿದ್ದು ಅವುಗಳ ಮುಖ್ಯಾಂಶಗಳನ್ನು ಈಗ ಹೇಳಲಾಗುವುದು.

ವಿವರಣೆ: ಹಿಂದಿನ ಓವೀಯ ಕೊನೆಯ ಚರಣವನ್ನು ಈ ಓವೀಯಲ್ಲೇ ತೆಗೆದುಕೊಂಡು ಅರ್ಥೈಸಲಾಗಿದೆ. ಈವರೆಗೆ ಹೇಳಿರುವುದೆಲ್ಲಾ ಚಿತ್ತಶುದ್ಧಿಯ ಬಗ್ಗೆ. ಆದರೆ ಚಿತ್ತಶುದ್ಧಿಯ ಜೊತೆಗೆ ಚಿತ್ತದ ಏಕಾಗ್ರತೆಯೂ ಕೂಡ ಜ್ಞಾನ ಪ್ರಾಪ್ತಿಗೆ ಅತ್ಯಂತ ಅವಶ್ಯಕವಾಗಿ ಬೇಕಾಗಿರುತ್ತದೆ. ನಿಷ್ಕಾಮ ಕರ್ಮದಿಂದ ಚಿತ್ತಶುದ್ಧಿಯನ್ನು ಪಡೆಯಬಹುದಾದರೆ ಉಪಾಸನೆಗಳಿಂದ ಚಿತ್ತದ ಏಕಾಗ್ರತೆಯನ್ನು ಪಡೆಯಬಹುದಾಗಿದೆ. ಆದರೆ ಈಗಿನ ಕಾಲದಲ್ಲಿ ಸಾಮಾನ್ಯವಾಗಿ ವೇದೋಕ್ತ ಉಪಾಸನೆಗಳು ಲುಪ್ತವಾಗಿ ಹೋಗಿರುತ್ತವೆ. ಈಗಿನ ಕಾಲದಲ್ಲಿ ಆಚರಣೆಗೆ ಸುಲಭವಾದ ಮಾರ್ಗಗಳೆಂದರೆ ಭಕ್ತಿ ಮತ್ತು ಯೋಗಗಳು. ಇವುಗಳ ಮುಖ್ಯಾಂಶಗಳನ್ನು ಅತ್ಯಂತ ಸ್ಥೂಲವಾಗಿ ನೋಡಬಹುದು. ಭಕ್ತಿಯಲ್ಲಿ ನವವಿಧ ಭಕ್ತಿಯನ್ನು ಈ ಅಧ್ಯಾಯದಲ್ಲಿ ನೋಡುತ್ತೇವೆ. ಯೋಗದ ಬಗ್ಗೆ ಮುಂದಿನ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ಓ.ಸಂ.36: ಭಕ್ತಿಯು ನವವಿಧವಾಗಿದೆ. ಇವು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ನಮನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನೆಗಳು ಆಗಿವೆ.

ವಿವರಣೆ: ಭಕ್ತಿಯ ಸಾಮಾನ್ಯ ಸ್ವರೂಪವನ್ನು ನಾವು ಈ ಅಧ್ಯಾಯದಲ್ಲಿ ತಿಳಿಯುವುದಿಲ್ಲ, ಅದರ ಬದಲಿಗೆ ಭಕ್ತಿಯಲ್ಲಿರುವ ವಿಧಗಳನ್ನು ಕುರಿತು ವಿವರವಾಗಿ ನಿರೂಪಿಸುವುದನ್ನು ಇಲ್ಲಿ ನೋಡಬಹುದು. ನಾರದರು ಭಕ್ತಿಯನ್ನು ಪ್ರೇಮರೂಪವೆಂದು ಕರೆದಿದ್ದಾರೆ. ಆದ್ದರಿಂದ ಭಕ್ತಿಯು ಒಂದು ಮನಸ್ಸಿನ ಭಾವವಾಗಿದೆ. ಅದು ಇದ್ದಲ್ಲಿ ನಿಷ್ಠೆ, ಪ್ರಾಮಾಣಿಕತೆ, ಒಲವು, ಗೌರವ ಮುಂತಾದವುಗಳು ಜೊತೆ-ಜೊತೆಗೇ ಹೋಗುತ್ತವೆ. ಇಂತಹ ಭಕ್ತಿಯಿಲ್ಲದೇ ಕರ್ಮವು ವೀರ್ಯವತ್ತಾಗುವುದಿಲ್ಲ. ಇಂತಹ ಭಕ್ತಿಯು ಜ್ಞಾನ ಮಾರ್ಗಕ್ಕೂ ಅತ್ಯಂತ ಅವಶ್ಯಕವಾಗಿ ಬೇಕಾಗುವುದು. ಈ ಅಂಶಗಳು ನವವಿಧವಾದ ಭಕ್ತಿಯಲ್ಲೂ ಇರಬೇಕಾಗುತ್ತದೆ. ಅಧ್ಯಾಯದ ಮುಂದಿನ ಭಾಗವೆಲ್ಲವೂ ಈ ನವವಿಧ ಭಕ್ತಿಗಳ ವಿವರಣೆಯೇ ಇರುತ್ತದೆ. ಅವು (1) ಶ್ರವಣ (2) ಕೀರ್ತನ (3) ಸ್ಮರಣ (4) ಪಾದಸೇವನಾ (5) ಅರ್ಚನ (6) ನಮನ (7) ದಾಸ್ಯ (8) ಸಖ್ಯ ಮತ್ತು (9) ಆತ್ಮನಿವೇದನ ಆಗಿವೆ. ಮುಂದಿನ ಓವೀಯಿಂದ 'ಶ್ರವಣ' ಭಕ್ತಿಯ ವಿವರಣೆಯು ಪ್ರಾರಂಭ.

ಓವೀ.ಸಂ.37 : ಋಗ್ವೇದಾದಿ ನಾಲ್ಕು ವೇದಗಳು, ತರ್ಕ, ಮೀಮಾಂಸೆ, ವ್ಯಾಕರಣ, ಸಾಂಖ್ಯ, ಯೋಗಾದಿ ಸಕಲ ಶಾಸ್ತ್ರಗಳನ್ನು ಸಂಪೂರ್ಣ ಶ್ರವಣ ಮಾಡಬೇಕು.

ವಿವರಣೆ : ಈ ಓವೀಯಿಂದ ನವವಿಧ ಭಕ್ತಿ ಪ್ರಕಾರಗಳಲ್ಲಿ 'ಶ್ರವಣ ಭಕ್ತಿ' ಎಂಬ ಮೊದಲನೆಯ ಪ್ರಕಾರವು ಪ್ರಾರಂಭವಾಗುತ್ತದೆ. ನಾಲ್ಕು ವೇದಗಳಾದ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳನ್ನು ಅರ್ಥಸಹಿತ ಕೇಳಬೇಕು. ಎಲ್ಲೆಲ್ಲಿ ಹೇಳುವರು ಸಿಗುವುದಿಲ್ಲವೋ ಆ ಸಂದರ್ಭಗಳಲ್ಲಿ ಸ್ವತಃ ಓದಿಯಾದರೂ ತಿಳಿದುಕೊಳ್ಳಬೇಕು. ತರ್ಕಶಾಸ್ತ್ರವೆಂದರೆ ನ್ಯಾಯಶಾಸ್ತ್ರವೇ ಆಗಿದೆ. ಇದು ವಿಸ್ತಾರವಾಗಿ ಬೆಳೆದಿದ್ದು ಇದರ ಜೊತೆಗೆ ವೈಶೇಷಿಕ ಶಾಸ್ತ್ರವನ್ನೂ ಅಭ್ಯಾಸ ಮಾಡಬೇಕು. ಮೀಮಾಂಸವೆಂದರೆ ಪೂರ್ವ ಮಿಮಾಂಸ ಶಾಸ್ತ್ರ (ವೇದದ ಕರ್ಮಕಾಂಡ) ಮತ್ತು ಉತ್ತರ ಮೀಮಾಂಸ ಶಾಸ್ತ್ರ ಅಂದರೆ ವೇದಾಂತ (ವೇದಗಳ ಜ್ಞಾನ ಕಾಂಡವನ್ನು ಒಳಗೊಂಡಿರುವ ಸಕಲ ಉಪನಿಷತ್ತುಗಳು) ವಾಗಿದೆ. ವ್ಯಾಕರಣವು ಸಕಲಶಾಸ್ತ್ರಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಹಾಯಕವಾಗಿರುವುದು. ಸಾಂಖ್ಯ ಯೋಗ ಶಾಸ್ತ್ರಗಳು – ಈ ಶಾಸ್ತ್ರಗಳ ಅನೇಕ ನಿಯಮಗಳನ್ನು ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ವೇದಾಂತದಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಈ ಎಲ್ಲ ಶಾಸ್ತ್ರಗಳನ್ನು ಅರ್ಥಸಹಿತ ಕೇಳಿ ಅರ್ಥಮಾಡಿಕೊಳ್ಳಬೇಕು. ಈ ಶಾಸ್ತ್ರಗಳ ಬಗ್ಗೆ ಪ್ರಾದೇಶಿಕ ಭಾಷೆಯಲ್ಲಿ ಭಾಷಾಂತರಗಳು ಸಿಕ್ಕರೆ ಅವುಗಳನ್ನೂ ಕೂಡ ಓದಿ ತಿಳಿದುಕೊಳ್ಳಬಹುದು.

ಓ.ಸಂ.38: ಸಕಲ ಪುರಾಣಗಳಾದ ಪದ್ಮಪುರಾಣ, ಸ್ಕಂದಪುರಾಣ, ವಿಷ್ಣು ಪುರಾಣ, ಗರುಡ ಪುರಾಣ, ಗಣೇಶ ಪುರಾಣ, ದೇವಿ ಪುರಾಣ ಮುಂತಾದವುಗಳನ್ನು ಶ್ರವಣ ಮಾಡಬೇಕು.

ವಿವರಣೆ : ವೇದ ವ್ಯಾಸರು ಹದಿನೆಂಟು ಪುರಾಣಗಳನ್ನು ಬರೆದಿದ್ದು ಅವು ಶಿವ, ವಿಷ್ಣು, ಗಣಪತಿ, ಸ್ಕಂದ (ಷಣ್ಮುಖ), ದೇವಿ (ಪಾರ್ವತಿ), ಮುಂತಾದ ಮುಖ್ಯದೇವತೆಗಳ ಹೆಸರಿನಲ್ಲಿರುತ್ತವೆ. ಈ ಪಂಚದೇವತೆಗಳನ್ನು ನಿತ್ಯ ಪೂಜಿಸುವ ಪಂಚಾಯತನ ಪೂಜಾ ಪದ್ಧತಿಯು ಈಗಲೂ ಕೆಲವರಲ್ಲಿ ಉಳಿದುಕೊಂಡು ಬಂದಿರುತ್ತದೆ. ಇವಲ್ಲದೇ ಪದ್ಮಪುರಾಣ, ಗರುಡ ಪುರಾಣ, ಭಾಗವತ ಮುಂತಾದ ಅನೇಕ ಉಳಿದ ಪುರಾಣಗಳೂ ಕೂಡ ಇರುತ್ತವೆ. ಈ ಕೆಲವೊಂದು ಪುರಾಣಗಳಲ್ಲಿ ವೇದಾಂತವು ಅಲ್ಲಲ್ಲಿ ಅಂತರ್ಗತವಾಗಿರುತ್ತದೆ. ಕೆಲವು ಪುರಾಣಗಳು ಸೃಷ್ಟಿಕ್ರಮವನ್ನು ವಿವರಿಸುತ್ತವೆ. ಅವುಗಳಲ್ಲಿ ಕೆಲವು ನಾರಾಯಣನಿಂದ ಹಿಡಿದು ದೀರ್ಘವಾದ ವಂಶಾವಳಿಯನ್ನು ಕೊಡುತ್ತವೆ. ಅವು ಅನೇಕ ರಾಜಮಹಾರಾಜರ ಕಥೆಗಳು ಮುಂತಾದ ಚಾರಿತ್ರಿಕ ವಿವರಗಳನ್ನೂ ಒಳಗೊಂಡಿವೆ. ಅವುಗಳ ಶ್ರವಣವನ್ನೂ ಮಾಡಬೇಕು.

ಓ.ಸಂ.39 : ಅವುಗಳಲ್ಲಿ ಕೆಲವು ಉಪಪುರಾಣಗಳು ಇದ್ದಾವೆ. ಅವುಗಳನ್ನು ಮತ್ತು ಸರ್ವಧಾರ್ಮಿಕ ಗ್ರಂಥಗಳನ್ನು ಕೇಳಬೇಕು. ಯಾವ ಸಂಶಯವೂ ಕೇಳಲು ಏನೂ ಉಳಿಯಬಾರದು. ಇದಕ್ಕೆ ಶ್ರವಣವೆಂದು ಹೇಳುತ್ತಾರೆ.

ವಿವರಣೆ : ವೇದವ್ಯಾಸರು ಬರೆದ ಮುಖ್ಯ ಹದಿನೆಂಟು ಪುರಾಣಗಳಲ್ಲದೇ ಒಂದೊಂದಕ್ಕೂ ಚಿಕ್ಕ ಉಪಪುರಾಣಗಳನ್ನು ಬರೆದಿದ್ದಾರೆಂದು ಹೇಳುತ್ತಾರೆ. ಪುರಾಣಗಳು ಬೃಹತ್ ಗ್ರಂಥಗಳಾಗಿವೆ. ಉಪಪುರಾಣಗಳು ಚಿಕ್ಕ ಗ್ರಂಥಗಳ ರೂಪದಲ್ಲಿ ಇವೆ. ಇವೂ ಕೂಡ ಹದಿನೆಂಟು ಇರುತ್ತವೆ. ಸನತ್ಕುಮಾರ ಪುರಾಣ ಮುಂತಾದ ಕೆಲವು ಪುರಾಣಗಳು ಪ್ರಸಿದ್ಧವಿರುತ್ತವೆ. ಇವುಗಳೆಲ್ಲವೂ ಶ್ರವಣಕ್ಕೆ ಯೋಗ್ಯವಾಗಿರುತ್ತವೆ. ಇವುಗಳಲ್ಲದೇ ವಾಲ್ಮೀಕ ಋಷಿಯು ಬರೆದ ರಾಮಾಯಣವೂ ಕೂಡ ಪ್ರಸಿದ್ಧವಾಗಿರುತ್ತದೆ. ವ್ಯಾಸರು ಬರೆದ ಮಹಾಭಾರತವನ್ನು ಐದನೆಯ ವೇದವೆಂದು ಕರೆಯುತ್ತಾರೆ. ಇದರಲ್ಲಿರುವ ಅತ್ಯಂತ ಪ್ರಸಿದ್ಧವಾದ ಆಧ್ಯಾತ್ಮ ಗ್ರಂಥವಾದ ಭಗವದ್ಗೀತೆಯು ಬಹಳ ಮುಖ್ಯವಾಗಿರುತ್ತದೆ. ಹೀಗೆ ಸಕಲ ಧಾರ್ಮಿಕ ಆಧ್ಯಾತ್ಮಿಕ ಗ್ರಂಥಗಳನ್ನು ಶ್ರವಣಮಾಡಬೇಕು. ಮುಖ್ಯವಾಗಿ ತಿಳಿಯಬೇಕಾಗಿರುವುದನ್ನು ಯಾವುದೂ ಬಿಡದೆ ಎಲ್ಲವನ್ನೂ ಕೇಳಬೇಕು. ಕೇಳಲು ಯಾವ ಸಂಶಯವೂ ಉಳಿಯದಂತೆ ಎಲ್ಲವನ್ನೂ ಕೇಳಿ ತಿಳಿದುಕೊಳ್ಳಬೇಕು. ಇಲ್ಲವೇ ಗ್ರಂಥಗಳನ್ನು ನಾವೇ ಓದಿ ತಿಳಿದುಕೊಳ್ಳಬೇಕು.

ಓ.ಸಂ.40: ಹೀಗೆ ಈ ರೀತಿಯ ಶ್ರವಣವನ್ನು ಭಕ್ತಿಯಿಂದ ಮಾಡುವುದರಲ್ಲಿ ಪರಮೇಶ್ವರನ ಮೇಲಿನ ಗುಣಗಾನವನ್ನು ಕೇಳಿ ಆನಂದಿಸಬೇಕು. ಇಂತಹ ಶ್ರವಣದಿಂದ ಚಿತ್ತದ ಏಕಾಗ್ರತೆಯು ಲಭಿಸಿ ಜ್ಞಾನ ಉಂಟಾಗುತ್ತದೆ.

ವಿವರಣೆ : ಹೀಗೆ ಕೇಳಬೇಕಾದ್ದನ್ನೆಲ್ಲ ಕೇಳಿ ಹಾಗೂ ಓದಬೇಕಾದ್ದನ್ನೆಲ್ಲ ಓದುವುದರಿಂದ ಇಡೀ ಜ್ಞಾನ ಭಂಡಾರ ತನ್ನದಾಗುತ್ತದೆ. ಆದರೆ ಈ ಜ್ಞಾನ ರಾಶಿಯಲ್ಲಿ ಆಧ್ಯಾತ್ಮಕ್ಕೆ ಸಂಬಂಧಪಟ್ಟ ಭಾಗವು ಅತ್ಯಂತ ಮಹತ್ವವುಳ್ಳದ್ದಾಗಿರುತ್ತದೆ. ಅದರಲ್ಲೂ ತನ್ನ ಅಂತರಾತ್ಮ ಸ್ವರೂಪವೇ ಪರಮಾತ್ಮನಾಗಿರುವುದರಿಂದ ಪರಮಾತ್ಮನ ಸ್ವರೂಪದ ಬಗ್ಗೆ ಬಂದಾಗ ಅಥವಾ ಅವನ ಗುಣಗಾನವು ಬಂದಾಗ ಪರಮಾತ್ಮನ ಬಗ್ಗೆ ಭಕ್ತಿಯು ಪ್ರಕಟವಾಗಬೇಕು. ಇದೇ ಶ್ರವಣರೂಪದ ಭಕ್ತಿಯಾಗಿರುತ್ತದೆ. ಈ ರೀತಿಯ ಭಕ್ತಿಯು ಹೆಚ್ಚಾದಷ್ಟೂ ಮನಸ್ಸಿನ ಏಕಾಗ್ರತೆಯು ತಾನೇತಾನಾಗಿ ವೃದ್ಧಿಸುತ್ತದೆ. ಇದರಿಂದ ಅತ್ಯಂತ ಸೂಕ್ಷ್ಮ ಆಧ್ಯಾತ್ಮಿಕ ವಿಚಾರಗಳು ಕೂಡ ಅನಾಯಾಸವಾಗಿ ತಿಳಿಯಲು ಸಹಾಯವಾಗುತ್ತದೆ. ಮುಂದೆ ಇದು ಬ್ರಹ್ಮಾತ್ಮೈಕ್ಯ ಜ್ಞಾನವನ್ನು ಪಡೆಯುವಲ್ಲಿ ಸಹಕಾರಿಯಾಗುತ್ತದೆ.

ಓ.ಸಂ.41: ಆದರೆ ಶ್ರವಣವನ್ನು ಗುರುಮುಖದಿಂದ ಕೇಳಬೇಕು. ಹೀಗೆ ಕೇಳಿದ್ದನ್ನು ನಂತರ ಮನನ ಮಾಡಬೇಕು. ಇದೇ ಉಪಾಯದಿಂದ ಶುಕಮುನಿಯು ಹೇಳಿದ್ದನ್ನು ಪರೀಕ್ಷಿತನು ಕೇಳಿ ನಂತರ ಮನನ ಮಾಡಿ ಮುಕ್ತನಾದನು.

ವಿವರಣೆ : ಶ್ರವಣವನ್ನು ಗುರುಮುಖದಿಂದ ಕೇಳಿ ತಿಳಿದರೆ ಅತ್ಯುತ್ತಮ. ಅದರಲ್ಲಿ ಗುರುವು ಶ್ರೋತ್ರೀಯನೂ ( ಶ್ರುತಿಯನ್ನು ತಿಳಿದವನು ) ಮತ್ತು ಬ್ರಹ್ಮನಿಷ್ಠನೂ ( ಬ್ರಹ್ಮಜ್ಞಾನಿಯು ) ಆಗಿದ್ದರೆ ಅತ್ಯುತ್ತಮ. ಬ್ರಹ್ಮವನ್ನು

ತಿಳಿದವನು ಮಾತ್ರ ಬ್ರಹ್ಮನ ಬಗ್ಗೆ ತಿಳಿಸಬಹುದು. ಅಂತಹವನಿಂದ ಕೇಳಿ–ತಿಳಿದದ್ದನ್ನು ಮಥನಮಾಡಿ ( ಮನನದಿಂದ ) ನಮ್ಮದಾಗಿಸಿಕೊಳ್ಳಬೇಕು. ಸಹಪಾಠಿಗಳೊಂದಿಗೆ ಚರ್ಚಿಸಿ ತಿಳಿದುಕೊಂಡರೆ ಒಳ್ಳೆಯದು. ಹೀಗೆ ಶ್ರವಣ ಹಾಗೂ ಮನನ ಮಾಡಿದ ವಿಷಯವು ತಿಳಿಯುತ್ತದೆ; ಅದರ ಬಗ್ಗೆ ನಮಗೆ ಸರಿಯಾದ ಜ್ಞಾನವೂ ಉಂಟಾಗುತ್ತದೆ. ಬ್ರಹ್ಮಜ್ಞಾನಿಯಾದ ಶುಕಮುನಿಯಿಂದ ಶ್ರವಣಮಾಡಿ ಪರೀಕ್ಷಿತನು ತನ್ನಲ್ಲೇ ಮನನದಿಂದ ಪಡೆದ ಜ್ಞಾನವನ್ನು ದೃಢ ಮಾಡಿಕೊಂಡು ತಾನು ಮುಕ್ತನಾದ. ಮೂವತ್ತೇಳನೆಯ ಓವೀಯಿಂದ ಈ ಓವೀಯವರೆಗೆ (ಈ ಐದು ಓವೀಗಳು ) ಶ್ರವಣ ಭಕ್ತಿಯನ್ನು ವಿವರಿಸುವುವು.

ಓ.ಸಂ.42: ಶ್ರವಣವಿಲ್ಲದೇ ಕೀರ್ತನ ಮಾಡಲು ಬರುವುದಿಲ್ಲ. ಆದ್ದರಿಂದ ಕೀರ್ತನ ಮಾಡುವವರು ಮೊದಲು ಶ್ರವಣ ಮಾಡಬೇಕು. ಅದಾಗದಿದ್ದರೆ ಕೆಲವರು ಅಷ್ಟರಿಂದಲೇ ಪಾವನರಾಗುವುದಿಲ್ಲ.

ವಿವರಣೆ : ಶ್ರವಣದಿಂದ ಅಪಾರಜ್ಞಾನವು ಲಭಿಸುತ್ತದೆ. ಅದಿಲ್ಲದೇ ಕೀರ್ತನೆ ಮಾಡಲು ಹೋದರೆ ಕೀರ್ತನ ಕಾರ್ಯಕ್ಕೆ ಅಪಚಾರವೆಸಗಿದಂತೆ. ಅಂತಹವರು ತಮಗೆ ತಾವು ದ್ರೋಹ ಬಗೆದಂತೆ ಆಗುತ್ತದೆ. ಅಲ್ಲದೇ ಕೀರ್ತನಮಾಡುವವರು ಸಕಲವನ್ನೂ ತಿಳಿದಿರಬೇಕಾಗುತ್ತದೆ. ಶ್ರವಣದಿಂದ ಬರುವ ಈ ಜ್ಞಾನದ ಜೊತೆಗೆ ಅವರಿಗೆ ಸಂಗೀತ ಜ್ಞಾನ, ಬೇಕಾದ ಕಂಠಶ್ರೀ ಮತ್ತು ವಾಕ್–ಚಾತುರ್ಯಗಳು ಇರಬೇಕಾಗುತ್ತದೆ. ಆದ್ದರಿಂದ ಕೀರ್ತನಕಾರರು ತಮಗೆ ತಿಳಿಯದ ವಿಷಯದ ಬಗ್ಗೆ ತಿಳಿದವರು ಹೇಳುವುದನ್ನು ಶ್ರವಣ ಮಾಡಿ ತಮ್ಮ ಜ್ಞಾನ ಭಂಡಾರವನ್ನು ಹೆಚ್ಚಿಸಿಕೊಳ್ಳಬೇಕು. ಹೀಗೆ ಕೆಲವರು ವೇದಾಂತ ವಿಷಯಗಳನ್ನು ಶ್ರವಣಮಾಡಿ ತಿಳಿದುಕೊಂಡು ತಮ್ಮ ಜೀವನವು ಸಾರ್ಥಕ್ಯವನ್ನು ಪಡೆಯಿತು ಅಥವಾ ಪಾವನವಾಯಿತು ಎಂದು ಭಾವಿಸುತ್ತಾರೆ. ಇಂತಹವರು ತಮ್ಮ ಜೀವಿತಾವಧಿಯಲ್ಲಿಯೇ ತಾವು ಬ್ರಹ್ಮಸ್ವರೂಪವೆಂಬ ಅಪರೋಕ್ಷ ಜ್ಞಾನವನ್ನು ಪಡೆದರೆ ಆಶ್ಚರ್ಯವಿಲ್ಲ.

ಓ.ಸಂ.43: ಒಂದು ವೇಳೆ ಶ್ರವಣಮಾಡಿಯೂ ಕೂಡ ತಾವು ಪಾವನರಾದೆವೆಂಬ ಭಾವವು ಅವರಿಗೆ ಬರದಿದ್ದರೆ, ಆಗ ಅವರು ತಾವು ಶ್ರವಣದಲ್ಲಿ ಕೇಳಿದ್ದನ್ನು ಪುನಃ ತಾವೇ ವರ್ಣಿಸಲು ಅಥವಾ ವಿವರಿಸಲು ತೊಡಗಬೇಕು. ಈ ಪ್ರಯತ್ನದಿಂದ ಅವರಿಗೆ ಮನನ ಹಾಗೂ ನಿದಿಧ್ಯಾಸನಗಳು ಬೇರೆ ಯಾವ ಪ್ರಯತ್ನವಿಲ್ಲದೇ ಸಹಜವಾಗಿ ಆಗುತ್ತವೆ.

ವಿವರಣೆ : ಹಿಂದಿನ ಓವೀಯಲ್ಲಿ ಶ್ರವಣ ಮಾಡದ ಅನೇಕ ಕೀರ್ತನಕಾರರು ಶ್ರವಣವನ್ನು ಹೊಸದಾಗಿ ಮಾಡುವುದರಿಂದ ಪಾವನವಾದಂತೆ ಭಾವಿಸುತ್ತಾರೆ. ಆದರೆ ಎಲ್ಲ ಕೀರ್ತನಕಾರರಿಗೂ ಹೊಸದಾಗಿ ಶ್ರವಣ ಮಾಡಿದಾಗ ತಾವು ಪಾವನರಾದೆವೆಂಬ ಭಾವವು ಉಂಟಾಗುವುದಿಲ್ಲ. ಅಂತಹವರು ಏನು ಮಾಡಬೇಕೆಂದು ಈ ಓವೀಯು ಹೇಳುತ್ತದೆ. ಶ್ರವಣದಲ್ಲಿ ತಾವು ಹೊಸದಾಗಿ ತಿಳಿದದ್ದನ್ನು ಇತರರಿಗೆ ತಾವೇ ಸ್ವತಃ ಹೇಳುವುದನ್ನು ಅಭ್ಯಾಸಮಾಡಬೇಕು. ಏಕೆಂದರೆ ತಾವು ತಿಳಿದದ್ದು ಧೃಡವಾಗದೇ ಇತರರಿಗೆ ಹೇಳಲು ಸಾಧ್ಯವಿಲ್ಲ. ಹೀಗೆ ಪುನಃ

ಪುನಃ ತಾವು ಶ್ರವಣದಲ್ಲಿ ತಿಳಿದದ್ದನ್ನು ಇತರರಿಗೆ ಹೇಳುವ ಅಭ್ಯಾಸ ... ತಮಗೆ ತಾವೇ ಉಂಟಾಗಿ ದೃಢವಾಗುತ್ತದೆ. ಹಾಗೆ ಮಾಡುವುದರಿಂದ ಅವರಿಗೆ ಮನನ-ನಿದಿಧ್ಯಾಸನಗಳು ತಮಗೆ ತಾವೇ ಉಂಟಾಗಿ ಅವರಿಗೆ ತಾವು ಧನ್ಯರಾದೆವೆಂಬ ಅಥವಾ ಪಾವನರಾದೆವೆಂಬ ಭಾವವು ಉಂಟಾಗುತ್ತದೆ.

**ಓ.ಸಂ.44:** ಹೀಗೆ ಶ್ರವಣದ ಹಿನ್ನೆಲೆಯು ಇರುವಂತಹ ಕೀರ್ತನಕಾರರ ಕೀರ್ತನೆಯನ್ನು ಕೇಳುವ ಜನರೂ ಕೂಡ ಪಾವನರಾಗುತ್ತಾರೆ. ನಂತರ ಈ ಜನರಿಗೆ ಆತ್ಮಸಾಕ್ಷಾತ್ಕಾರವೂ ತಾನೇ ತಾನಾಗಿ ಲಭಿಸುತ್ತದೆ.

**ವಿವರಣೆ:** ಹೀಗೆ ಯಾವ ಕೀರ್ತನಕಾರರು ತಾವು ಶ್ರವಣದಿಂದ ಕಲಿತದ್ದನ್ನು ಜನರಿಗೆ ತಿಳಿಸಿ ಹೇಳುವುದರಿಂದ ತಾವು ಪಾವನವಾದೆವೆಂಬ ಭಾವವು ಅವರಿಗೆ ಬರುವುದೋ ಅಂತಹವರು ಮಾಡಿದ ಕೀರ್ತನವು ಸಾಮಾನ್ಯ ಜನರ ಮೇಲೆ ಅತ್ಯಂತ ಪ್ರಭಾವವನ್ನು ಬೀರಲು ಸಮರ್ಥವಾಗಿರುತ್ತದೆ. ಏಕಾಗ್ರತೆಯಿಂದ ಕೇಳುವ ಜನರೂ ಕೂಡ ಇಂತಹವರ ಕೀರ್ತನೆಯನ್ನು ಕೇಳಿದ ಮೇಲೆ ತಾವು ಧನ್ಯರಾದೆವೆಂಬ ಅಥವಾ ಪಾವನರಾದೆವೆಂಬ ಭಾವನೆಯಿಂದ ಆನಂದಿತರಾಗುತ್ತಾರೆ. ಇಂತಹ ಜನರು ಒಳ್ಳೆಯ ಕೀರ್ತನೆ ಹೇಳುವವರ ಕೀರ್ತನೆಗಳನ್ನು ಎಂದೂ ತಪ್ಪಿಸಿಕೊಳ್ಳುವುದಿಲ್ಲ. ಹೀಗೆ ಒಳ್ಳೊಳ್ಳೆಯ ಕೀರ್ತನೆಯನ್ನು ಅವರು ಪುನಃ ಪುನಃ ಕೇಳುವುದರಿಂದ ಅವರಿಗೂ ಮನನ–ನಿದಿಧ್ಯಾಸನಗಳು ಆದಂತೆ ಆಗುತ್ತವೆ. ಇದರಿಂದ ಆತ್ಮಸಾಕ್ಷಾತ್ಕಾರವು ಅವರಿಗೆ ಸುಲಭವಾಗಿ ಪ್ರಾಪ್ತವಾಗುತ್ತದೆ.

**ಓ.ಸಂ.45 :** ಕೀರ್ತನೆಯಲ್ಲಿ ಮೊದಲು ಕರ್ಮಮಾರ್ಗವನ್ನು ಬೋಧಿಸಬೇಕು. ನಂತರ ಉಪಾಸನಾರ್ಥವಾಗಿ ಕರ್ಮಮಾರ್ಗವನ್ನು ಖಂಡಿಸಿ ಉಪಾಸನಾ ಮಾರ್ಗವನ್ನು ಸ್ಪಷ್ಟವಾಗಿ ವಿವರಿಸಬೇಕು.

**ವಿವರಣೆ:** ಮನುಷ್ಯನು ಸ್ವಾಭಾವಿಕವಾಗಿ ಆಹಾರ, ನಿದ್ರಾ, ಭಯ, ಮೈಥುನ ಮುಂತಾದವುಗಳನ್ನು ಪ್ರಾಣಿಗಳಿಗೆ ಸಮಾನವಾಗಿ ಹೊಂದಿರುತ್ತಾನೆ. ಆದರೆ ಧರ್ಮವೆಂಬುದು ಮನುಷ್ಯನ ವಿಶೇಷ ಗುಣವಾಗಿದೆ. ಈ 'ಧರ್ಮ' ವಿಲ್ಲದ ಮನುಷ್ಯನು ಪಶುಗಳಿಗೆ ಸಮಾನನಾಗುತ್ತಾನ ( ಯಥಾ ಖರಶ್ಚಂದನ ಭಾರವಾಹೀ ಭಾರಸ್ಯ ವೇತ್ತಾ ನ ತು ಚಂದನಸ್ಯ । ತಥೈವ ಲೋಕಾ ಬಹುಶಾಸ್ತ್ರಯುಕ್ತಾಃ ಧರ್ಮೇಣ ಹೀನಾಃ ಪಶುಭಿಃ ಸಮಾನಾಃ – ಸಮಯೋಚಿತ ಪದ್ಯರತ್ನಮಾಲಿಕಾ). ಆದ್ದರಿಂದ ಕೀರ್ತನೆಯಲ್ಲಿ ಜನರಿಗೆ ಅವರವರ ವರ್ಣ ಹಾಗೂ ಆಶ್ರಮಗಳಿಗೆ ತಕ್ಕಂತೆ ಶಾಸ್ತ್ರೋಕ್ತ ಕರ್ಮಗಳನ್ನು ಮಾಡಲು ಹೇಳಬೇಕು. ಇದರಿಂದ ಅವರಿಗೆ ಚಿತ್ತಶುದ್ಧಿಯು ಉಂಟಾಗುತ್ತದೆ. ನಂತರ ಅವರಿಗೆ ಚಿತ್ತದ ಏಕಾಗ್ರತೆಗಾಗಿ ಉಪಾಸನೆಯನ್ನು ಬೋಧಿಸಬೇಕು. ಇದಕ್ಕಾಗಿ ಅವರಿಗೆ ಕರ್ಮದ ಇತಿ-ಮಿತಿಗಳನ್ನು ತಿಳಿಸಬೇಕು. ಸಕಾಮಕರ್ಮಗಳಿಂದ ಹೇಗೆ ಬಂಧನವು ಉಂಟಾಗುತ್ತದೆ ಎಂಬುದನ್ನು ವಿವರಿಸಿ

ಅದನ್ನು ಖಂಡಿಸಬೇಕು. ನಂತರ ನಿಷ್ಕಾಮಕರ್ಮಗಳ ಜೊತೆಗೆ ಉಪಾಸನೆಗಳನ್ನು ಮಾಡುವ ವಿಧಾನವನ್ನು ವಿವರವಾಗಿ ತಿಳಿಸಬೇಕು.

**ಓ.ಸಂ.46 :** ಮೊದಲು ಜ್ಞಾನಾರ್ಥಕ್ಕಾಗಿ ಉಪಾಸನೆಗಳನ್ನು ಖಂಡಿಸಬೇಕು. ಜ್ಞಾನ ಮಾರ್ಗವನ್ನು ಕೊನೆಯಲ್ಲಿ ಹೇಳಬೇಕು. ಅದಕ್ಕಾಗಿ ಅಲ್ಲದೇ ಸರ್ವ ವಿಷಯಗಳನ್ನು ನಿಂದಿಸಿ ವೈರಾಗ್ಯದ ಹೆಚ್ಚುಗಾರಿಕೆಯನ್ನು ಪ್ರೀತಿಯಿಂದ ಕೀರ್ತನೆಯಲ್ಲಿ ನಯವಾಗಿ ತಿಳಿಸಬೇಕು.

**ವಿವರಣೆ :** ಕೀರ್ತನಕಾರರು ತಮ್ಮ ಕೀರ್ತನೆಯಲ್ಲಿ ಮನುಷ್ಯರನ್ನು ಆಸ್ತಿಕರನ್ನಾಗಿಮಾಡಲು ಮತ್ತು ಧರ್ಮಿಷ್ಠರನ್ನಾಗಿಮಾಡಲು ಅವರಿಗೆ ಕರ್ಮಮಾರ್ಗವನ್ನು ಬೋಧಿಸಬೇಕು. ನಂತರ ಉಪಾಸನೆಗಳನ್ನು ಬೋಧಿಸುವಾಗ ಕರ್ಮಕಾಂಡವನ್ನು ಖಂಡಿಸಬೇಕು. ಹಿಂದಿನ ಓವೀಯಲ್ಲೇ ಇಷ್ಟೊಂದು ವಿಷಯಗಳನ್ನು ವಿವರಿಸಲಾಗಿದೆ. ಆಮೇಲೆ ಶ್ರೋತೃಗಳಿಗೆ ಜ್ಞಾನಮಾರ್ಗವನ್ನು ತಿಳಿಸಿ ಹೇಳುವಾಗ ಕರ್ಮೋಪಾಸನೆಗಳನ್ನು ಖಂಡಿಸಬೇಕು. ಏಕೆಂದರೆ ಕರ್ಮಕಾಂಡದಲ್ಲಿ ಬರುವ ಕರ್ಮೋಪಾಸನೆಗಳಿಗೂ ಜ್ಞಾನಮಾರ್ಗಕ್ಕೂ ಪರಸ್ಪರ ವಿರೋಧವಿರುತ್ತದೆ. 'ನಾನೇ ದೇಹ' ವೆಂದು ತಿಳಿಯದೇ ಕರ್ಮೋಪಾಸನೆಗಳನ್ನು ಮಾಡಲು ಬರುವುದಿಲ್ಲ. ಆದರೆ ಜ್ಞಾನಮಾರ್ಗದಲ್ಲಿ 'ನಾನು ದೇಹವಲ್ಲ'; 'ಬ್ರಹ್ಮನಿದ್ದೇನೆ' ಎಂದು ಬೋಧಿಸಬೇಕಾಗುತ್ತದೆ. ಅದಕ್ಕಾಗಿ ಇಹ ಮತ್ತು ಪರಲೋಕದ ವಿಷಯಸುಖಗಳನ್ನು ನಶ್ವರವೆಂದು ತಿಳಿಸಿ ಅವುಗಳನ್ನು ಬಿಡಬೇಕೆಂದು ಪ್ರೀತಿಯಿಂದ ವೈರಾಗ್ಯವನ್ನು ಬೋಧಿಸಬೇಕು.

**ಓ.ಸಂ.47 :** ಕೀರ್ತನದಲ್ಲಿ ದೇವ ದರ್ಶನವನ್ನು ಜನರಿಗೆ ಸ್ಪಷ್ಟವಾಗುವಂತೆ ವಿವರಿಸಬೇಕು. ಆದರೂ ಅವರಿಗೆ ದೇವನನ್ನು ಸುಲಭವಾಗಿ ನೋಡಲು ಬಿಡಬಾರದು. ಏಕೆಂದರೆ ಪರಮಾರ್ಥದಲ್ಲಿ ಕೆಲವು ಬಹಳ ಮುಖ್ಯವಾದ ಹಾಗೂ ರಹಸ್ಯವಾದ ವಿಷಯಗಳು 'ಗುರುಗಮ್ಯ'ವಿರುತ್ತವೆ. ಅವುಗಳನ್ನು ಬಿಟ್ಟು ಉಳಿದ ಸರ್ವಪರಮಾರ್ಥ ವಿಷಯಗಳನ್ನು ಪರಿಪೂರ್ಣವಾಗಿ ಹೇಳಬೇಕು.

**ವಿವರಣೆ :** ಜನರಿಗೆ ದೇವರ ಬಗ್ಗೆ, ಅವನ ದರ್ಶನದ ಬಗ್ಗೆ ಕುತೂಹಲವೂ ಮತ್ತು ಗೊಂದಲವೂ ಇರುವುದರಿಂದ ಇದರ ಬಗ್ಗೆ ಅವರಿಗೆ ಸ್ಪಷ್ಟವಾಗಿ ವಿವರಿಸಬೇಕು. ಪ್ರತಿಯೊಬ್ಬನ ಒಳಗಿರುವ ಆತ್ಮನೇ ದೇವರೆಂದೂ, ಬೇರೆ–ಬೇರೆ ಉಪಾಧಿಗಳೊಡನೆ ಆತ್ಮನು ಸೇರಿದಾಗ ವಿವಿಧ ದೇವತೆಗಳಾಗುತ್ತಾರೆಂದೂ ಸ್ಪಷ್ಟಪಡಿಸಬೇಕು. ಜ್ಞಾನಮಾರ್ಗದಲ್ಲಿ ದೇವದರ್ಶನವೆಂದರೆ ಶುದ್ಧ ಆತ್ಮನ ದರ್ಶನವೇ ಆಗಿರುತ್ತದೆ. ಅಧ್ಯಾತ್ಮಶಾಸ್ತ್ರವನ್ನು ಏಕಾಂತದಲ್ಲಿ ಗುರುಮುಖೇನ ಕಲಿಯಬೇಕಾಗುತ್ತದೆ. ಏಕೆಂದರೆ ಗಹನವಾದ ಪಾರಮಾರ್ಥಿಕವಾದ ಕೆಲವೊಂದು ರಹಸ್ಯ ವಿಷಯಗಳನ್ನು ಗುರುಮುಖೇನ ಮಾತ್ರವೇ ಕಲಿಯಬೇಕಾಗುತ್ತದೆ.

ಅವುಗಳನ್ನು ಕೀರ್ತನೆಗಳಲ್ಲಿ ಸೇರಿರುವ ಸಕಲ ಜನರಿಗೆ ಹೇಳಿದರೆ ದುರುಪಯೋಗವಾಗುವುದೆಂದೂ, ಕೆಲವೊಂದು ವಿಷಯಗಳನ್ನು ಹೇಳಬಾರದೆಂದೂ ಹಾಗೂ ಅವುಗಳನ್ನು 'ಗುರುಗಮ್ಯ'ವೆಂದೂ ಹೇಳಲಾಗಿದೆ. ಅವುಗಳನ್ನು ಬಿಟ್ಟು ಉಳಿದ ಸಕಲ ಪಾರಮಾರ್ಥಿಕ ವಿಷಯಗಳನ್ನು ಸ್ಪಷ್ಟವಾಗಿ ತಿಳಿಸಿ ಹೇಳಬೇಕು. ಏಕೆಂದರೆ "ತತ್ತ್ವಮಸಿ" ಮುಂತಾದ ಮಹಾವಾಕ್ಯಗಳ ಅರ್ಥವು ಕ್ಲಿಷ್ಟವಾಗಿದ್ದು ಅದನ್ನು ಗುರುಮುಖೇನವೇ ಕಲಿಯಬೇಕಾಗುತ್ತದೆ.

**ಓ.ಸಂ.48 :** ಕೀರ್ತನೆಯು ಶ್ರೋತೃಗಳಿಗೆ ರುಚಿಸಲೆಂದು ಸ್ವಲ್ಪ ಹಾಸ್ಯಾದಿ ರಸಗಳನ್ನು ಮಧುರವಾಗಿ ಬೆರೆಸಿ ಕೀರ್ತನ ಮಾಡಬೇಕು. ಆದರೆ ಮುಖ್ಯ ವಿಷಯವನ್ನು ಸಂರಕ್ಷಿಸುತ್ತಾ ಬಿಡದೆ ಸರಿಯಾಗಿ ವಿವರಿಸಬೇಕು.

**ವಿವರಣೆ :** ಈ ಓವೀಗಳಲ್ಲಿ ಕೀರ್ತನವನ್ನು ಹೇಗೆ ಮಾಡಬೇಕು ಎನ್ನುವುದರ ಬಗ್ಗೆ ವಿವರವಾಗಿ ತಿಳಿಸಲಾಗಿದೆ. ಈ ಓವೀಯಲ್ಲೂ ಅದನ್ನು ತಿಳಿಸಲಾಗಿದೆ. ಸಾಮಾನ್ಯವಾಗಿ ಎಲ್ಲ ಕೀರ್ತನೆಗಳಲ್ಲೂ ಕೀರ್ತನಕಾರರು ಹಾಸ್ಯಭರಿತ ಚಟಾಕಿಗಳನ್ನು ಹಾರಿಸುತ್ತಾರೆ. ಮುಖ್ಯ ಕಥಾ ನಿರೂಪಣೆಯಲ್ಲಿ ಸಣ್ಣ-ಸಣ್ಣ ಉಪಕಥೆಗಳನ್ನು ಹೇಳುತ್ತಾರೆ. ಆದರೆ ಕೀರ್ತನದಲ್ಲಿ ಹಾಸ್ಯರಸವೇ ಮುಖ್ಯ ಕಥಾ ಭಾಗಕ್ಕಿಂತ ಮುಖ್ಯವಾಗಬಾರದು. ಕೆಲವರು ಉಪಕಥೆಗಳನ್ನು ಉದ್ದ ಬೆಳೆಸಿ ಶ್ರೋತೃಗಳು ಮುಖ್ಯಕಥೆಯನ್ನೇ ಮರೆಯುವಂತೆ ಮಾಡುತ್ತಾರೆ. ಕೆಲವರು ರಾಗ-ತಾಳಜ್ಞಾನವಿಲ್ಲದೇ, ಸುಂದರವಾಗಿ ಹೇಳಲು ಕಂಠವಿಲ್ಲದಿದ್ದರೂ ಕೀರ್ತನಮಾಡಲು ಹೋಗುತ್ತಾರೆ. ಇವೆಲ್ಲ ಒಳ್ಳೆಯ ಕೀರ್ತನೆಗಳಾಗುವುದಿಲ್ಲ. ಹೇಳುವ ಮುಖ್ಯವಿಷಯವನ್ನು ಇಲ್ಲವೇ ಮುಖ್ಯಕಥೆಯನ್ನು ವಿವರವಾಗಿ ತಿಳಿದುಕೊಂಡು ಕೀರ್ತನೆ ಮಾಡಬೇಕು. ಮುಂದಿನ ಕೆಲವು ಓವೀಗಳು ಇನ್ನೂ ಸ್ವಲ್ಪ ಹೆಚ್ಚಾಗಿ ಈ ವಿಷಯವನ್ನೇ ವಿವರಿಸುತ್ತವೆ.

**ಓ.ಸಂ.49 :** ಹೀಗೆ ಎಚ್ಚರಿಕೆಯನ್ನು ತೆಗೆದುಕೊಳ್ಳದಿದ್ದರೆ ಕೆಲವು ಹಾಡನ್ನು ಕಲಿತು, ಕೆಲವು ಸಂತರ ಕತೆಗಳನ್ನು ಕಂಠಪಾಠಮಾಡಿ, ಈ ಪಶುಸಮಾನರು ಹಣಕ್ಕಾಗಿ ವ್ಯಾಪಾರದಲ್ಲಿ ತೊಡಗಿ, ಕೀರ್ತನೆಯ ನಾಟಕವನ್ನು ಮಾಡುತ್ತಾರೆ.

**ವಿವರಣೆ :** ಈವರೆಗೆ ಹಿಂದಿನ ಓವೀಗಳಲ್ಲಿ ಕೀರ್ತನೆಯನ್ನು ಹೇಗೆ ಮಾಡಬೇಕು ಎನ್ನುವ ಬಗ್ಗೆ ವಿಸ್ತಾರವಾಗಿ ತಿಳಿಸಲಾಗಿದೆ. ಈ ಓವೀಯಿಂದ ಮುಂದೆ ಈ ಎಚ್ಚರಿಕೆಯ ಕ್ರಮವನ್ನು ಅನುಸರಿಸದಿದ್ದಲ್ಲಿ ಕೀರ್ತನೆಗಳು ಯಾವ ಮೌಲ್ಯವನ್ನೂ ಹೊಂದಿರದೇ ಕಳಪೆಯಾಗುತ್ತವೆ ಎಂಬುದಾಗಿ ತಿಳಿಸಲಾಗಿದೆ. ಕೆಲವು ಕೀರ್ತನಕಾರರು ಯಾವ

ಶ್ರಮವನ್ನೂ ಪಡದೇ ಅಲ್ಪ-ಸ್ವಲ್ಪ ಹಾಡು ಹೇಳುವುದನ್ನು ಕಲಿತು ಕೆಲವು ಹಾಡುಗಳನ್ನು ಹಾಗೂ ಕೆಲವು ಸಾಧು-ಸಂತರ ಜೀವನ ಚರಿತ್ರೆಯನ್ನು ಕಂಠಪಾಠ ಮಾಡಿ ಕೀರ್ತನ ಹೇಳಲು ಹೋಗುತ್ತಾರೆ. ಇಂತಹವರು ಕೀರ್ತನ ಮಾಡಿದರೆ ಯಾವುದೇ ರೀತಿಯಲ್ಲಿ ಭಕ್ತಿಯು ಉಂಟಾಗುವುದಿಲ್ಲ. ಇಂತಹ ಪಶುಸಮಾನರು ಪವಿತ್ರವಾದ ಕೀರ್ತನ ಕಾರ್ಯವನ್ನು ಹಣ ಪಡೆಯುವ ದುರಾಸೆಯಿಂದ ವ್ಯಾಪಾರವನ್ನಾಗಿ ಮಾಡುತ್ತಾರೆ. ಈಗಿನ ಕಾಲದಲ್ಲಿ ಕೆಲವು ಕೀರ್ತನಕಾರರ ಕೀರ್ತನೆಗಳನ್ನು ಕೇಳಿದಾಗ ಮೇಲೆ ಹೇಳಿರುವ ಸಂಗತಿಯು ಅಕ್ಷರಶಃ ಸತ್ಯವೆಂಬುದು ತಿಳಿಯುತ್ತದೆ.

**ಓ.ಸಂ.50 :** ಕೀರ್ತನಕಾರನ ಉದ್ದೇಶವು ಮುಖ್ಯವಾಗಿ ಹಣಸಂಪಾದನೆಯೇ ಆಗಿರುವುದಾದರೆ ಅವನು ಜನರ ಮನಸ್ಸನ್ನು ಕೇವಲ ರಂಜಿಸುವುದರಿಂದ ಅವನಿಗೆ ಜ್ಞಾನ ಸಂಪಾದನೆಯು ಸಾಧ್ಯವಿಲ್ಲ.

**ವಿವರಣೆ :** ಈ ಓವೀಯಿಂದ ಕೀರ್ತನೆಯ ಮುಖ್ಯ ಉದ್ದೇಶವು ಶ್ರೋತೃಗಳಿಗೆ ಜ್ಞಾನಸಂಪಾದನೆಯು ಆಗಬೇಕೆಂಬುದೇ ಆಗಿರುತ್ತದೆ ಎಂದು ತಿಳಿಯುತ್ತದೆ. ಕೀರ್ತನಕಾರರು ತಮ್ಮ ಕೀರ್ತನದ ಮಟ್ಟವು ಕಳಪೆಯಾಗಿರುವುದನ್ನು ಲಕ್ಷಿಸದೇ ತಾವು ಕೀರ್ತನ ಮಾಡಲು ಮೊದಲೇ ಇಷ್ಟು ಹಣ ಕೊಡಬೇಕೆಂದು ಕರಾರು ಮಾಡಿ ಕೀರ್ತನ ಮಾಡುತ್ತಾರೆ ಎಂಬುದು ಅನೇಕ ಕಡೆ ಸತ್ಯವಾದ ಸಂಗತಿಯಾಗಿರುತ್ತದೆ. ಸಾಮಾನ್ಯ ಜನರು ತಮಗೆ ರಂಜನೆಯೇ ಮುಖ್ಯವೆಂದು ತಿಳಿದು ಇಂತಹ ಕಳಪೆಯಾದ ಕೀರ್ತನೆಗಳಿಗೆ ಹಾಜರಾಗಬಹುದು ಮತ್ತು ಅಂತಹವುಗಳನ್ನು ಮೆಚ್ಚಲೂಬಹುದು. ಆದರೆ ಇಂತಹ ಕಳಪೆ ಕೀರ್ತನೆಗಳಿಂದ ಯಾವುದೇ ರೀತಿಯ ಜ್ಞಾನ ಸಂಪಾದನೆಯು ಯಾರಿಗೂ ಸಾಧ್ಯವಿಲ್ಲ. ಏಕೆಂದರೆ ಹೇಳುವವರಿಗೇ ಜ್ಞಾನವಿಲ್ಲದಾಗ ಅದನ್ನು ಕೇಳುವವರಿಗೆ ಹೇಗೆ ಜ್ಞಾನ ಸಂಪಾದನೆಯಾದೀತು? ಅಂದರೆ ಆಗಲು ಸಾಧ್ಯವಿಲ್ಲ ಎಂದರ್ಥ.

**ಓ.ಸಂ.51 :** ಈ ರೀತಿಯ ಕಳಪೆ ಕೀರ್ತನ ಮಾಡುವವರಿಗೂ ಮತ್ತು ಅದನ್ನೇ ಮೆಚ್ಚಿ ಕೇಳುವರಿಗೂ ನರಕ ಪ್ರಾಪ್ತಿಯಾಗುವುದು. ಈವರೆಗೆ ಹೇಳಿದಂತಹ ಎಚ್ಚರಿಕೆಯ ಮಾತುಗಳನ್ನು ಅನುಸರಿಸಿದರೆ ಹೇಳುವವರಿಗೂ ಮತ್ತು ಕೇಳುವವರಿಗೂ ಒಳ್ಳೆಯದಾಗುತ್ತದೆ. ಒಳ್ಳೆಯ ಕೀರ್ತನೆಮಾಡಿಯೇ ಶುಕಮುನಿಯು ಮುಕ್ತನಾದನು.

**ವಿವರಣೆ :** ಮುಂದಿನ ಓವೀಯ ಪ್ರಥಮ ಚರಣವನ್ನು ಈ ಓವೀಯಲ್ಲಿಯೇ ತೆಗೆದುಕೊಂಡು ವಿವರಿಸಲಾಗಿದೆ. ಹೀಗೆ ದ್ರವ್ಯಕ್ಕಾಗಿ ಕೀರ್ತನಮಾಡುವ ನಾಟಕದಿಂದ ವ್ಯಾಪಾರ ಮಾಡುವವರು ಹಾಗೂ 'ಅಂತಹವರಿಂದ ಮನಸ್ಸಿಗೆ ರಂಜನೆಯು ಸಿಗುತ್ತದೆ' ಎಂಬ ಉದ್ದೇಶದಿಂದ ಅಂತಹ ಕಳಪೆ ಕೀರ್ತನೆಯನ್ನು ಕೇಳುವವರು – ಈ ಎರಡೂ ವರ್ಗದವರು ತಮಗೆ ತಾವೇ ಮೋಸಹೋಗುತ್ತಿದ್ದಾರೆ. ಈ ಎರಡೂ ವರ್ಗದವರಿಗೆ ಮುಂದೆ ನರಕಪ್ರಾಪ್ತಿಯಾಗುವುದು ನಿಶ್ಚಯವಾಗಿರುತ್ತದೆ. ಹಿಂದಿನ ಓವೀಗಳಲ್ಲಿ ಕೊಟ್ಟ ಎಚ್ಚರಿಕೆಯ ಮಾತುಗಳನ್ನು

ಕೀರ್ತನಕಾರರು ಆಳವಡಿಸಿಕೊಳ್ಳಬೇಕು. ಇದರಿಂದ ಅವರು ಒಳ್ಳೆಯ ಕೀರ್ತನಕಾರರಾಗುವರು. ಹಾಗೆಯೇ ಶ್ರೋತೃಗಳು ಕಳಪೆ ಕೀರ್ತನಗಳನ್ನು ರಂಜನೆಗಾಗಿ ಕೇಳಿ ತಮ್ಮ ಅಮೂಲ್ಯ ವೇಳೆಯನ್ನು ಹಾಳು ಮಾಡಿಕೊಳ್ಳಬಾರದು. ಒಳ್ಳೆಯ ಕೀರ್ತನೆಗಳನ್ನು ಕೇಳಿದರೆ ಅವರಿಗೂ ಒಳ್ಳೆಯದಾಗುವುದು. ಅಮೂಲ್ಯವಾದ ಕೀರ್ತನೆಗಳನ್ನು ಮಾಡುವುದರಿಂದಲೇ ಶುಕಮುನಿಯು ಮುಕ್ತನಾದನು. ಅಂತಹ ಕೀರ್ತನೆಗಳನ್ನು ಕೇಳಿಯೇ ಪರೀಕ್ಷಿತನೂ ಕೂಡ ಮುಕ್ತನಾದನು. ಈ ಓವೀಯೇ ಕೀರ್ತನ ಭಕ್ತಿಗೆ ಕೊನೆಯದಾಗಿದೆ. ಓವೀಸಂ.42ರಿಂದ 51ರವರೆಗೆ, ಅಂದರೆ 10 ಓವೀಗಳು, ಕೀರ್ತನೆಯೆಂಬ ಭಕ್ತಿ ಪ್ರಕಾರಗಳಿಗೆ ಮೀಸಲಾಗಿವೆ.

**ಓ.ಸಂ.52 :** ಈಗ 'ಸ್ಮರಣ ಭಕ್ತಿ' ಎಂಬ ಮೂರನೆಯ ಭಕ್ತಿ ಪ್ರಕಾರದ ಲಕ್ಷಣಗಳು ಹೇಳಲ್ಪಡುತ್ತವೆ. ಚಿತ್ತ-ಶುದ್ಧಿಯಿಂದ ಅದನ್ನು ಶ್ರವಣ ಮಾಡಬೇಕು.

**ವಿವರಣೆ :** ನವವಿಧ ಭಕ್ತಿಯಲ್ಲಿರುವ ವಿವಿಧ ಪ್ರಕಾರಗಳು ಬ್ರಹ್ಮಜ್ಞಾನ ಪ್ರಾಪ್ತಿಗೆ ಸಾಧನಗಳಾಗಿವೆ. ನಿಷ್ಕಾಮಕರ್ಮದಿಂದ ಯಾರಿಗೆ ಚಿತ್ತಶುದ್ಧಿಯಾಗಿರುತ್ತದೋ ಅಂತಹವರಿಗೆ ಚಿತ್ತದ ಏಕಾಗ್ರತೆಗಾಗಿ ಶ್ರವಣಾದಿ ನವವಿಧ ಭಕ್ತಿಯಿಂದ ಉಂಟಾಗುವ 'ಏಕಾಗ್ರತೆಯೂ', ತನ್ಮೂಲಕ 'ಜ್ಞಾನ ಪ್ರಾಪ್ತಿ'ಯೂ ಆಗುತ್ತದೆ. ಚಿತ್ತ-ಶುದ್ಧಿಯನ್ನು ಹಾಗೂ ಚಿತ್ತದ ಏಕಾಗ್ರತೆಯನ್ನು ಪಡೆಯುವಲ್ಲಿ ತರ-ತಮಗಳು ಇರುವುದು ಸ್ವಾಭಾವಿಕವಾಗಿದೆ. ಅದರಿಂದ ಉಂಟಾಗುವ ಅಧಿಕಾರಿಭೇದವು ಸ್ವಾಭಾವಿಕವಾಗಿರುತ್ತದೆ. ಅತ್ಯಂತ ಉತ್ತಮ ಅಧಿಕಾರಿಯಲ್ಲಿ ಗರಿಷ್ಠ ಪ್ರಮಾಣದಲ್ಲಿ ಚಿತ್ತಶುದ್ಧಿಯೂ ಹಾಗೂ ಚಿತ್ತದ ಏಕಾಗ್ರತೆಯೂ ಇದ್ದು ಅವನಿಗೆ ಕೇವಲ ಶ್ರವಣ ಭಕ್ತಿಮಾತ್ರದಿಂದಲೇ ಜ್ಞಾನ ಪ್ರಾಪ್ತಿಯಾಗುತ್ತದೆ. ಕೆಲವರಿಗೆ ಶ್ರವಣದ ಜೊತೆ ಕೀರ್ತನವೂ ಬೇಕಾಗುತ್ತದೆ. ಇನ್ನೂ ಕೆಲವರಿಗೆ ಶ್ರವಣ ಮತ್ತು ಕೀರ್ತನದ ಜೊತೆಗೆ ಸ್ಮರಣಭಕ್ತಿಯೂ ಬೇಕಾಗುತ್ತದೆ. 'ಸ್ಮರಣೆ' ಎಂದರೇನು? ಏನನ್ನು ಸ್ಮರಣ ಮಾಡಬೇಕು? ಅದು ಹೇಗೆ ಎಂಬೀ ಮುಂತಾದ ಪ್ರಶ್ನೆಗಳಿಗೆ ಮುಂದಿನ ಓವೀಯಿಂದ ಉತ್ತರವನ್ನು ಹೇಳುವುದರ ಮೂಲಕ ಸ್ಮರಣಭಕ್ತಿಯ ಸ್ವರೂಪವನ್ನು ಅಥವಾ ಲಕ್ಷಣಗಳನ್ನು ತಿಳಿಸಲಾಗಿದೆ. ಅದನ್ನು ಏಕಾಗ್ರತೆಯಿಂದ ಅರ್ಥಮಾಡಿಕೊಳ್ಳಬೇಕು.

**ಓ.ಸಂ.53:** ಹಿಂದೆ ಕಲಿತದ್ದನ್ನು ಮರೆತುಹೋಗಿ ಅದರ ನೆನಪು ಮಾಡಿಕೊಳ್ಳುವುದೇ ಮುಖ್ಯವಾಗಿ ಸ್ಮರಣವಾಗಿದೆ. ಈ ಸ್ಮರಣಭಕ್ತಿಯು ಅಧಿಕಾರೀ-ಮುಮುಕ್ಷುಗಳನ್ನು ತತ್‌ಕ್ಷಣವೇ ಮುಕ್ತರನ್ನಾಗಿ ಮಾಡುತ್ತದೆ.

**ವಿವರಣೆ :** ಈ ಓವೀಯಲ್ಲಿ 'ಸ್ಮರಣ ಭಕ್ತಿ' ಎಂದರೇನು ಎಂಬ ಪ್ರಶ್ನೆಗೆ ಉತ್ತರವನ್ನು ಹೇಳಿದ್ದಾರೆ ಮತ್ತು ಯಾರಿಗೆ ಈ ಸ್ಮರಣ ಭಕ್ತಿಯಿಂದ ಮೋಕ್ಷವಾಗುವುದು ಎಂಬ ಪ್ರಶ್ನೆಗೂ ಉತ್ತರ ಹೇಳಿದ್ದಾರೆ.

ಮರೆತುಹೋದದ್ದನ್ನು ನೆನಪುಮಾಡಿಕೊಳ್ಳುವುದೇ ಸ್ಮರಣವಾಗುತ್ತದೆ. ಆದರೆ ಯಾವುದನ್ನು ಮರೆತಿರುವುದು? ಯಾರು ಶ್ರವಣ-ಕೀರ್ತನಗಳನ್ನು ಕೇಳಿರುತ್ತಾರೋ ಮತ್ತು ಹಿಂದೆ ಕೇಳಿದ್ದ ಸ್ವಸ್ವರೂಪವನ್ನು (ಬ್ರಹ್ಮಜ್ಞಾನವನ್ನು) ಪರೋಕ್ಷವಾಗಿ ಪಡೆದಿರುತ್ತಾರೋ ಅಂತಹ ಮುಮುಕ್ಷುಜನರು ಹಿಂದೆ ಗುರುವಿನಿಂದ ಕಲಿತಿರುವ ಬ್ರಹ್ಮಜ್ಞಾನವನ್ನು ಮರೆತಿರುವುದರಿಂದ ಅದನ್ನು ನೆನಪು ಮಾಡಿಕೊಂಡು ತಮ್ಮ ಸ್ವಸ್ವರೂಪದ ಅನುಭವವನ್ನು ಪಡೆದು ಮುಕ್ತರಾಗುತ್ತಾರೆ. ಅವರು ಪಡೆಯುವ ಆತ್ಮಾನುಭವವು, ಅವರು ಹಿಂದೆ ಪಡೆದ ಪರೋಕ್ಷಜ್ಞಾನವು ಅಪರೋಕ್ಷ ಜ್ಞಾನವಾಗುವಂತೆ ಮಾಡುವುದರಿಂದ, ಅವರಿಗೆ ತತ್‌ಕ್ಷಣವೇ ಮೋಕ್ಷ ಲಭಿಸುವಂತೆ ಮಾಡುತ್ತದೆ. ಇದರ ಬಗ್ಗೆ ವಿವರಣೆಯು ಮುಂದಿನ ಓವೀಗಳಲ್ಲಿದೆ.

**ಓ.ಸಂ.54:** ಸ್ಮರಣವು ಜ್ಞಾನರೂಪವಾಗಿರಬೇಕು. ಅದು ಅವಿದ್ಯೆಯನ್ನು ನಾಶಮಾಡುವ ವಿದ್ಯೆ ಅಥವಾ ಜ್ಞಾನವಾಗಿರುತ್ತದೆ. ದೀಪವು ಉರಿಯುತ್ತಾ ಎಲ್ಲ ತುಪ್ಪವನ್ನು ಸುಟ್ಟು ಹಾಕಿ ತಾನೂ ನಾಶವಾಗುತ್ತದೆ. ಹಾಗೆಯೇ ಜ್ಞಾನವು ಅಜ್ಞಾನವನ್ನು ನಾಶಮಾಡಿ ತಾನೂ ಬ್ರಹ್ಮನಲ್ಲಿ ಲೀನವಾಗುತ್ತದೆ.

**ವಿವರಣೆ :** ಸ್ಮರಣವು ಹೇಗಿರಬೇಕು ಎನ್ನುವುದನ್ನು ಒಂದು ದೃಷ್ಟಾಂತದ ಮೂಲಕ ಈ ಓವೀಯಲ್ಲಿ ವಿವರಿಸಲಾಗಿದೆ. ಸ್ಮರಣವೆಂದರೆ ಕೇವಲ ಶಾಬ್ದಿಕವಾಗಿ ಪುನರಾವರ್ತನೆ ಮಾಡುವುದಲ್ಲ. ಅಂದರೆ 'ಅಹಂ ಬ್ರಹ್ಮಾಸ್ಮಿ' ಅನ್ನುವುದನ್ನು ಅರ್ಥ ತಿಳಿಯದೇ ಜಪಿಸುವುದಲ್ಲ. ಈ ಮಹಾವಾಕ್ಯದ ಅರ್ಥವನ್ನು ಶಾಸ್ತ್ರ ಹಾಗೂ ಗುರುಗಳು ವಿವರಿಸಿದ ರೀತಿಯಲ್ಲಿ ಅಂದರೆ 'ಭಾಗತ್ಯಾಗಲಕ್ಷಣೆ' ಯಿಂದ ಉಂಟಾದ ಜ್ಞಾನದ ಸ್ಮರಣೆಯನ್ನು ಮಾಡಬೇಕು. ಇದರಿಂದ ಸ್ವಸ್ವರೂಪದ ಅನುಭವದಲ್ಲಿ ಈ ಜ್ಞಾನವು ಅಜ್ಞಾನವನ್ನು ನಾಶಮಾಡಿ ತಾನೂ ಬ್ರಹ್ಮನಲ್ಲಿ ಲೀನವಾಗುತ್ತದೆ. ಇದು ಹೇಗೆ ತುಪ್ಪದ ದೀಪವು ಉರಿಯುತ್ತಾ ಎಲ್ಲ ತುಪ್ಪವನ್ನು ಸುಟ್ಟು ಹಾಕಿ ತಾನೂ ಆರಿಹೋಗುವುದೋ ಹಾಗೆ. ಸ್ಮರಣೆಯಿಂದ ಉಂಟಾದ ಮತ್ತು ಮರೆತುಹೋದ ನಮ್ಮ ಸ್ವಸ್ವರೂಪದ ಅನುಭವಸಹಿತವಾದ ಜ್ಞಾನವು ಸ್ವಸ್ವರೂಪದ ಅಜ್ಞಾನವನ್ನು ನಾಶಮಾಡುತ್ತದೆ ಹಾಗೂ ತಾನೂ ಬ್ರಹ್ಮನಲ್ಲಿ ಲೀನವಾಗುತ್ತದೆ. ಇದರ ವಿವರಣೆಯನ್ನು ಮುಂದಿನ ಓವೀಯಲ್ಲಿ ಕೊಡಲಾಗಿದೆ.

**ಓ.ಸಂ.55:** ಹಿಂದಿನ ದೃಷ್ಟಾಂತದಲ್ಲಿನ ದೀಪದಂತೆ ಜ್ಞಾನರೂಪ ಸ್ಮರಣವು ಸ್ವಸ್ವರೂಪದ ವಿಸ್ಮೃತಿಯನ್ನು ಅಂದರೆ ಅಜ್ಞಾನವನ್ನು ಹಾಗೂ ಅದರ ಕಾರ್ಯವನ್ನು ಸುಟ್ಟು ಹಾಕಿ ತಾನೂ ಬ್ರಹ್ಮನಲ್ಲಿ ಲೀನವಾಗುತ್ತದೆ.

**ವಿವರಣೆ :** ಹಿಂದಿನ ಓವೀಯಲ್ಲಿ ದೀಪದ ದೃಷ್ಟಾಂತವನ್ನು ವಿವರಿಸಿ ಈ ಓವೀಯಲ್ಲಿ ಅದರ ದಾರ್ಷ್ಟಾಂತವನ್ನು ಅಂದರೆ ಅದರ ಅನ್ವಯವನ್ನು ವಿವರಿಸಿದ್ದಾರೆ. ದೀಪವು ತುಪ್ಪವನ್ನೆಲ್ಲ ಸುಟ್ಟುಹಾಕಿ ಕೊನೆಗೆ ತಾನೂ

ನಾಶವಾಗುವಂತೆ ಜ್ಞಾನವೃತ್ತಿಯು ಅಜ್ಞಾನವೃತ್ತಿಯನ್ನು ನಾಶಮಾಡಿ ಕೊನೆಗೆ ತಾನೂ ಇಲ್ಲವಾಗುತ್ತದೆ. ಇಲ್ಲಿ ಜ್ಞಾನರೂಪ ಸ್ಮರಣೆಯೆಂದರೆ ಸ್ಮರಣದಲ್ಲಿ ಉಂಟಾದ ಜ್ಞಾನವಾಗಿರುತ್ತದೆ. ಸ್ವಸ್ವರೂಪ ವಿಸ್ಮೃತಿಯೆಂದರೆ ತನ್ನ ನಿಜವಾದ ಸ್ವರೂಪವನ್ನು ಮರೆತಿರುವುದು ( ಅಜ್ಞಾನ ). ಅನಾದಿಕಾಲದಿಂದ 'ತಾನು ಬ್ರಹ್ಮನು'ಎಂಬ ನಿಜ ಸ್ವರೂಪವನ್ನು ಮರೆತು ಹೋಗಿ 'ತಾನು ದೇಹವು' ಎಂಬ ಅಜ್ಞಾನದಲ್ಲಿ ಮನುಷ್ಯನು ವ್ಯವಹರಿಸುತ್ತಿದ್ದಾನೆ. ಇದನ್ನೇ ಮಿಥ್ಯಾಜ್ಞಾನವೆಂದು ವೇದಾಂತದಲ್ಲಿ ಕರೆಯಲಾಗಿದೆ. ಇದಕ್ಕೆ ವಿರುದ್ಧವಾಗಿರುವುದು 'ನಾನು ಬ್ರಹ್ಮನು' ಎಂಬ ಜ್ಞಾನವೃತ್ತಿಯಾಗಿರುತ್ತದೆ. ಇಲ್ಲಿ ಜ್ಞಾನಾಜ್ಞಾನಗಳೆರಡೂ ಮನಸ್ಸಿನ ಜಡವೃತ್ತಿಗಳಾಗಿರುವುದರಿಂದ ಒಂದರಿಂದ ಇನ್ನೊಂದು ನಾಶವಾಗುತ್ತದೆ. ಇಲ್ಲಿ ಅಜ್ಞಾನವು ನಾಶವಾದರೆ ಅದರ ಕಾರ್ಯವಾದ ಅನಾದಿ ಸಂಸಾರದ ಜೊತೆಗೆ ಜಗತ್ತಿನ ಸತ್ಯತ್ವವೂ ನಾಶವಾಗುತ್ತದೆ. ಅಲ್ಲದೇ ಜ್ಞಾನವೃತ್ತಿಯು ಅನುಭವದಲ್ಲಿ ಪರ್ಯಾವಸಾನವಾಗಿ ಬ್ರಹ್ಮನಲ್ಲಿ ಲೀನವಾಗಲು ಕಾರಣವಾಗುತ್ತದೆ. ಹಾಗೆಯೇ ನಾನು ಬ್ರಹ್ಮನೆಂಬ ಅನುಭವದಿಂದ ಜಡವಾದ ಜ್ಞಾನವೃತ್ತಿಯು ತನಗೆ ತಾನೇ ನಾಶವಾಗುತ್ತದೆ.

<u>ಓ.ಸಂ. 56</u> : 'ಸ್ಮರಣ' ಭಕ್ತಿಯು ಶ್ರವಣ ಹಾಗೂ ಕೀರ್ತನೆಗಳಿಂದ ಉಂಟಾಗುವುದು. 'ಅಹಂ ಬ್ರಹ್ಮ' ಸ್ಮರಣವೇ ಸ್ಫುರಣವಾಗಿದ್ದು ಅದರಿಂದ ಅನಾದಿಯಾದ 'ಜೀವ'ನ ಸಂಸಾರವು ಅಂದರೆ ಭವಬಂಧನವು ನಾಶವಾಗುವುದು.

<u>ವಿವರಣೆ :</u> ಕೆಲವರಿಗೆ ಶ್ರವಣವಿಲ್ಲದೇ ಕೀರ್ತನವು ಉಂಟಾಗುವುದಿಲ್ಲ. ಹಾಗೆಯೇ ಶ್ರವಣ–ಕೀರ್ತನಗಳೆರಡೂ ಇಲ್ಲದೇ ಸ್ಮರಣವು ಉಂಟಾಗುವುದಿಲ್ಲ. ಗುರುಮುಖೇನ ತಾನು ಬ್ರಹ್ಮನೆಂಬುದನ್ನು ತಿಳಿಯುವುದೇ ಶ್ರವಣವಾಗಿದೆ. ಹೀಗೆ ತಿಳಿದಿದ್ದನ್ನು ಇನ್ನೊಬ್ಬರಿಗೆ ವಿವರಿಸಿ ಹೇಳುವುದೇ ಕೀರ್ತನವಾಗಿದೆ. ಹೀಗೆ ಶ್ರವಣ–ಕೀರ್ತನಗಳಿಂದ ಪಡೆದ ಜ್ಞಾನವನ್ನು ಆಗಾಗ ಸ್ಮರಿಸುತ್ತಿರಬೇಕು. ಪ್ರತಿಸಲವೂ ಅದು ಅನುಭವದಲ್ಲಿ ಪರ್ಯವಸಾನವಾಗಿ ಮೊದಲೇ ಇದ್ದ ಪರೋಕ್ಷಜ್ಞಾನವು ದೃಢವಾದ ಅಪರೋಕ್ಷಜ್ಞಾನವಾಗುತ್ತದೆ. 'ನಾನು ಬ್ರಹ್ಮ' ನೆಂಬ ದೃಢವಾದ ಜ್ಞಾನವೇ ಅನಾದಿಕಾಲದಿಂದ ಇರುವ 'ನಾನು ದೇಹವಾಗಿದ್ದೇನೆ' ಅನ್ನುವ ಅಜ್ಞಾನವನ್ನು ನಾಶಮಾಡುತ್ತದೆ. 'ತಾನು ದೇಹವಾಗಿದ್ದೇನೆ' ಎನ್ನುವುದು ಸತ್ಯವೆಂಬ ಭ್ರಮೆಯಲ್ಲಿ 'ತನ್ನ ಹೆಂಡತಿ', 'ಮನೆ–ಆಸ್ತಿ, ಬಂಧು–ಬಾಂಧವರು' ಎಂಬ ಬಂಧನವು ಸೃಷ್ಟಿಯಾಗಿರುತ್ತದೆ. ಇದೂ ಅಲ್ಲದೇ ತಾನು ನೋಡುವ ಜಗತ್ತು ತನ್ನಿಂದ ಸೃಷ್ಟಿಯಾಗಿದೆ ಎಂದು ತಿಳಿಯದೇ ಅದನ್ನು ಸತ್ಯವೆಂದು ತಿಳಿದು ಅದರಲ್ಲಿ ಮನುಷ್ಯನು ವ್ಯವಹರಿಸುತ್ತಿದ್ದಾನೆ. ಇವೆಲ್ಲವೂ ತನ್ನ ಅಜ್ಞಾನದ ಕಾರ್ಯವಾಗಿದ್ದು ಜ್ಞಾನದಿಂದ ಈ ಅಜ್ಞಾನದ ನಾಶವಾದೊಡನೆ ಅದರ ಕಾರ್ಯವೂ ಸಮಗ್ರವಾಗಿ ನಾಶವಾಗುತ್ತದೆ.

**ಓ.ಸಂ.57:** ಸ್ಮರಣ ಭಕ್ತಿಯು ಸರ್ವರಿಗೂ ಪ್ರಾಪ್ತವಾಗುವಂತಹುದಲ್ಲ. ಅದು ಯಾರಿಗೆ ದುರ್ಲಭವಾಗಿದೆಯೋ ಅವರು ನಾಮಸ್ಮರಣೆಯನ್ನು ಮಾಡಬೇಕು.

**ವಿವರಣೆ :** ಈವರೆಗೆ ವಿವರಿಸಿದ ಸ್ಮರಣ ಭಕ್ತಿಯನ್ನು ಅಭ್ಯಾಸ ಮಾಡುವುದು ಮತ್ತು ಅದರಿಂದ ಜ್ಞಾನಪ್ರಾಪ್ತಿ ಮಾಡಿಕೊಳ್ಳುವುದು ಎಲ್ಲರಿಗೂ ಸಾಧ್ಯವಲ್ಲ. ಅಂದರೆ ಕೆಲವರು ಮಾತ್ರ ಇದರ ಅಭ್ಯಾಸವನ್ನು ಮಾಡಬಲ್ಲರು. ಏಕೆಂದರೆ ಎಲ್ಲರಿಗೂ ಸದ್ಗುರು ಮುಖೇನ ಶ್ರವಣವಾಗಿರುವುದಿಲ್ಲ. ಅಂತಹವರು ಕೀರ್ತನೆಯನ್ನಾಗಲೀ ಅಥವಾ ಸ್ಮರಣವನ್ನಾಗಲೀ ಅಭ್ಯಾಸಮಾಡಲಾರರು. ಯಾರಿಗೆ ಶ್ರೀಗುರುಮುಖೇನ ಶ್ರವಣವಾಗಿರುತ್ತದೋ ಅವರಿಗೆ ಮಾತ್ರ ಬ್ರಹ್ಮಾತ್ಮೈಕ್ಯದ ಪರೋಕ್ಷಜ್ಞಾನವು ಪ್ರಾಪ್ತವಾಗಿರುತ್ತದೆ. ಅಂತಹವರು ಮಾತ್ರ ಕೀರ್ತನೆಯಿಂದಾಗಲೀ ಅಥವಾ ಸ್ಮರಣೆಯಿಂದಾಗಲೀ ಬ್ರಹ್ಮಜ್ಞಾನವನ್ನು ಪಡೆದುಕೊಳ್ಳುತ್ತಾರೆ. ಉಳಿದವರು ಸ್ಮರಣದಿಂದ ಬ್ರಹ್ಮಜ್ಞಾನವನ್ನು ಪ್ರಾಪ್ತಮಾಡಿಕೊಳ್ಳುವ ಯೋಗ್ಯತೆಯನ್ನು ಪಡೆದಿರುವುದಿಲ್ಲ. ಅಂತಹವರು ಮೊದಲು ನಾಮಸ್ಮರಣೆಯನ್ನು ಮಾಡಬಹುದಾಗಿರುತ್ತದೆ. ನಾಮಸ್ಮರಣೆಯಂದರೆ ಪ್ರೀತಿಪಾತ್ರರಾಗಿರುವ ಒಬ್ಬ ದೇವರ ಇಲ್ಲವೇ ತನ್ನ ಗುರುವಿನ ನಾಮವನ್ನು ತೆಗೆದುಕೊಂಡು ಸದಾ ಅದನ್ನೇ ಹೇಳುತ್ತಿರಬೇಕು. ನಾಮಸ್ಮರಣೆ ಮಾಡುವವರು ಹೇಗೆ ಮಾಡಬೇಕೆಂಬುದನ್ನು ಮುಂದಿನ ಓವೀಗಳಲ್ಲಿ ವಿಶದಪಡಿಸಲಾಗಿದೆ.

**ಓ.ಸಂ.58:** ದೇವನನ್ನು ಕುರಿತು ನಾಮಸ್ಮರಣೆ ಮಾಡುವಾಗ ತನ್ನ ದೋಷಗಳನ್ನು ಅವನ ಮುಂದೆ ಹೇಳಿಕೊಳ್ಳಬೇಕು ಹಾಗೂ ಅವನ ದಯಾಳುತನ ಮುಂತಾದ ಗುಣಗಳನ್ನು ಹೊಂದಿರುವ ಬಗ್ಗೆ ದೇವನನ್ನು ಸ್ಮರಿಸಿಕೊಳ್ಳಬೇಕು.

**ವಿವರಣೆ :** ಯಾರಿಗೆ ತಮ್ಮ ಆತ್ಮಸ್ವರೂಪವನ್ನು ಸ್ಮರಿಸಿಕೊಳ್ಳಲಾಗುವುದಿಲ್ಲವೋ ಅಂತಹವರಿಗಾಗಿಯೇ ನಾಮಸ್ಮರಣವನ್ನು ಅನವರತವೂ ಮಾಡಲು ತಿಳಿಸಲಾಗಿದೆ. ಯಾವ ದೇವನ ನಾಮಸ್ಮರಣೆಯನ್ನು ನಿರಂತರ ಮಾಡಲಾಗುವುದೋ ಆ ದೇವನ ಮುಂದೆ ತನ್ನ ತಪ್ಪುಗಳನ್ನೆಲ್ಲ ಹೇಳಿಕೊಳ್ಳಬೇಕು ಮತ್ತು ಅವುಗಳನ್ನು ಅವನು ಕ್ಷಮಿಸಬೇಕೆಂದೂ ಕೇಳಿಕೊಳ್ಳಬೇಕು. ಅಲ್ಲದೇ ಆ ದೇವನಿಗೆ ದಯಾಳುತನ, ಕ್ಷಮಾಗುಣ, ಸರ್ವಜ್ಞತ್ವ, ಸರ್ವಶಕ್ತ್ಯತ್ವ ಮುಂತಾದ ಅನಂತ ಗುಣಗಳಿರುವುದನ್ನು ಸ್ಮರಿಸಿಕೊಳ್ಳಬೇಕು. ಅಲ್ಲದೇ ಆ ದೇವನು ತನ್ನ ಸಕಲ ದೋಷಗಳನ್ನು ಕ್ಷಮಿಸುತ್ತಾನೆಂದೂ ಭಾವಿಸಬೇಕು. ಇನ್ನು ಮುಂದೆ ಅಂತಹ ತಪ್ಪುಗಳನ್ನು ಪುನಃ ಅವನಿಂದ ಘಟಿಸಲಾರದ ರೀತಿಯಲ್ಲಿ ದೇವನೇ ನೋಡಿಕೊಳ್ಳಬೇಕೆಂದೂ ಆ ದೇವನಲ್ಲಿ ಕಳಕಳಿಯಿಂದ ಪ್ರಾರ್ಥಿಸಿಕೊಳ್ಳಬೇಕು.

**ಓ.ಸಂ.59 :** ಹೀಗೆ ದೇವನಲ್ಲಿ ಕೇಳಿಕೊಳ್ಳುವಾಗ ಆರ್ತತೆಯಿಂದ ಕಂಠವು ಬಿಗಿದುಬರಬೇಕು ಮತ್ತು ತನ್ನ ದೇಹಭಾವವನ್ನು ತಾನು ಮರೆಯುವಂತಾಗಬೇಕು. ದೇವ-ಭಾವ ಹಾಗೂ ಭಕ್ತನ ಭಾವಗಳನ್ನು ತಾನೇ ಸ್ವೀಕರಿಸಬೇಕು.

ಉತ್ತಮ ಅಧಿಕಾರಿಯಾಗಿದ್ದುಕೊಂಡು ಜ್ಞಾನ ಮಾರ್ಗದಿಂದ ಸ್ಮರಣೆ ಮಾಡಲಾಗದಿದ್ದವರಿಗಾಗಿ ಭಕ್ತಿಮಾರ್ಗವನ್ನು ಹೇಳುತ್ತಿದ್ದಾರೆ. ಇಲ್ಲಿ ಭಕ್ತನು ಭಗವಂತನ ನಾಮಸ್ಮರಣೆಯನ್ನು ಮಾಡುತ್ತಾ ತನ್ನ ದೋಷಗಳನ್ನು ಅವನ ಮುಂದೆ ಹೇಳುತ್ತಾ ಆ ತಪ್ಪುಗಳನ್ನು ಕ್ಷಮಿಸುವಂತೆ ಕೇಳಿಕೊಳ್ಳುತ್ತಾನೆ. ಹೀಗೆ ಭಕ್ತಿಯಿಂದ ಕೇಳಿಕೊಳ್ಳುವಾಗ ಭಕ್ತಿ-ಭಾವೋದ್ರೇಕದಿಂದ ಅವನ ಕಂಠವು ಕಟ್ಟುತ್ತದೆ; ಕಣ್ಣಲ್ಲಿ ನೀರು ಸುರಿಯುತ್ತದೆ; ಮಾತು ಹೊರಡದಂತಾಗುತ್ತದೆ; ಇಂತಹ ಕ್ಷಣಗಳಲ್ಲಿ ಅವನಲ್ಲಿ ದೇಹಭಾವವೇ ಮರೆತುಹೋಗುತ್ತದೆ. ಇಂತಹ ಭಕ್ತನು ಭಗವಂತನನ್ನು ಬಿಟ್ಟು ಬೇರೆಯವರ ಸಂಗಡ ಬೇರೆ ವ್ಯವಹಾರವನ್ನು ಮಾಡುವುದಿಲ್ಲ. ಅಂದರೆ ಮಾಡಿದರೂ ದೇವರ ನಾಮಸ್ಮರಣೆಯನ್ನು ಬಿಡುವುದಿಲ್ಲ. ಅವನೇ ದೇವಭಾವವನ್ನೂ ಹಾಗೂ ಭಕ್ತನ ಬಾವಗಳನ್ನು ಸ್ವೀಕರಿಸುತ್ತಾನೆ ಮತ್ತು ತಾನೇ ಇಬ್ಬರ ಸಂಭಾಷಣೆಯನ್ನು ನಡೆಸುತ್ತಾನೆ. ಇದರ ವಿವರವು ಮುಂದಿನ ಓವೀಯಲ್ಲಿದೆ.

**ಓ.ಸಂ.60 :** ಯಾವಾಗ ತಾನು 'ದೇವ' ಮತ್ತು 'ಭಕ್ತ' ಎಂಬ ಎರಡೂ ಭಾವಗಳನ್ನು ಹೊಂದುತ್ತಾನೋ ಆಗ ತಾನು ಭಕ್ತನಾಗಿ ಭಗವಂತನಲ್ಲಿ ಪ್ರೇಮದಿಂದ ಪ್ರಾರ್ಥಿಸಿಕೊಳ್ಳಬೇಕು. ಹಾಗೂ ತಾನೇ ಭಗವಂತನಾಗಿ ತನಗೆ ತಾನೇ ಉತ್ತರ ಕೊಡಬೇಕು.

**ವಿವರಣೆ :** ಹಿಂದಿನ ಓವಿಯಲ್ಲಿ ನಾಮಸ್ಮರಣೆ ಮಾಡುವವನು ತಾನೇ ಭಕ್ತನ ಭಾವವನ್ನೂ ಹಾಗೂ ತಾನೇ ಭಗವಂತನ ಭಾವವನ್ನೂ ಪಡೆದು ವ್ಯವಹರಿಸುತ್ತಾನೆ ಎನ್ನುವುದನ್ನು ತಿಳಿಸಲಾಗಿತ್ತು. ಭಕ್ತನಾಗಿ ಭಗವಂತನಿಗೆ ಅನೇಕ ಪ್ರಶ್ನೆಗಳನ್ನು ಪ್ರೇಮದಿಂದ ಕೇಳುತ್ತಾನೆ. ಅದಕ್ಕೆ ಉತ್ತರವಾಗಿ ತಾನೇ ಭಗವಂತನ ಭಾವದಿಂದ ಉತ್ತರವನ್ನು ಕೊಡುತ್ತಾನೆ. ಹೀಗೆ ಅವನ ವ್ಯವಹಾರವು ನಡೆದಿರುತ್ತದೆ. ಭಕ್ತನಾಗಿ ಕೇಳುತ್ತಾನೆ : 'ಭಗವಂತಾ ನಿನ್ನ ನಾಮಸ್ಮರಣೆಗೆ ಅನೇಕ ಕಷ್ಟಗಳನ್ನು, ತೊಂದರೆಗಳನ್ನು, ದೇಹದ ವ್ಯಾಧಿ ಮುಂತಾದವುಗಳನ್ನು ಕೊಡುತ್ತಿದ್ದೀಯಲ್ಲ, ಇದು ನಿನಗೆ ಸರಿ ಕಾಣುವುದೇ' ಎಂಬ ಪ್ರಶ್ನೆಗೆ ತಾನೇ ಭಗವಂತನಾಗಿ ಉತ್ತರವಾಗಿ ಹೀಗೆ ಹೇಳುತ್ತಾನೆ; 'ಈ ವಿಘ್ನಗಳನ್ನು ನೀನು ಪ್ರಾರಬ್ಧಕರ್ಮದ ಅಂಗವಾಗಿ ಅನುಭವಿಸಲೇಬೇಕಾಗಿರುವುದು ಈ ವಿಘ್ನಗಳ ಮಧ್ಯೆ ನೀನು ನನ್ನ ನಾಮಸ್ಮರಣೆಯನ್ನು ಬಿಡಬಾರದು'. ಹೀಗೆ ತಾನೇ ಪ್ರಶ್ನೋತ್ತರಗಳನ್ನು ಕೊಟ್ಟು ಕೊಳ್ಳುತ್ತಿರುವನು.

**ಓ.ಸಂ.61 :** ನಡೆಯುವಾಗ, ಕೊಟ್ಟು-ತೆಗೆದುಕೊಳ್ಳುವಾಗ, ನುಡಿಯುವಾಗ, ನಿದ್ರಿಸುವಾಗ, ವಿಷಯಗಳನ್ನು ಭೋಗಿಸುವಾಗ ಹೀಗೆ ಏನೇ ಮಾಡುತ್ತಿದ್ದರೂ ಭಗವಂತನ ಚಿಂತನೆಯನ್ನು ಬಿಡಬಾರದು.

ಸ್ಮರಣೆ ಮಾಡುತ್ತಿರುವ ಭಕ್ತನು, ಭಗವಂತನ ನಾಮವನ್ನು ಬಿಟ್ಟು ಬೇರೆ ಏನನ್ನೂ ಚಿತ್ತದಲ್ಲಿ ತರಕೂಡದು. ಭಕ್ತನು ಅನೇಕ ಕ್ರಿಯೆಗಳಲ್ಲಿ ತೊಡಗಿರಬಹುದು. ಆದರೆ ದೇವನ ನಾಮಸ್ಮರಣೆಯನ್ನು ನಿರಂತರ ಮಾಡುತ್ತಿರಬೇಕು. ಭಕ್ತನು ನಡೆಯುತ್ತಿರಬಹುದು; ಇಲ್ಲವೇ ಯಾರೊಡನೆಯಾದರೂ ಮಾತನಾಡುತ್ತಿರಬಹುದು; ತನ್ನ ವ್ಯವಹಾರದಲ್ಲಿ ಹಣವನ್ನು ಕೊಡುತ್ತಿರಬಹುದು; ಇಲ್ಲವೇ ಹಣವನ್ನು ಪಡೆಯುತ್ತಿರಬಹುದು, ಈ ಕ್ರಿಯೆಗಳು ನಡೆಯುತ್ತಿರುವಾಗಲೂ ಭಗವಂತನ ಚಿಂತನೆಯನ್ನು ಯಾವ ಕಾಲಕ್ಕೂ ತಪ್ಪಿಸಬಾರದು. ಹಾಗೆಯೇ ಅವನು ವಿಷಯ ಭೋಗದಲ್ಲಿ ತೊಡಗಿ ಸುಖ-ದುಃಖವನ್ನು ಅನುಭವಿಸುತ್ತಿರಬಹುದು. ಆಗಲೂ ಅವನು ಅದೆಲ್ಲ ಪರಮಾತ್ಮನ ಇಚ್ಛೆಗೆ ಅನುಗುಣವಾಗಿರುವುದೆಂದೇ ಭಾವಿಸಬೇಕು. ಹಾಗೆಯೇ ಅವನಿಗೆ ನಿದ್ರೆ ಹತ್ತುವುದಾಗಲೀ ಇಲ್ಲವೇ ನಿದ್ರೆ ಬಾರದಿರುವುದಾಗಲೀ ಆದಾಗ ದೇವನ ಇಚ್ಛೆಗೆ ಅನುಗುಣವಾಗಿಯೇ ಎಲ್ಲವೂ ನಡೆಯುತ್ತದೆ ಎಂದೇ ಭಾವಿಸಬೇಕು. ಹೀಗೆ ಒಂದು ಕ್ಷಣ ಕೂಡ ದೇವರ ಚಿಂತನೆಯನ್ನು ಬಿಟ್ಟು ಬೇರೆ ಯೋಚನೆ ಇರಬಾರದು.

**ಓ.ಸಂ.62 :** ಇಂತಹ ಸ್ಮರಣ ಭಕ್ತಿ (ನಾಮಸ್ಮರಣೆ) ಯನ್ನು ಮಾಡುವವರಿಗೆ ಚಿತ್ತ ಶುದ್ಧಿಯಾಗುವುದು. ಅವರಿಗೆ ಕಾಲ ಕ್ರಮೇಣ ಸದ್ಗುರುವಿನ ಪ್ರಸಾದದಿಂದ ಬ್ರಹ್ಮಾತ್ಮೈಕ್ಯ ಜ್ಞಾನವೂ ಪ್ರಾಪ್ತವಾಗುವುದು.

**ವಿವರಣೆ :** ಈ ರೀತಿಯ ನಾಮಸ್ಮರಣೆಯ ಮೂಲಕ ಸ್ಮರಣ ಭಕ್ತಿಯನ್ನು ಮಾಡುವ ಭಕ್ತನಿಗೆ ಚಿತ್ತ ಶುದ್ಧಿಯಾಗುತ್ತದೆ. ಅಂದರೆ ವಿವೇಕ, ವೈರಾಗ್ಯ, ಶಮ-ದಮಾದಿ ಷಟ್ ಸಂಪತ್ತು ಹಾಗೂ ಮುಮುಕ್ಷುತ್ವಗಳು ತಮಗೆ ತಾವೇ ಪ್ರಕಟಗೊಳ್ಳುತ್ತವೆ. ಅಂದರೆ ಅವನಿಗೆ ಈ ಸಾಧನ ಚತುಷ್ಟಯಗಳ ಪ್ರಾಪ್ತಿಯಿಂದ ಜ್ಞಾನ ಪ್ರಾಪ್ತಿ ಯೋಗ್ಯತೆಯು ಬರುತ್ತದೆ. ಅಂದರೆ ಸದ್ಗುರುವಿನಿಂದ ವೇದಾಂತ ಬೋಧವನ್ನು ಪಡೆಯಬೇಕೆಂಬ ಆಸಕ್ತಿ (ಚಿತ್ತಶುದ್ಧಿ) ಹಾಗೂ ಅದನ್ನು ಅರ್ಥಮಾಡಿಕೊಳ್ಳಲು ಬೇಕಾದ ಚಿತ್ತದ ಏಕಾಗ್ರತೆಗಳು ಅವನಲ್ಲಿ ಪ್ರಕಟಗೊಂಡಿರುತ್ತವೆ. ಇಂತಹವನಿಗೆ ಶೀಘ್ರದಲ್ಲಿ ಒಬ್ಬ ಸದ್ಗುರುವಿನ ಸಹವಾಸವು ಹಾಗೂ ಅವನಿಂದ ಬ್ರಹ್ಮಾತ್ಮೈಕ್ಯ ಜ್ಞಾನಬೋಧೆಯು ಕೊಡಲ್ಪಟ್ಟು ಅದರಿಂದ ಅವನು ಭವ-ಬಂಧನದಿಂದ ಪಾರಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

**ಓ.ಸಂ.63:** ಈ ಸ್ಮರಣ ಭಕ್ತಿಯನ್ನು ಮಾಡಿಯೇ ಪ್ರಹ್ಲಾದನು ಮುಕ್ತನಾದನು. ಆದರೆ ಬಾಯಿಯಲ್ಲಿ ನಾಮವನ್ನು ಹೇಳುತ್ತಾ ಮನಸ್ಸಿನಲ್ಲಿ ಪರಸ್ತ್ರೀ-ಪರಧನವನ್ನು ಚಿಂತಿಸುವುದು ಸ್ಮರಣ ಭಕ್ತಿಯಲ್ಲ.

ಪ್ರಹ್ಲಾದನು ಸ್ಮರಣ ಭಕ್ತನಾಗಿದ್ದು ಈ ಮಾರ್ಗದಿಂದಲೇ ಅವನು ಮುಕ್ತನಾದನು. ಸಣ್ಣ ವಯಸ್ಸಿನಲ್ಲಿಯೇ ಅದರಲ್ಲೂ ರಾಕ್ಷಸಕುಲದಲ್ಲಿ ಹುಟ್ಟಿ ಮೊದಲಿನಿಂದಲೂ ವಿರುದ್ಧ ವಾತಾವರಣದಲ್ಲಿಯೇ ಬೆಳೆದವನು ಪ್ರಹ್ಲಾದ. ಆದರೂ ಅವನು ಶ್ರೀಹರಿಯ ನಾಮಸ್ಮರಣೆಯನ್ನು ಒಂದು ಕ್ಷಣವೂ ಬಿಡಲಿಲ್ಲ. ಅವನ ಉಪಾಧ್ಯಾಯರು ಹಾಗೂ ಅವನ ತಂದೆಯಾದ ಹಿರಣ್ಯಕಶ್ಯಪನೂ ಕೂಡ ಈ ನಾಮಸ್ಮರಣೆಗೆ ವಿರೋಧ ವ್ಯಕ್ತ ಮಾಡಿದರೂ ಅವನು ನಾಮಸ್ಮರಣೆಯನ್ನು ಬಿಡಲಿಲ್ಲ. ಅವನ ಪ್ರಾಣಹರಣದ ಅನೇಕ ಸಂದರ್ಭಗಳು ಬಂದಾಗ್ಯೂ ಕೂಡ ಒಂದು ಕ್ಷಣವೂ ನಾಮಸ್ಮರಣೆಯನ್ನು ನಿಲ್ಲಿಸಲಿಲ್ಲ. ನಾಮಸ್ಮರಣೆಯನ್ನು ಮಾಡುವವರಿಗೆ ಅವನು ಆದರ್ಶಪ್ರಾಯನಾಗಿದ್ದಾನೆ. ಹೆಸರಿಗೆ ಜಪಮಾಲೆ ಎಣಿಸುತ್ತಾ ಅಥವಾ ಬಾಯಲ್ಲಿ ಮಣ-ಮಣ ಅನ್ನುತ್ತಾ ಏಕಾಗ್ರತೆಯಿಲ್ಲದೇ ಮನಸ್ಸಿನಲ್ಲಿ ಪರಸ್ತ್ರೀ ಹಾಗೂ ಪರಧನಗಳನ್ನು ಚಿಂತಿಸುವುದು ನಾಮಸ್ಮರಣೆಯಾಗುವುದಿಲ್ಲ. ನಾಮ-ಸ್ಮರಣೆ ಮಾಡುವವನು ತನ್ನ ದೇಹಭಾವವನ್ನು ಮರೆತು ಸ್ಮರಣೆ ಮಾಡಬೇಕು. ಈ ಓವೀಯು ಸ್ಮರಣ ಭಕ್ತಿಗೆ ಕೊನೆಯ ಓವೀಯಾಗಿದ್ದು ಒಟ್ಟು ಓವೀ ಸಂ.52ರಿಂದ 63 ನೆಯ ಓವೀ ತನಕ ( ಅಂದರೆ ಹನ್ನೆರಡು ಓವೀಗಳು ) ಈ ಭಕ್ತಿಯನ್ನೇ ವಿವರಿಸುವುವು.

**ಓ.ಸಂ.64 :** ಈಗ ನಾಲ್ಕನೆಯ ಭಕ್ತಿ ಪ್ರಕಾರವಾದ 'ಪಾದ ಸೇವನ' ವೆಂಬ ಭಕ್ತಿಯ ವಿವರಣೆಯು ಪ್ರಾರಂಭವಾಗುವುದು. ಶ್ರೋತೃಗಳು ಏಕಾಗ್ರತೆಯಿಂದ ತಿಳಿದುಕೊಳ್ಳಬೇಕು. ಓಂಕಾರ-ಪ್ರತೀಕವಾಗಿರುವ ಪರಮಾತ್ಮನಿಗೆ ಮೂರು ಪಾದಗಳಿವೆ.

**ವಿವರಣೆ :** ಈ ಓವೀಯಿಂದ 'ಪಾದ ಸೇವನ'ವೆಂಬ ನಾಲ್ಕನೆಯ ಭಕ್ತಿ ಪ್ರಾಕಾರದ ವಿವರಣೆಯು ಪ್ರಾರಂಭವಾಗುವುದು. ಓಂಕಾರವು ಪರಮಾತ್ಮನ ಪ್ರತೀಕವಾಗಿರುವುದು. ಇಲ್ಲಿ ಪ್ರತೀಕವೆಂದರೆ ಒಬ್ಬ ವ್ಯಕ್ತಿಗೆ ಅವನ ಹೆಸರು ಹೇಗೆ ಪ್ರತೀಕವೋ ಹಾಗೆ ಓಂಕಾರವು ಪರಮಾತ್ಮನ ಪ್ರತೀಕವಾಗಿರುತ್ತದೆ. ಪರಮಾತ್ಮನಿಗೆ ಅಥವಾ ಬ್ರಹ್ಮನಿಗೆ ಮೂರು ಪಾದಗಳಿವೆ ಹಾಗೂ ಅವನ ಪ್ರತೀಕವಾದ ಓಂಕಾರಕ್ಕೂ ಮೂರುಪಾದಗಳಿವೆ. ಹಾಗೆಯೇ ಆತ್ಮನಿಗೂ ಮೂರುಪಾದಗಳಿವೆ. ಎಲ್ಲ ಭಕ್ತಿ ಪ್ರಾಕಾರಗಳಂತೆ ಈ 'ಪಾದಸೇವನ' ಭಕ್ತಿಯಿಂದಲೂ ಬ್ರಹ್ಮಾತ್ಮೈಕ್ಯದ ಜ್ಞಾನವನ್ನು ಪಡೆಯುವ ಬಗೆಯನ್ನು ಅತ್ಯಂತ ವಿವರವಾಗಿ ಇಲ್ಲಿ ತಿಳಿಸಿ ಹೇಳಲಾಗುವುದು. ಶ್ರೋತೃಗಳು ಅತ್ಯಂತ ಏಕಾಗ್ರತೆಯಿಂದ ಇದನ್ನು ತಿಳಿದುಕೊಳ್ಳಬೇಕು.

**ಓ.ಸಂ.65:** ಓಂಕಾರದಲ್ಲಿ ಅಕಾರ, ಉಕಾರ ಮತ್ತು ಮಕಾರಗಳೆಂಬ ಅಕ್ಷರದ ಮೂರು ಪಾದಗಳಿವೆ. ಹಾಗೆಯೇ ಆತ್ಮ ( ಅಹಂಕಾರವಿರುವ ಜೀವಾತ್ಮ) ನಲ್ಲಿ ವಿಶ್ವ, ತೈಜಸ ಮತ್ತು ಪ್ರಾಜ್ಞರೆಂಬ ಮೂರು ಪಾದಗಳಿವೆ.

**ವಿವರಣೆ :** ಓಂಕಾರದಲ್ಲಿ ಮೂರು ಅಕ್ಷರಗಳಿವೆ. ಇವೇ ಅಕಾರ(ಅ), ಉಕಾರ(ಉ) ಮತ್ತು ಮಕಾರ(ಮ)ಗಳು ಆಗಿವೆ. ಇವುಗಳನ್ನೇ ಓಂಕಾರದ ಮೂರು ಪಾದಗಳೆಂದು ತೆಗೆದುಕೊಂಡಿದ್ದಾರೆ. ಹಾಗೆಯೇ ನಮ್ಮ ಆತ್ಮನು 'ನಾನು' ಎಂಬ ಅಹಂಕಾರ ರೂಪದಲ್ಲಿ ನಮ್ಮ ಜಾಗೃತ, ಸ್ವಪ್ನ, ಹಾಗೂ ಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲಿ ವಿಶ್ವ, ತೈಜಸ ಹಾಗೂ ಪ್ರಾಜ್ಞರೆಂಬ ಮೂರು ರೂಪಗಳಲ್ಲಿ ಪ್ರಕಟನಾಗುವನು. ಅಹಂಕಾರದ ಈ ಮೂರು ರೂಪಗಳನ್ನು ಆತ್ಮನ ಮೂರುಪಾದಗಳೆಂದು ತೆಗೆದುಕೊಂಡಿದ್ದಾರೆ. ಇಲ್ಲಿ ಅಕಾರ, ಉಕಾರ ಹಾಗೂ ಮಕಾರಗಳೆಂಬ ಮೂರು ಪಾದಗಳು ಸೇರಿ ಒಂದೇ ಓಂಕಾರವಾಗುತ್ತದೆ. ಹಾಗೆಯೇ ವಿಶ್ವ, ತೈಜಸ ಮತ್ತು ಪ್ರಾಜ್ಞರೆಂಬ ಅಹಂಕಾರದ ಮೂರು ಪಾದಗಳಿಂದ ಒಬ್ಬನೇ ಆತ್ಮನು ಪ್ರಕಟನಾಗುವನು.

**ಓ.ಸಂ.66 :** ಹಾಗೆಯೇ ಬ್ರಹ್ಮನಿಗೆ ( ಈಶ್ವರ ಅಥವಾ ಸಗುಣ ಬ್ರಹ್ಮ ) ವೈರಾಜ್, ಸೂತ್ರ ಮತ್ತು ಅಕ್ಷರವೆಂಬ ಮೂರುಪಾದಗಳಿವೆ. ಈ ಪಾದ ಸೇವನ ಭಕ್ತಿಯಿಂದ ಬ್ರಹ್ಮ ಮತ್ತು ಆತ್ಮರ ಐಕ್ಯವನ್ನು ತಿಳಿಯಬೇಕು.

**ವಿವರಣೆ :** ಆತ್ಮನಿಗೆ ಇರುವಂತೆ ಬ್ರಹ್ಮನಿಗೂ ಮೂರು ಪಾದಗಳಿವೆ. ಅವೇ ವೈರಾಜ್, ಸೂತ್ರ ಮತ್ತು ಅಕ್ಷರಗಳು ಆಗಿವೆ. ಆತ್ಮನ ಪಾದಗಳು ವ್ಯಷ್ಟಿಯಿಂದಾದರೆ, ಬ್ರಹ್ಮನಪಾದಗಳು ಸಮಷ್ಟಿರೂಪದಿಂದ ಇರುವವು. ಆತ್ಮನ ಪಾದಗಳಾದ ವಿಶ್ವ, ತೈಜಸ ಹಾಗೂ ಪ್ರಾಜ್ಞರು ಕ್ರಮವಾಗಿ ವ್ಯಷ್ಟಿರೂಪದ ಸ್ಥೂಲ, ಸೂಕ್ಷ್ಮ ಹಾಗೂ ಕಾರಣಶರೀರಾಭಿಮಾನಿಗಳಾಗಿರುವರು. ಆದರೆ, ಬ್ರಹ್ಮನ ಪಾದಗಳಾದ ವೈರಾಜ್, ಸೂತ್ರ ಮತ್ತು ಅಕ್ಷರಗಳು ಕ್ರಮವಾಗಿ ಸಮಷ್ಟಿ ಸ್ಥೂಲದೇಹವಾದ ವಿರಾಟ್, ಸಮಷ್ಟಿ ಸೂಕ್ಷ್ಮದೇಹವಾದ ಹಿರಣ್ಯಗರ್ಭ ಮತ್ತು ಪ್ರಳಯದಲ್ಲಿರುವ ಸಮಷ್ಟಿ ಕಾರಣವಾದ ಅವ್ಯಾಕೃತಗಳ ಅಭಿಮಾನಿಗಳಾಗಿದ್ದಾರೆ. ಈ ಪಾದಸೇವನೆಯೆಂಬ ಭಕ್ತಿಯಿಂದ ಆತ್ಮನ, ಬ್ರಹ್ಮನ ಹಾಗೂ ಓಂಕಾರದ ಪಾದಗಳು ಒಂದಕ್ಕೊಂದು ಐಕ್ಯವೆಂದು ತಿಳಿಯುವುದರಿಂದ ಆತ್ಮ, ಬ್ರಹ್ಮ ಹಾಗೂ ಓಂಕಾರಗಳ ಐಕ್ಯವನ್ನು ಅರ್ಥಮಾಡಿಕೊಳ್ಳುವುದೇ ಆಗಿರುತ್ತದೆ.

**ಓ.ಸಂ.67:** ಓಂಕಾರದ ( ಆತ್ಮನ ಮತ್ತು ಬ್ರಹ್ಮನ ಮೂರು-ಮೂರು ಪಾದಗಳ ) ಬಗ್ಗೆ ಹಾಗೂ ಅವುಗಳ ಸಂಬಂಧದ ಬಗ್ಗೆ ದೀರ್ಘವಾದ ವಿಚಾರವನ್ನು ಮಾಡಬೇಕು. ಅದಕ್ಕೆ 'ಪಾದಸೇವನ ಭಕ್ತಿ' ಎನ್ನುವರು. ಹೀಗೆ ಮನನ ಮಾಡುವುದರಿಂದಲೇ ಆ ಪಾದಗಳಿಗೆ ಆಧಾರನಾದ ಪರಮಾತ್ಮನು ಪ್ರಾಪ್ತನಾಗುವನು.

**ವಿವರಣೆ :** ಓಂಕಾರವು ಬ್ರಹ್ಮನ ಪ್ರತೀಕ, ಅಂದರೆ ಅವನ ಹೆಸರಾಗಿರುತ್ತದೆ. ಅದಕ್ಕೆ ಸ್ಥೂಲ, ಸೂಕ್ಷ್ಮ ಮತ್ತು ಕಾರಣ ಸ್ವರೂಪದ ಅ, ಉ ಮತ್ತು ಮಕಾರಗಳೇ ಪಾದಗಳು. ಈ ಪಾದಗಳಿಗೆ ಅನುಗುಣವಾಗಿ ಬ್ರಹ್ಮನ ಮೂರು ರೂಪಗಳಾದ ವೈರಾಜ್, ಸೂತ್ರ ಮತ್ತು ಅಕ್ಷರಗಳೂ, ಆತ್ಮನ ಮೂರು ಪಾದಗಳಾದ

(ರೂಪಗಳು) ವಿಶ್ವ, ತೈಜಸ ಪ್ರಾಜ್ಞಗಳು ಇರುತ್ತವೆ. ಈ ಪಾದಗಳ ಬಗ್ಗೆ ದೀರ್ಘವಾದ ಚಿಂತನೆಯನ್ನು ಮಾಡುವುದೇ ಪಾದಸೇವನ ಭಕ್ತಿಯಾಗಿರುತ್ತದೆ. ಪಾದಗಳ ಬಗ್ಗೆ ಮನನ ಮಾಡುವುದರಿಂದಲೇ ಓಂಕಾರದ, ಆತ್ಮನ ಹಾಗೂ ಬ್ರಹ್ಮನ ತಾದಾತ್ಮ್ಯವು ಸ್ಥಿರವಾಗುತ್ತದೆ. ಹೀಗೆ ನಮ್ಮ ಆತ್ಮವು ಬ್ರಹ್ಮಸ್ವರೂಪವಾಗಿರುವುದೆಂದೂ ಬ್ರಹ್ಮಾತ್ಮೈಕ್ಯದ ಜ್ಞಾನವು ಬಂದ ಕೂಡಲೇ ನಮ್ಮ ಭವ-ಬಂಧನವು ಹರಿಯುವುದೆಂದೂ ತಿಳಿದುಕೊಳ್ಳಬೇಕು.

<u>ಓ.ಸಂ.68:</u> ಅಕಾರ, ವಿಶ್ವ, ವೈರಾಜ್ ಹಾಗೆಯೇ ಉಕಾರ, ತೈಜಸ, ಸೂತ್ರ ಮತ್ತು ಮಕಾರ, ಪ್ರಾಜ್ಞ, ಅಕ್ಷರ ಇವುಗಳ ಐಕ್ಯವನ್ನು ಸರಿಯಾದ ವಿಚಾರದಿಂದ ಅರ್ಥಮಾಡಿಕೊಳ್ಳಬೇಕು.

<u>ವಿವರಣೆ :</u> ಈ ಓವೀಯಲ್ಲಿ ಒಟ್ಟು ಮೂರರ ಮೂರು ಗುಂಪುಗಳಿವೆ. ಇವುಗಳಲ್ಲಿ ಒಂದೊಂದು ಗುಂಪಿನ ಮೂರೂ ತತ್ತ್ವಗಳನ್ನು 'ಅವುಗಳು ಒಂದೇ ತತ್ತ್ವವು' ಎನ್ನುವ ಬಗ್ಗೆ ವಿಚಾರ ಮಂಥನಮಾಡಿ ಅರ್ಥಮಾಡಿಕೊಳ್ಳಬೇಕು. ಮೊದಲನೆಯ ಗುಂಪಿನಲ್ಲಿ ಅಕಾರ, ವಿಶ್ವ, ವೈರಾಜ್‌ಗಳ ಐಕ್ಯವನ್ನು ಸಾಧಿಸಬೇಕು. ಇವುಗಳಲ್ಲಿ 'ಅಕಾರವು' ಓಂಕಾರದ ಮೊದಲನೆಯಪಾದವಾಗಿದ್ದು, ಅದು ಹೆಸರಿನಂತೆ ವಿಶ್ವ ಹಾಗೂ ವೈರಾಜ್‌ರ ಪ್ರತೀಕವಾಗಿರುತ್ತದೆ. ವಿಶ್ವವೆಂಬುದು ಆತ್ಮನ ಮೊದಲನೆಯ ಪಾದವಾಗಿದ್ದು ವ್ಯಷ್ಟಿ 'ಜೀವ' ನ ಸ್ಥೂಲದೇಹದ ಅಭಿಮಾನಿಯಾಗಿದ್ದಾನೆ. ಹಾಗೆಯೇ, 'ವೈರಾಜ್'ವೆಂಬುದು ಬ್ರಹ್ಮನ ಮೊದಲನೆಯ ಪಾದವಾಗಿದ್ದು, ಸಮಷ್ಟಿಸ್ಥೂಲ ಜಗತ್ತಿನ ಅಂದರೆ ವಿರಾಟ್‌ನ ಅಭಿಮಾನಿಯಾಗಿದ್ದಾನೆ. ವಿಶ್ವ ಮತ್ತು ವೈರಾಜ್‌ಗಳು ಅಭಿಮಾನಿಗಳಾಗಿರುವುದರಿಂದ ಅವರು ಒಂದೇ ಚೈತನ್ಯವಾಗಿರಲೇಬೇಕು. ಏಕೆಂದರೆ ಚೈತನ್ಯದಲ್ಲಿ ಅನೇಕತೆಯು ಇರುವುದಿಲ್ಲ. ಅಕಾರವು ಈ ಚೈತನ್ಯದ ಪ್ರತೀಕವಾಗಿದ್ದು ಈ ಮೂರರ ಐಕ್ಯವನ್ನು ಈ ರೀತಿ ಅರ್ಥಮಾಡಿಕೊಳ್ಳಬೇಕು. ಇದೇರೀತಿ ಎರಡನೆಯ ಗುಂಪಿನಲ್ಲಿರುವ ಉಕಾರ, ತೈಜಸ ಮತ್ತು ಸೂತ್ರರ ಐಕ್ಯವನ್ನು ಅರ್ಥಮಾಡಿಕೊಳ್ಳಬಹುದು. ಉಕಾರವು ಓಂಕಾರದ ಎರಡನೆಯ ಪಾದವಾಗಿದ್ದು ಅದು ತೈಜಸ ಮತ್ತು ಸೂತ್ರರ ಪ್ರತೀಕವಾಗಿರುತ್ತದೆ. ತೈಜಸವು ಆತ್ಮನ ಎರಡನೆಯ ಪಾದವಾಗಿದ್ದು, ವ್ಯಷ್ಟಿ 'ಜೀವ'ನ ಸೂಕ್ಷ್ಮ ಶರೀರಾಭಿಮಾನಿಯಾಗಿದ್ದಾನೆ. ಹಾಗೆಯೇ ವೈರಾಜ್ ಎನ್ನುವುದು ಬ್ರಹ್ಮನ ಎರಡನೆಯ ಪಾದವಾಗಿದ್ದು ಸಮಷ್ಟಿ ಸೂಕ್ಷ್ಮ ದೇಹವಾದ ಹಿರಣ್ಯಗರ್ಭದ ಅಭಿಮಾನಿಯಾಗಿದ್ದಾನೆ. ಈ ಎರಡೂ ಅಭಿಮಾನಿಗಳು-ವ್ಯಷ್ಟಿ ಮತ್ತು ಸಮಷ್ಟಿ ಸೂಕ್ಷ್ಮಶರೀರದಲ್ಲಿ-ಒಂದೇ ಚೈತನ್ಯವಾಗಿರಲೇಬೇಕು. ಏಕೆಂದರೆ ಚೈತನ್ಯದಲ್ಲಿ ಅನೇಕತೆಯು ಇರುವುದಿಲ್ಲ. ಈ ಒಂದೇ ಚೈತನ್ಯದ ಪ್ರತೀಕವೇ 'ಉಕಾರ'ವಾಗಿರುತ್ತದೆ. ಹಾಗೆಯೇ ಕೊನೆಯದಾಗಿ ಮೂರನೆಯ ಗುಂಪಿನಲ್ಲಿರುವ ಮಕಾರ-ಪ್ರಾಜ್ಞ-ಅಕ್ಷರಗಳ ಐಕ್ಯವನ್ನು ತಿಳಿದುಕೊಳ್ಳಬೇಕು. ಮಕಾರವು ಓಂಕಾರದ ಮೂರನೆಯ ಪಾದವಾಗಿದ್ದು, ಪ್ರಾಜ್ಞ ಹಾಗೂ ಅಕ್ಷರಗಳ ಪ್ರತೀಕವಾಗಿರುತ್ತದೆ. ಪ್ರಾಜ್ಞವು ಆತ್ಮನ ಮೂರನೆಯ ಪಾದವಾಗಿದ್ದು, ವ್ಯಷ್ಟಿ 'ಜೀವ'ನ ಕಾರಣದೇಹದ ಅಭಿಮಾನಿಯಾಗಿರುತ್ತದೆ. ಹಾಗೆಯೇ 'ಅಕ್ಷರ'ವೆಂಬುದು ಬ್ರಹ್ಮನ ಮೂರನೆಯ ಪಾದವಾಗಿದ್ದು ಸಮಷ್ಟಿ ಬ್ರಹ್ಮನ ಸಮಷ್ಟಿ ಕಾರಣದೇಹವಾದ 'ಅವ್ಯಾಕೃತ' ದ ಅಭಿಮಾನಿಯಾಗಿರುತ್ತದೆ. ಈ ಅಭಿಮಾನಿಗಳೆರಡೂ-ಪ್ರಾಜ್ಞ ಮತ್ತು ಅಕ್ಷರ ಒಂದೇ ಚೈತನ್ಯವಾಗಿದ್ದು ಅವುಗಳ

ಐಕ್ಯವಾಗಿರುತ್ತದೆ. ಏಕೆಂದರೆ ಚೈತನ್ಯದಲ್ಲಿ ಅನೇಕತೆಯು ಇರುವುದಿಲ್ಲ ಮತ್ತು 'ಮ' ಕಾರವು ಇದರ ಪ್ರತೀಕವಾಗಿರುತ್ತದೆ. ಹೀಗೆ ಮೂರರ ಐಕ್ಯವನ್ನು ಮುಂದಿನ ಓವೀಯಲ್ಲಿ ತಿಳಿಸಲಾಗುತ್ತದೆ.

<u>ಓ.ಸಂ.69 :</u> 'ಓಂ'ಕಾರ, 'ಆತ್ಮ' ಮತ್ತು 'ಬ್ರಹ್ಮ' ಇವುಗಳ ಐಕ್ಯತೆಯನ್ನು ಅರ್ಥ ಮಾಡಿಕೊಳ್ಳಬೇಕು. 'ಅ'ಕಾರ, 'ಉ'ಕಾರ ಮತ್ತು 'ಮ'ಕಾರಗಳಿಂದ 'ಓಂ'ಕಾರವು ಉಂಟಾಗುತ್ತದೆ.

<u>ವಿವರಣೆ :</u> ಓಂಕಾರವು 'ಅ' ಕಾರ, 'ಉ' ಕಾರ ಮತ್ತು 'ಮ'ಕಾರವೆಂಬ ಮೂರುಪಾದಗಳಿಂದ ಕೂಡಿದ್ದು ಅದು ಆತ್ಮನಿಗೆ ಅಥವಾ ಬ್ರಹ್ಮನಿಗೆ ಪ್ರತೀಕವಾಗಿರುತ್ತದೆ. ಹಾಗೆಯೇ 'ವಿಶ್ವ', 'ತೈಜಸ' ಮತ್ತು 'ಪ್ರಾಜ್ಞ'ರೆಂಬ ಮೂರು ಪಾದಗಳನ್ನೊಳಗೊಂಡಿರುವುದು ಆತ್ಮ ತತ್ತ್ವವು. ಅದೇ ರೀತಿ ಬ್ರಹ್ಮನಿಗೆ 'ವೈರಾಜ್', 'ಸೂತ್ರ' ಮತ್ತು 'ಅಕ್ಷರ'ಗಳೆಂಬ ಮೂರು ಪಾದಗಳಿವೆ. ಹಿಂದಿನ ಓವೀಯಲ್ಲಿ 'ಅಕಾರ', 'ವಿಶ್ವ' ಮತ್ತು 'ವೈರಾಜ್'ರನ್ನು ಹಾಗೂ 'ಉ'ಕಾರ', 'ತೈಜಸ' ಮತ್ತು 'ಸೂತ್ರ'ರನ್ನು ಮತ್ತು 'ಮ'ಕಾರ, 'ಪ್ರಾಜ್ಞ' ಮತ್ತು 'ಅಕ್ಷರ'ರನ್ನು ಒಂದೇ ಎಂದು ಐಕ್ಯಮಾಡಿ ತೋರಿಸಲಾಗಿದೆ. ಈ ಓವೀಯಲ್ಲಿ 'ಓಂ'ಕಾರ, 'ಆತ್ಮ' ಮತ್ತು 'ಬ್ರಹ್ಮ'ರ ಐಕ್ಯವನ್ನು ಮಾಡಬೇಕೆಂದು ತಿಳಿಸಲಾಗಿದೆ.

ಮೇಲಿನ ವಿಶ್ಲೇಷಣೆಯಿಂದ "ತತ್ತ್ವಮಸಿ" ಎಂಬ ಮಹಾವಾಕ್ಯದಲ್ಲಿ 'ತ್ವಂ' ಪದದ ಲಕ್ಷ್ಯಾರ್ಥವಾದ ಆತ್ಮವೂ, 'ತತ್' ಪದದ ಲಕ್ಷ್ಯಾರ್ಥವಾಗಿರುವ ಬ್ರಹ್ಮವೂ ಒಂದಕ್ಕೊಂದು ತುರ್ಯಾವಸ್ಥೆಯಲ್ಲಿ ಐಕ್ಯವಾಗುತ್ತವೆ ಎಂದು ತಿಳಿದುಕೊಳ್ಳಬೇಕು. ಏಕೆಂದರೆ ಈ ಎರಡೂ ನಿರುಪಾಧಕ ಚೈತನ್ಯಗಳಾಗಿದ್ದು ಅವು ಎರಡಿರುವಂತಿಲ್ಲ. 'ಓಂ'ಕಾರವೆಂಬುದು ಆತ್ಮನ ಅಥವಾ ಬ್ರಹ್ಮನ ಪ್ರತೀಕವಾಗಿರುವುದರಿಂದ ಈ ಮೂರರ ಐಕ್ಯವನ್ನು ಸಾಧಿಸಲಾಗಿದೆ.

<u>ಓ.ಸಂ.70 :</u> ವಿಶ್ವಾತ್ಮನ ಅಭಿಮಾನದಿಂದ ನಡೆಯುವ ವ್ಯವಹಾರದಲ್ಲಿ ಜಾಗ್ರತಾವಸ್ಥೆ, ಸ್ಥೂಲದೇಹ, ನೇತ್ರಸ್ಥಾನ ಮತ್ತು ಸ್ಥೂಲಭೋಗಗಳು ಇರುತ್ತವೆ.

<u>ವಿವರಣೆ :</u> ವಿಶ್ವನು ಕೆಲವೊಂದು ವಿಷಯಗಳಿಗೆ ಅಭಿಮಾನಿಯಾಗಿದ್ದಾನೆ. ಅಭಿಮಾನಿಯಾಗಿರುವುದೆಂದರೆ ಯಾವುದರ ಮೇಲೆ ಅಭಿಮಾನವಿರುತ್ತದೋ ಅದನ್ನು 'ನಾನು' ಇಲ್ಲವೇ 'ನನ್ನದು' ಎಂದು ಭಾವಿಸುವುದು. ಇಲ್ಲಿ ವಿಶ್ವನನ್ನು ಜಾಗ್ರದಾವಸ್ಥೆಯ ಅಭಿಮಾನಿಯೆಂದರೆ ವಿಶ್ವನು ಜಾಗ್ರದಾವಸ್ಥೆಯನ್ನು ತನ್ನ ಅವಸ್ಥೆಯೆಂದು ಭಾವಿಸುವನು. ಹಾಗೆಯೇ ಅವನು ಸ್ಥೂಲದೇಹದ ಅಭಿಮಾನಿಯಾಗಿರುವುದರಿಂದ ಸ್ಥೂಲದೇಹವು ತನ್ನ

ದೇಹವೆಂದು ಅವನು ಭಾವಿಸುವನು. ಹಾಗೆಯೇ ಇಂದ್ರಿಯಗಳೆಲ್ಲವೂ ಈ ಸ್ಥೂಲದೇಹದ ಒಳಗಿದ್ದು ವಿಶ್ವನಿಗೆ ಇವುಗಳೆಲ್ಲ 'ತನ್ನವು' ಎಂದೆನಿಸುವುದರಿಂದ ಅವನು ಅವುಗಳ ಅಭಿಮಾನಿಯಾಗಿದ್ದಾನೆ. ಇಲ್ಲಿ ಉದಾಹರಣೆಗೆ ಉಪಲಕ್ಷಣವಾದ 'ನೇತ್ರಸ್ಥಾನ' ವನ್ನು ಮಾತ್ರ ಕೊಡಲಾಗಿದೆ. ಕೊನೆಯದಾಗಿ ಈ ಸ್ಥೂಲದೇಹದಿಂದ ಉಂಟಾಗುವ ಸುಖ-ದುಃಖಗಳೆಂಬ ಭೋಗವೆಲ್ಲವೂ 'ಸ್ಥೂಲಭೋಗ'ವಾಗಿರುತ್ತದೆ. ವಿಶ್ವನು ಈ ಸ್ಥೂಲಭೋಗದ ಅಭಿಮಾನಿಯಾಗಿರುವುದರಿಂದ ಅವನಿಗೆ ಉಂಟಾಗುವ ಸುಖ-ದುಃಖಗಳನ್ನು ಅವನು ತನ್ನ ಸುಖ-ದುಃಖಗಳೆಂದು ತಿಳಿಯುತ್ತಾನೆ. ಆತ್ಮಾನಾತ್ಮರ ಅನ್ಯೋನ್ಯ ಅಧ್ಯಾಸದಿಂದಲೇ ಈ ರೀತಿಯ ಜಡವಸ್ತುಗಳ ಮೇಲೆ ವಿಶ್ವನಿಗೆ ಅಭಿಮಾನ ಹುಟ್ಟುತ್ತದೆ.

**ಓ.ಸಂ. 71:** ಜಾಗ್ರತಾವಸ್ಥೆಯಲ್ಲಿರುವ ವಸ್ತುಗಳಿಗೆ ವಿಶ್ವನು ಅಸ್ತಿತ್ವವನ್ನು ಕೊಡುತ್ತಾನೆ. ಆದ್ದರಿಂದ ಅವುಗಳಿಗೆ ಸ್ವತಂತ್ರವಾದ ಅಸ್ತಿತ್ವವಿಲ್ಲ. ಅಲ್ಲದೇ ವಿಶ್ವನನ್ನು ಬಿಟ್ಟು ಬೇರೆಯ ಅಸ್ತಿತ್ವವು ಅವುಗಳಿಗೆ ಇರುವುದಿಲ್ಲ. ಈ ಜಡವಸ್ತುಗಳಿಗೆ 'ನಾನಿದ್ದೇನೆ' ಎಂಬುದು ತಿಳಿಯುವುದಿಲ್ಲ.

**ವಿವರಣೆ :** ಜಾಗೃತಾವಸ್ಥೆಯಲ್ಲಿರುವ ಜೀವನಾದ 'ವಿಶ್ವನು' ತನ್ನ ಅವಸ್ಥೆಯಾದ ಜಾಗೃತಾವಸ್ಥೆಯಲ್ಲಿ ತಾನು ಇಂದ್ರಿಯಗಳ ಮೂಲಕ ವಸ್ತುಗಳನ್ನು ತಿಳಿಯದ ಹೊರತು 'ಅವು ಇದ್ದಾವೆ' ಎಂದು ಅವನಿಗೆ ಅನ್ನಿಸುವುದಿಲ್ಲ. ಅದಕ್ಕಾಗಿಯೇ ಅವನು ಜಾಗೃತಾವಸ್ಥೆಯನ್ನು ತನ್ನ ಅವಸ್ಥೆಯೆಂದು ತಿಳಿಯುತ್ತಾನೆ. ಇದೇ ಕಾರಣದಿಂದಲೇ ವಸ್ತುಗಳಿಗೆ ಅವನಿಗಿಂತ ಬೇರೆಯಾದ ಅಸ್ತಿತ್ವವಿರುವುದಿಲ್ಲ. ಅಂದರೆ ಅವುಗಳಿಗೆ ಸ್ವತಂತ್ರ ಅಸ್ತಿತ್ವವಿರುವುದಿಲ್ಲ. ಅವನ ಅಸ್ತಿತ್ವವೇ ವಸ್ತುಗಳ ಅಸ್ತಿತ್ವವಾಗಿ ಕಾಣುತ್ತಿರುತ್ತದೆ. ಇದು ಸ್ವಪ್ನದಲ್ಲಿರುವ ವಸ್ತುಗಳು ಹೇಗೆ ಕನಸು ಕಾಣುವವನ ಸೃಷ್ಟಿಯಾಗಿರುತ್ತದೋ ಹಾಗೆಯೇ ಇರುತ್ತದೆ. ಈ ಜಡವಸ್ತುಗಳಿಗೆ 'ನಾನಿದ್ದೇನೆ' ಎಂಬುದು ತಿಳಿಯುವುದಿಲ್ಲ. ಅವುಗಳನ್ನು ತಿಳಿಯುವವನಿಗೆ ಮಾತ್ರ ಅವು ಇದ್ದಂತೆ ತೋರುತ್ತಿರುತ್ತವೆ.

**ಓ.ಸಂ.72:** ಆದ್ದರಿಂದ ಜಾಗ್ರತದ ವಸ್ತುಗಳಿಗೆ ವಿಶ್ವನ ಅಸ್ತಿತ್ವವೇ ಪ್ರಾಪ್ತವಾಗಿರುತ್ತದೆ. ವಿಶ್ವನು ವೈರಾಜದ ಅಂಶವಾಗಿದ್ದಾನೆ. ಹಾಗೆಯೇ ಸ್ಥೂಲದೇಹವು ವಿರಾಟ್‌ನ ಅಂಶವಾಗಿರುತ್ತದೆ.

**ವಿವರಣೆ :** ವಿಶ್ವನು ತನ್ನ ಅಂತಃಕರಣದ ಮೂಲಕ ಜಾಗ್ರತ ಪ್ರಪಂಚದೊಡನೆ ವ್ಯವಹರಿಸುತ್ತಾನೆ. ಅವನು ಯಾವ ವಸ್ತುಗಳನ್ನು ಸಂಪರ್ಕಿಸುತ್ತಾನೋ ಅದಕ್ಕೆ ಮಾತ್ರ ತನ್ನ ಅಸ್ತಿತ್ವವನ್ನು ಕೊಡುತ್ತಾನೆ. ಅವನು ಇಡೀ ಪ್ರಪಂಚದ ಬಗ್ಗೆಯೇ ಒಂದು ಕ್ಷಣ ಚಿಂತಿಸಿದಾಗ ಆ ಕ್ಷಣದಲ್ಲಿ ಅವನು ಇಡೀ ಪ್ರಪಂಚಕ್ಕೆ ತನ್ನ ಅಸ್ತಿತ್ವವನ್ನು ಕೊಡುತ್ತಾನೆ. ವೈರಾಜನು ಇಡೀ ಸ್ಥೂಲಪ್ರಪಂಚವನ್ನೇ ತನ್ನ ಉಪಾಧಿಯನ್ನಾಗಿಯೂ(ಸಮಷ್ಟಿ) ಮತ್ತು ಅವನು ಅದರ ಅಭಿಮಾನಿಯಾಗಿಯೂ ಇರುವನು. ಆದರೆ ವಿಶ್ವನು ಮಾತ್ರ ಸ್ಥೂಲದೇಹದ ಉಪಾಧಿಯಾಗಿಯೂ ಅವನು ಅದರ ಅಭಿಮಾನಿಯಾಗಿಯೂ ಮಾತ್ರ ಇರುವನು. ಹೀಗೆ ವೈರಾಜನು ಸರ್ವಜ್ಞನಾದರೆ ವಿಶ್ವನು ಅಲ್ಪಜ್ಞನಾಗಿದ್ದಾನೆ. ಹೀಗೆ ಸೋಪಾಧಿಕವಾಗಿದ್ದಾಗ ವಿಶ್ವನು ವೈರಾಜನ ಅಂಶವಾಗಿಯೇ ಕಾಣುತ್ತಾನೆ. ಆದರೆ ಓವೀಸಂ.68ರಲ್ಲಿ ಇವೆರಡರ ಐಕ್ಯವನ್ನು ಸಾದಿಸಲಾಗಿದೆ. ಇದನ್ನು ಇವೆರಡರ ನಿರುಪಾಧಿಕ ದೃಷ್ಟಿಕೋನದಿಂದ

ಹೇಳಲಾಗಿದೆ. ಹಾಗೆಯೇ ವಿಶ್ವದ ಅಂಗವಾಗಿಯೇ ವಿಶ್ವನ ಸ್ಥೂಲ ದೇಹವು ಇರುವುದರಿಂದ ಸ್ಥೂಲದೇಹವನ್ನು ವಿರಾಟ್‌ನ ಅಂಶವೆಂದೂ ಪರಿಗಣಿಸಬಹುದು.

**ಓ.ಸಂ.73 :** ವಿಶ್ವನ ಜಾಗ್ರತಾವಸ್ಥೆಯು ಸಮಷ್ಟಿ ಉತ್ಪತ್ತಿಯ ಅಂಶವಾಗಿದೆ. ವಿಶ್ವನ ಭೋಗವೂ ಕೂಡ ಸಮಷ್ಟಿಯ ಅಂಶವಾಗಿ ಏಕರೂಪವಾಗಿದೆ. ಇದನ್ನೇ 'ಮಾತೃಕಾ ಅಕಾರ' ಎನ್ನುವರು. ಅಕಾರವನ್ನು ಉಕಾರದಲ್ಲಿ ಲಯಗೊಳಿಸಬೇಕು.

**ವಿವರಣೆ :** ವಿಶ್ವನು ತನ್ನ ಜಾಗೃತಾವಸ್ಥೆಯಲ್ಲಿ ಪ್ರತಿಕ್ಷಣವೂ ತನ್ನ ಅಂತಃಕರಣ ಹಾಗೂ ಬಾಹ್ಯಕರಣಗಳ ಸಹಾಯದಿಂದ ಹೊಸ ಹೊಸ ಜ್ಞಾನವನ್ನು ಪಡೆಯುತ್ತಾನೆ. ಇದು ಚತುರ್ಮುಖ ಬ್ರಹ್ಮನ ಸೃಷ್ಟಿಯ ಒಂದು ಅಂಶವಾಗಿದೆ. ಸೃಷ್ಟಿಕರ್ತನು ಸತ್ಯಕಾಮನಾದುದರಿಂದ ಅವನ ಯೋಚನೆಗೆ ತಕ್ಕಂತೆ ಹೊಸ ಹೊಸ ಸೃಷ್ಟಿಯನ್ನು ಮಾಡುತ್ತಾನೆ. ವಿಶ್ವನಿಗೂ ಕೂಡ ಒಂದು ಅರ್ಥದಲ್ಲಿ ಅವನು ಪಡೆದ ಜ್ಞಾನದಿಂದಲೇ ಪದಾರ್ಥಗಳು ಇದ್ದಂತೆ ತೋರುತ್ತವೆ. ಆದ್ದರಿಂದ ವಿಶ್ವನ ಜಾಗೃತಾವಸ್ಥೆಯನ್ನು ಬ್ರಹ್ಮನ ಸೃಷ್ಟಿಯ ಒಂದು ಅಂಶವೆಂದು ಹೇಳಲಾಗಿದೆ. ಇನ್ನು ವಿಶ್ವನ ಭೋಗವು ಏಕರೂಪವಾಗಿದೆ. ಇದು ಹೇಗೆಂದರೆ ಈ ಭೋಗವು ಸಮಷ್ಟಿ ಭೋಗದ ಅಂಶವಾಗಿ ಅಂದರೆ ಏಕರೂಪವಾಗಿ ಇರುತ್ತದೆ. ಇದನ್ನೇ 'ಮಾತೃಕಾ ಅಕಾರ' ವೆಂದು ತಿಳಿಸಲಾಗಿದೆ. ಹಾಗೆಯೇ ಕೊನೆಯದಾಗಿ 'ಅಕಾರ'ವನ್ನು 'ಉಕಾರ'ದಲ್ಲಿ ಲಯಗೊಳಿಸಬೇಕು. ಏಕೆಂದರೆ, ವಿಶ್ವನ ಪ್ರತೀಕವಾಗಿರುವ 'ಅಕಾರ'ವನ್ನು ತೈಜಸನ ಪ್ರತೀಕವಾಗಿರುವ 'ಉಕಾರ'ದಲ್ಲಿ ಲಯಗೊಳಿಸಲಾಗುತ್ತದೆ. ಇದನ್ನು ಮುಂದಿನ ಓವೀಯಲ್ಲಿ ತಿಳಿಸಲಾಗಿದೆ.

**ಓ.ಸಂ.74 :** ವಿಶ್ವನನ್ನು ತೈಜಸನಲ್ಲಿಯೂ, ಸ್ಥೂಲದೇಹವನ್ನು ಸೂಕ್ಷ್ಮದೇಹದಲ್ಲೂ, ಜಾಗೃತಾವಸ್ಥೆಯನ್ನು ಸ್ವಪ್ನದಲ್ಲೂ, ಸ್ಥೂಲಭೋಗವನ್ನು ಪ್ರವಿವಿಕ್ತ ಭೋಗದಲ್ಲೂ ಲಯಗೊಳಿಸಬೇಕು.

**ವಿವರಣೆ :** ವಿಶ್ವನನ್ನು ತೈಜಸದಲ್ಲಿ ಲಯಮಾಡಬೇಕು. ತೈಜಸನಲ್ಲಿ 'ಸ್ವಪ್ನಾವಸ್ಥೆಯಲ್ಲಿ ತಿಳಿಯುವ ನಾನು' ಹಾಗೂ 'ತಿಳಿಯಲ್ಪಡುವ ಇಡೀ ಸ್ವಪ್ನಪ್ರಪಂಚದ ಅರಿವು' ಸೇರಿಕೊಂಡಿರುತ್ತವೆ. ಈ ಸ್ವಪ್ನದ ಅರಿವು ಆಗುವಾಗ ಯಾರಿಗೆ ಸತ್ಯವೆಂದು ಅರಿವಾಗುತ್ತದೋ ಅವನಿಗೆ ಎಚ್ಚರವಾದ ಮೇಲೆ 'ಅದೆಲ್ಲ ಭ್ರಾಂತಿ'ಯೆಂಬ ಅರಿವು ಆಗುತ್ತದೆ. ವಿಶ್ವನು ಸ್ವಪ್ನದಲ್ಲಿ ಇರುವುದಿಲ್ಲವಾದ್ದರಿಂದ ಅವನಿಗೆ ಅದು ಭ್ರಾಂತಿಯೆಂದು ತಿಳಿಯುವಂತಿಲ್ಲ. ಆದ್ದರಿಂದ ಅದು ಮೂರೂ ಅವಸ್ಥೆಗಳ ಸಾಕ್ಷಿಗೆ ಮಾತ್ರ ( ಸ್ವಪ್ನದಲ್ಲಿ ಆ ಅವಸ್ಥೆ ಸತ್ಯವೆಂದೇ ತಪ್ಪಾಗಿ ತಿಳಿದಿದ್ದರೂ) ಎದ್ದಮೇಲೆ ಆ ಸ್ವಪ್ನವು ಭ್ರಾಂತಿಯೆಂದೂ ತಿಳಿಯುತ್ತದೆ. ಎಚ್ಚರದವಸ್ಥೆ (ಜಾಗೃತ) ಯನ್ನು ಸ್ವಪ್ನದಲ್ಲಿ ಲಯಮಾಡುವುದೆಂದರೆ, ಜಾಗೃತವನ್ನೂ ಸ್ವಪ್ನದಂತೆ ಭ್ರಾಂತಿಯೆಂದು ಪರಿಗಣಿಸುವುದೇ ಆಗಿರುತ್ತದೆ.

ಬ್ರಹ್ಮಜ್ಞಾನಿಗೆ ಜಾಗ್ರತದ ಈ ಜಗತ್ತು ಸ್ವಪ್ನದಂತೆ ಭ್ರಾಂತಿಯಾಗಿಯೇ ತೋರುತ್ತದೆ. ಆದ್ದರಿಂದ ತಿಳಿಯಲ್ಪಡುವುದೆಲ್ಲವೂ ಮಿಥ್ಯೆಯಾಗಿದ್ದು ಕೇವಲ ಅದ್ವಯ ಆತ್ಮನು ಮಾತ್ರ ಸತ್ಯವಾಗಿರುವನು. ಇದಕ್ಕೆ ಶ್ರುತಿವಚನವೂ ಇದೆ ("ಯ ಆತ್ಮಾ ಸರ್ವಾಂತರಃ..." ಬೃ.ಉ.III.iv.1.). ಹೀಗೆ ವಿಶ್ವನನ್ನು ತೈಜಸನಲ್ಲಿ ಜ್ಞಾನದಿಂದ ಲಯಮಾಡುವುದರಿಂದ ಮುಮುಕ್ಷುವಿಗೆ ಜಾಗ್ರತ ಪ್ರಪಂಚದಲ್ಲಿ ಯಾವುದೇ ವ್ಯಾಮೋಹವಿರದೇ ವೈರಾಗ್ಯ ಪ್ರಾಪ್ತಿಯಾಗಲು ಸಹಾಯ ಮಾಡುತ್ತದೆ. ವಿಶ್ವನನ್ನು ತೈಜಸನಲ್ಲಿ ಲಯಮಾಡುವುದನ್ನು ತಿಳಿದ ಮೇಲೆ ವಿಶ್ವನ ಪ್ರತೀಕವಾದ 'ಅ'ಕಾರವನ್ನು ತೈಜಸನ ಪ್ರತೀಕವಾದ 'ಉ'ಕಾರದಲ್ಲಿ ಲಯಮಾಡುವುದೂ ಕೂಡ ಏಕೆಂದು ತಿಳಿದುಬರುತ್ತದೆ. ಅಲ್ಲದೇ ಜಾಗ್ರತಾವಸ್ಥೆಯಲ್ಲಿರುವ ಸ್ಥೂಲದೇಹದ ಅಭಿಮಾನಿಯಾದ ವಿಶ್ವನನ್ನು ಹಾಗೂ ಸ್ವಪ್ನಾವಸ್ಥೆಯಲ್ಲಿರುವ ಸೂಕ್ಷ್ಮದೇಹದ ಅಭಿಮಾನಿಯಾದ ತೈಜಸನಲ್ಲಿ ಲಯಗೊಳಿಸುವುದರಿಂದ ಸ್ಥೂಲದೇಹವು ಸೂಕ್ಷ್ಮದೇಹದಂತೆ ಕೇವಲ ತೋರಿಕೆಯದೆಂದು ತಿಳಿಯುತ್ತದೆ. ಆದ್ದರಿಂದ ಸ್ಥೂಲದೇಹವನ್ನು ಸೂಕ್ಷ್ಮದೇಹದಲ್ಲಿ ಲಯಗೊಳಿಸಬಹುದು.

ಇದೇ ವಾದದ ಆಧಾರದ ಮೇಲೆ ಯಥಾರ್ಥ ಜ್ಞಾನದ ಪ್ರಕಾರ ಜಾಗ್ರತಾವಸ್ಥೆಯು ಸ್ವಪ್ನದಂತೆ ಭ್ರಾಂತಿಜನ್ಯವಾಗಿರುವುದರಿಂದ ಜಾಗ್ರತವನ್ನು ಸ್ವಪ್ನದಲ್ಲಿ ಲಯಮಾಡಬಹುದಾಗಿರುತ್ತದೆ. ಇದೇ ರೀತಿ ಜಾಗ್ರತದಲ್ಲಿ ಹೇಗೆ ನಮಗೆ ಸುಖ-ದುಃಖಗಳು ಸತ್ಯವೆಂದು ಕಂಡು ಬರುತ್ತವೋ ಹಾಗೂ ಅವು ನಮ್ಮ ಹಿಂದಿನ ಕರ್ಮಫಲವೆಂದು ತಿಳಿಯುತ್ತದೋ ಹಾಗೆಯೇ ಸ್ವಪ್ನದಲ್ಲಿ ತೋರುವ ಸುಖ-ದುಃಖಗಳೂ ಕೂಡ ಅಲ್ಲಿ ಸತ್ಯವಾಗಿ ಕಂಡರೂ ಎಚ್ಚರದಲ್ಲಿ ಅವು ಭ್ರಾಂತಿಯೆಂದು ತೋರುತ್ತದೆ. ಹಾಗೆಯೇ ಜಾಗ್ರತದ ಸುಖ-ದುಃಖಗಳೂ (ಸ್ಥೂಲಭೋಗ) ಸ್ವಪ್ನದಂತೆ ಭ್ರಾಂತಿಯಾಗಿರುವುದರಿಂದ ಸ್ಥೂಲಭೋಗವನ್ನು ಸೂಕ್ಷ್ಮಭೋಗದಲ್ಲಿ ( ಪ್ರವಿವಿಕ್ತ ಭೋಗ ) ಲಯಮಾಡಬಹುದು. ಹೀಗೆ ವಿಶ್ವನನ್ನು ತೈಜಸನಲ್ಲಿ ಲಯಮಾಡುವುದು ಉಳಿದ ಲಯಗಳಿಗೂ ಅನ್ವಯವಾಗುವುದು.

**ಓ.ಸಂ.75:** ಸ್ವಪ್ನಾವಸ್ಥೆ, ಸೂಕ್ಷ್ಮದೇಹ, ಕಂಠಸ್ಥಾನ, ಪ್ರವಿವಿಕ್ತಭೋಗ – ಈ ಜಡಗಳಿಗೆ ತೈಜಸನೇ ಅಸ್ತಿತ್ವವನ್ನು ಕೊಡುವವನು.

**ವಿವರಣೆ :** ಜಾಗ್ರತದಲ್ಲಿ ವಿಶ್ವನು ಹೇಗೋ ಹಾಗೆಯೇ ತೈಜಸನು ಸ್ವಪ್ನಾವಸ್ಥೆಯನ್ನು ತಿಳಿದುಕೊಳ್ಳುವನು. ತಿಳಿದುಕೊಳ್ಳಲ್ಪಡುವ ಸಕಲವೂ ಜಡವಾಗಿರುತ್ತದೆ. ಇದರಲ್ಲಿ ತಿಳಿದುಕೊಳ್ಳುವವನು ಚೈತನ್ಯ ಸ್ವರೂಪ ನಾಗಿರುತ್ತಾನೆ. ತಿಳಿಯಲ್ಪಟ್ಟಿದ್ದು ಜಡ ಅಥವಾ ಅನಾತ್ಮವಾಗಿರುತ್ತದೆ. ಸ್ವಪ್ನಾವಸ್ಥೆಯೊಳಗೇ ಸೂಕ್ಷ್ಮದೇಹ ಹಾಗೂ ಆ ದೇಹದಿಂದ ಅನುಭವಿಸುವ ಸೂಕ್ಷ್ಮವಾದ ಭೋಗವಾದ ಪ್ರವಿವಿಕ್ತ ಭೋಗವಿರುತ್ತದೆ. ಸ್ವಪ್ನವಾಗುವಾಗ ಸೂಕ್ಷ್ಮವಾದ ಕೇವಲ ಮನಸ್ಸು ತನ್ನ ವ್ಯಾಪಾರವನ್ನು ನಡೆಸಿರುತ್ತದೆ. ಈ ಮನಸ್ಸು ಮಾತ್ರ ಸ್ವಪ್ನದಲ್ಲಿ ಚುರುಕಾಗಿದ್ದು ಅದನ್ನು ಕಂಠಸ್ಥಾನವೆಂದು ಕರೆದಿದ್ದಾರೆ. ಕಂಠಸ್ಥಾನದಲ್ಲಿರುವ ಹಿತಾನಾಡಿ ಮಾತ್ರ

ಸ್ಪಂದಿಸುತ್ತಿದ್ದು ಉಳಿದ ದೇಹವು ವಿಶ್ರಾಂತಿಯನ್ನು ಸ್ವಪ್ನಾವಸ್ಥೆಯಲ್ಲಿ ಪಡೆಯುತ್ತಿರುತ್ತದೆ. ಈ ಎಲ್ಲ ಜಡಗಳಿಗೆ 'ನಾನು ಇದ್ದೇನೆ' ಎಂಬ ತಿಳುವಳಿಕೆ ಇರುವುದಿಲ್ಲ. ತೈಜಸನು ಅವುಗಳನ್ನು ತಿಳಿದಾಗಲೇ ಅವುಗಳ ಇರುವಿಕೆಯು ಅವನಿಗೆ ತಿಳಿಯಲ್ಪಡುತ್ತದೆ. ಆದ್ದರಿಂದ ಅವನೇ ಈ ಜಡಗಳಿಗೆ ಅಸ್ತಿತ್ವವನ್ನು ಕೊಡುವವನಾಗುತ್ತಾನೆ.

**ಓ.ಸಂ.76:** ಆದ್ದರಿಂದ ಸಂಪೂರ್ಣವಾದ ಸ್ವಪ್ನ ಪ್ರಪಂಚವು ತೈಜಸನ ರೂಪವೇ ಆಗಿರುತ್ತದೆ. ಈ ತೈಜಸನು ಸಮಷ್ಟಿ ಸೂಕ್ಷ್ಮರೂಪದ ಸೂತ್ರಾತ್ಮನ ಅಂಶವಾಗಿರುತ್ತದೆ. ಹಾಗೆಯೇ ತೈಜಸನ ಅಭಿಮಾನಿಯಾದ ಸೂಕ್ಷ್ಮದೇಹವು ಸಮಷ್ಟಿ ಸೂಕ್ಷ್ಮದೇಹವಾದ ಹಿರಣ್ಯಗರ್ಭದ ಅಂಶವಾಗಿರುತ್ತದೆ.

**ವಿವರಣೆ:** ಹೀಗೆ ತೈಜಸನೇ ಜಡವಾಗಿರುವ ಸ್ವಪ್ನಪ್ರಪಂಚಕ್ಕೂ ಮತ್ತು ಅದರೊಳಗಿರುವ ಸೂಕ್ಷ್ಮದೇಹಾದಿಗಳಿಗೂ ಅಸ್ತಿತ್ವವನ್ನು ಕೊಡುವುದರಿಂದ ಅವನೇ ಸ್ವಪ್ನಪ್ರಪಂಚದ ರೂಪವಾಗಿದ್ದಾನೆ ಎಂದು ಹೇಳಬಹುದು. ವ್ಯಷ್ಟಿಯಲ್ಲಿ ತೈಜಸನು ಹೇಗೆ ಜಡ ಸೂಕ್ಷ್ಮದೇಹದ ಅಭಿಮಾನಿಯಾಗಿದ್ದಾನೋ ಹಾಗೆಯೇ ಸಮಷ್ಟಿಯಲ್ಲಿ ಸೂತ್ರಾತ್ಮನು ಹಿರಣ್ಯಗರ್ಭದ ( ಸಮಷ್ಟಿಸೂಕ್ಷ್ಮರೂಪದ ಮತ್ತು ಜಡವಾದ ) ಅಭಿಮಾನಿಯಾಗಿದ್ದಾನೆ. ವ್ಯಷ್ಟಿಯು ಸಮಷ್ಟಿಯ ಅಂಶವಾಗಿರುತ್ತದೆ. ಆದ್ದರಿಂದ ವ್ಯಷ್ಟಿ ತೈಜಸನು ಸಮಷ್ಟಿಸೂತ್ರಾತ್ಮನ ಅಂಶವಾಗಿದ್ದಾನೆ. ಹಾಗೆಯೇ ವ್ಯಷ್ಟಿ ಸೂಕ್ಷ್ಮದೇಹವು ಸಮಷ್ಟಿ ಹಿರಣ್ಯಗರ್ಭದ ಅಂಗವಾಗಿರುತ್ತದೆ. ತೈಜಸನು ಹಾಗೂ ಅವನ ಸೂಕ್ಷ್ಮ ದೇಹವು ವಿಶ್ವನಂತೆ ಪ್ರತ್ಯಕ್ಷ ಅನುಭವ ಗೋಚರನು; ಆದರೆ ಸೂತ್ರಾತ್ಮನು ಮತ್ತು ಹಿರಣ್ಯಗರ್ಭವು ಪರೋಕ್ಷವಾಗಿದ್ದು ತರ್ಕದಿಂದ ಸಿದ್ಧಿಸುತ್ತದೆ.

**ಓ.ಸಂ.77:** ಸ್ವಪ್ನಾವಸ್ಥೆಯು ಸಮಷ್ಟಿ ಸ್ಥಿತಿಯ ಅಂಶವಾಗಿದೆ. ಸ್ವಪ್ನದ ಹಾಗೂ ಸಮಷ್ಟಿ ಸ್ಥಿತಿಯ ಭೋಗವು ಒಂದೇ ರೀತಿಯಿರುತ್ತದೆ. ತೈಜಸನ ವಿಸ್ತಾರವೇ ವಿಶ್ವಾಭಿಮಾನಿಯಾದ ಸಮಸ್ತ ಸ್ಥೂಲವಾಗಿದೆ.

**ವಿವರಣೆ:** ಜಾಗ್ರತದಲ್ಲಿ ಕ್ಷಣ-ಕ್ಷಣ ಉತ್ಪತ್ತಿಯಾಗುವ ಪ್ರತ್ಯಕ್ಷಾನುಭವವು ಇಂದ್ರಿಯ ಮುಖಾಂತರವೇ ಮನಸ್ಸಿಗೆ ಸಂಬಂಧಿಸಿರುತ್ತದೆ. ಇದನ್ನು ಹಿಂದೆ ಬ್ರಹ್ಮನ ಸೃಷ್ಟಿಗೆ ಹೋಲಿಸಲಾಗಿದೆ. ಬ್ರಹ್ಮನ ಕಲ್ಪನೆಗಳು ಬಂದಂತೆ ಅವನ ಸೃಷ್ಟಿಕಾರ್ಯ ನಡೆಯುತ್ತದೆ. ಸೃಷ್ಟಿಸಲ್ಪಟ್ಟ ಕಲ್ಪನೆಗಳು ಅವನ ವಾಸನಾರೂಪದಲ್ಲಿ ಸ್ಥಿತವಾಗಿರುತ್ತವೆ. ಪ್ರತ್ಯಕ್ಷವು ಕ್ಷಣಿಕವಾದಂತೆ ಇದರ ವಾಸನೆಗಳು ಮನಸ್ಸಿನಲ್ಲಿ ಉಳಿದು ಅವು ಸ್ಮರಣೆರೂಪದಲ್ಲಿ ನಮಗೆ ಬೇಕಾದಾಗ ಬರುತ್ತವೆ. ಸ್ವಪ್ನವೂ ಕೂಡ ಹಾಗೆಯೇ ವಾಸನಾರೂಪದಲ್ಲಿ ಸ್ಥಿತವಾಗಿದ್ದು ನಮಗೆ ಆಗಾಗ ಸ್ಮರಣೆ ರೂಪದಲ್ಲಿ ಕಾಣುತ್ತದೆ. ಆದ್ದರಿಂದ ಜಾಗ್ರತವನ್ನು ಸೃಷ್ಟಿಯ ಅಂಶವೆಂದೂ ಸ್ವಪ್ನವನ್ನು ಸ್ಥಿತಿಯ ಅಂಶವೆಂದು ವಿವರಿಸಲಾಗಿದೆ. ಈಶ್ವರನ ಈ ಸಮಷ್ಟಿ-ಸೃಷ್ಟಿ-ಸ್ಥಿತಿ-ಲಯಗಳನ್ನು 'ಜೀವ'ರು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಆದರೂ ಅದರ ಮೇಲೆ 'ಜೀವ'ರು ನಾಮ-ರೂಪವನ್ನು ಸೃಷ್ಟಿಮಾಡಲು ಸಾಧ್ಯವಾಗುತ್ತದೆ. ಅದು

ಶುದ್ಧ ಅಸ್ತಿ–ಭಾತಿ–ಪ್ರಿಯ ಸ್ವರೂಪವೇ ಆಗಿರಬೇಕು. ಅಂದರೆ ಅದು ಸತ್–ಚಿತ್–ಆನಂದ ಸ್ವರೂಪವು. ಇದು ಸೃಷ್ಟಿ ಕಾಲದಲ್ಲಿ ಬಹಿರ್ಮುಖವಾಗಿ ತೋರುವಾಗ ಪ್ರಥಮ ಶರೀರಿಯಾದ ಚತುರ್ಮುಖ ಬ್ರಹ್ಮನ ಮಾನಸ ರೂಪದಲ್ಲಿದ್ದು, ಬಾಹ್ಯರೂಪದಲ್ಲಿ ತೋರುವಾಗ ಪಂಚಭೂತಾತ್ಮಕವಾಗಿಯೂ, ದೇಶ–ಕಾಲ–ಕಾರ್ಯ–ಕಾರಣ–ವಸ್ತುರೂಪವಾಗಿಯೂ ಮತ್ತು ಹಿಂದಿನ ಕಲ್ಪದ ಬ್ರಹ್ಮನು ಇದನ್ನೇ ಸೃಷ್ಟಿಮಾಡಿದ್ದೂ ಆಗಿರುತ್ತದೆ. ಇದು ವೇದದಲ್ಲೂ ಉಲ್ಲೇಖವಾಗಿರುವುದರಿಂದ ಅದೇ ರೀತಿ ಈ ಕಲ್ಪದ ಬ್ರಹ್ಮನಿಗೂ ಸೃಷ್ಟಿಸಲು ಸಾಧ್ಯವಾಗುತ್ತದೆ. ಇದು 'ಅಷ್ಟಧಾ ಪ್ರಕೃತಿ' ಎಂದು ಪ್ರಸಿದ್ಧವಾಗಿರುವ ಮತ್ತು ನಿತ್ಯವಾಗಿರುವ 'ಪಂಚತನ್ಮಾತ್ರೆಗಳು', ಸೂಕ್ಷ್ಮರೂಪದ 'ಅಹಂಕಾರ', 'ಮಹತ್ತು' ಮತ್ತು 'ಅವ್ಯಕ್ತವೇ' ಆಗಿರುತ್ತದೆ. (ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವಚ–ಭ.ಗೀ.XIII.5). ಈ ಈಶ ಸೃಷ್ಟಿಯು ಆದ ಮೇಲೆ ಇದು ಹಿಂದಿನ ಕಲ್ಪದಂತೆಯೇ ನಿತ್ಯವಾಗಿರುವುದರಿಂದ ಸ್ಥಿತವೂ ಆಗಿರುತ್ತದೆ. ಸ್ವಪ್ನದ ಭೋಗವು ಮತ್ತು ಬ್ರಹ್ಮನ ಭೋಗವು ಮಾನಸಿಕವಾಗಿರುವುದರಿಂದ ಎರಡರ ಭೋಗವೂ ಒಂದೇ ರೀತಿಯಲ್ಲಿರುತ್ತವೆ ಎಂದು ಈ ಓವೀಯಲ್ಲಿ ಹೇಳಲಾಗಿದೆ.

ಅಲ್ಲದೇ ಈ ಓವೀಯಲ್ಲಿ ವಿಶ್ವನು ತೈಜಸನ ವಿಸ್ತಾರವೇ ಆಗಿದ್ದಾನೆ ಎಂದೂ ತಿಳಿಸಲಾಗಿದೆ. ಇದು ಹೇಗೆಂದರೆ ವಿಶ್ವನು ಬಾಹ್ಯರೂಪದಲ್ಲಿ ಜಗತ್ತಿನ ಸತ್ಯವಾಗಿರುವ ದೃಶ್ಯವನ್ನು ಇದೆ ಎಂದು ಭ್ರಾಂತಿಯಿಂದ ಭಾವಿಸಿದರೂ ಕೂಡ ಅದು ಅದನ್ನು ತಿಳಿಯುವ ಜ್ಞಾತೃವೂ, ಅದನ್ನು ಭೋಗಿಸುವ ಭೋಕ್ತೃವೂ ಮತ್ತು ಎಲ್ಲ ವೃತ್ತಿಗಳೂ ಮಾನಸಿಕ ರೂಪದಲ್ಲೇ ಇರುತ್ತವೆ ಎಂದು ತಿಳಿಯಬೇಕು. ಇದೇ ರೀತಿ ಸ್ವಪ್ನದಲ್ಲೂ ತೈಜಸನಿಗೆ ಎಲ್ಲ ದೃಶ್ಯಗಳೂ ಬಾಹ್ಯರೂಪದಲ್ಲೇ ಕಂಡರೂ ಅದೆಲ್ಲ ಭ್ರಾಂತಿಯೆಂದೇ ಎದ್ದಮೇಲೆ ತಿಳಿಯುತ್ತದೆ. ಬ್ರಹ್ಮಜ್ಞಾನಿಗೂ ಹೀಗೆ ವಿಶ್ವನು ತೈಜಸನ ವಿಸ್ತಾರವೆಂದೇ ಅನುಭವವಾಗುತ್ತದೆ.

<u>ಓ.ಸಂ.78 :</u> ಅದೇ ರೀತಿ ವೈರಾಜನ ಅಭಿಮಾನಿಯೂ ಕೂಡ ಸೂತ್ರಾತ್ಮನ ಅಭಿಮಾನದ ವಿಸ್ತಾರವೇ ಆಗಿರುತ್ತಾನೆ. ಅಂದರೆ ಇದೆಲ್ಲ ಓಂಕಾರವೆಂಬ ಹೆಸರಿನ ಬ್ರಹ್ಮವಾಗಿದೆ ಮತ್ತು ಅಕಾರವು ಉಕಾರವೆಂಬುದರ ವಿಸ್ತಾರವೇ ಆಗಿರುತ್ತದೆ.

<u>ವಿವರಣೆ :</u> ಹಿಂದಿನ ಓವೀಯಲ್ಲಿ ವಿಶ್ವನ ಅಭಿಮಾನಿಯು ತೈಜಸನ ಅಭಿಮಾನಿಯ ವಿಸ್ತಾರವೇ ಆಗಿರುತ್ತಾನೆ ಎನ್ನುವ ವಿಷಯವೂ ಪ್ರಸ್ತಾಪವಾಗಿತ್ತು. ಇದೇ ರೀತಿಯಲ್ಲಿ ಈ ಓವೀಯಲ್ಲಿಯೂ ಸಮಷ್ಟಿ ವಿಶ್ವದ ಸ್ಥೂಲರೂಪವಾದ ವಿರಾಟ್‌ದ ಅಭಿಮಾನಿಯಾದ ವೈರಾಜನು ಸೂಕ್ಷ್ಮರೂಪದ ಹಿರಣ್ಯಗರ್ಭದ ಅಭಿಮಾನಿಯಾದ ಸೂತ್ರಾತ್ಮನ ವಿಸ್ತಾರವಾಗಿರುತ್ತಾನೆ ಅಥವಾ ವೈರಾಜನ ಸಂಕೇತವಾದ ಅಕಾರವು ಸೂತ್ರಾತ್ಮನ ಪ್ರತೀಕವಾದ ಉಕಾರದ ಅಂಶವಾಗಿರುತ್ತದೆ ಎಂಬುದಾಗಿ ತಿಳಿಸಲಾಗಿದೆ. ವ್ಯಷ್ಟಿ ಹಾಗೂ ಸಮಷ್ಟಿಗಳು ಈ

ವಿಷಯದಲ್ಲಿ ಒಂದೇ ಸಮವಿದ್ದರೂ ಒಂದು ಮುಖ್ಯ ವ್ಯತ್ಯಾಸವಿರುತ್ತದೆ. ಅದು ವಿಶ್ವ ಹಾಗೂ ತೈಜಸರು ಜಾಗ್ರತ ಮತ್ತು ಸ್ವಪ್ನಗಳನ್ನು ಕ್ರಮವಾಗಿ ಅನುಭವಿಸುವಾಗ ಅವುಗಳನ್ನು ಸತ್ಯವೆಂದೇ ತಿಳಿಯುತ್ತಾರೆ. ಆದರೆ ಸಮಷ್ಟಿಯಲ್ಲಿರುವ ವೈರಾಜ್ ಮತ್ತು ಸೂತ್ರಾತ್ಮರು ತಾವು ಕ್ರಮವಾಗಿ ಅನುಭವಿಸುವ ವಿರಾಟ್ ಹಾಗೂ ಹಿರಣ್ಯಗರ್ಭರನ್ನು ಕೇವಲ ಭ್ರಾಂತಿಯೆಂದೂ ಅವು ಸತ್ಯವಲ್ಲವೆಂದೂ ಅವರಿಗೆ ತಿಳಿದಿರುತ್ತದೆ. ಏಕೆಂದರೆ ಚತುರ್ಮುಖ ಬ್ರಹ್ಮನು ನಮ್ಮ ಹಾಗೆ ಹುಟ್ಟುವಾಗ ಅಜ್ಞಾನಿಯಾದರೂ ತಕ್ಷಣವೇ ಅವನಿಗೆ ಜ್ಞಾನೋದಯವಾಯಿತೆಂದು ಶ್ರುತಿಯೇ ಹೇಳುತ್ತದೆ.

**ಓ.ಸಂ.79:** 'ಉ'ಕಾರವನ್ನು 'ಮ'ಕಾರದಲ್ಲಿ, ಅಂದರೆ ತೈಜಸನನ್ನು ಪ್ರಾಜ್ಞನಲ್ಲಿ ಲಯಗೊಳಿಸಬೇಕು. 'ಉ'ಕಾರವು ತೈಜಸನ ಪ್ರತೀಕವಾಗಿದೆ. ಹಾಗೆಯೇ 'ಮ'ಕಾರವು ಪ್ರಾಜ್ಞನ ಪ್ರತೀಕವಾಗಿದೆ. ಆದ್ದರಿಂದ ತೈಜಸನನ್ನು ಪ್ರಾಜ್ಞನಲ್ಲಿ ಲಯ ಮಾಡುವುದೆಂದರೆ 'ಉ'ಕಾರವನ್ನು 'ಮ'ಕಾರದಲ್ಲಿ ಲಯಮಾಡಿದಂತೆಯೇ ಆಗಿರುತ್ತದೆ.

**ವಿವರಣೆ :** ತೈಜಸನೆಂದರೆ ಇಡೀ ಸ್ವಪ್ನಪ್ರಪಂಚವು ಅಡಗಿರುತ್ತದೆ. ಇದರಲ್ಲಿ ತಿಳಿಯುವವನು ಹಾಗೂ ತಿಳಿಯಲ್ಪಡುವುದು ಎರಡೂ ಸೇರಿರುತ್ತವೆ. ವೈರಾಜನಂತೆ ತೈಜಸನ ವರ್ಣನೆಯನ್ನೂ ಮಾಂಡೂಕ್ಯ ಶ್ರುತಿಯಲ್ಲಿ ಮಾಡಲಾಗಿದೆ. ಇಬ್ಬರೂ ಕ್ರಮವಾಗಿ ಸ್ಥೂಲ ಹಾಗೂ ಸೂಕ್ಷ್ಮರೂಪದಲ್ಲಿ ಹತ್ತೊಂಭತ್ತು ಮುಖಗಳಿಂದ (ಏಕೋನವಿಂಶತಿ ಮುಖಃ) ತಿಳಿಯುವವರಾಗಿಯೂ ಮತ್ತು ಸಪ್ತಾಂಗಗಳುಳ್ಳ (ಏಳು ಅಂಗಗಳುಳ್ಳ) ಜಡವಿಶ್ವವಾಗಿ ತಿಳಿಯಲ್ಪಡುವುದಾಗಿಯೂ ಇರುತ್ತದೆ. ತೈಜಸನೆಂದರೆ ಸ್ವಪ್ನಾವಸ್ಥೆಯಲ್ಲಿರುವವನು. ಅವನು ವಿಶ್ವನಂತೆ ಅನುಭವವಿರುವಾಗ ಸತ್ಯವೆಂದು ಕಂಡರೂ ಎದ್ದಮೇಲೆ ಅದು ಅಸತ್ಯವೆಂದೂ; ಭ್ರಾಂತಿಯಿಂದ ಸತ್ಯವೆಂದು ತೋರಿದರೂ ಅದು ನಿಜವಾಗಿ ಇರುವುದಿಲ್ಲವೆಂದೂ ತಿಳಿಯಿತು. ಭ್ರಾಂತಿಯ ಹಾವು ಸ್ವಲ್ಪ ಸಮಯದ ನಂತರ ಹೇಗೆ ಅದು ತೋರಿದ್ದೂ ಕೂಡ ಮರೆತು ಹೋಗುವುದೋ ಹಾಗೆ ಜಾಗ್ರತ ಮತ್ತು ಸ್ವಪ್ನಪ್ರಪಂಚಗಳು ಸುಷಪ್ತಿಯಲ್ಲಿ ಲೀನವಾಗಿ ಸಂಪೂರ್ಣವಾಗಿ ಇಲ್ಲವಾಗುವುವು. ಅಂದರೆ ತೋರಿದ್ದೂ ಕೂಡ ಅನುಭವಕ್ಕೆ ಅವು ಬರುವುದಿಲ್ಲ. ಹೀಗೆ ವಿಶ್ವ ಮತ್ತು ತೈಜಸರು ಪ್ರಾಜ್ಞನಲ್ಲಿ ಲೀನವಾಗುವರು. ಎದ್ದಮೇಲೆ ಪ್ರಾಜ್ಞನಿಗೆ ಸುಷುಪ್ತಿಯಲ್ಲಿ ತಾನು ಏನನ್ನೂ ನೋಡಲಿಲ್ಲವೆಂಬ ಅನುಭವವು ಅಜ್ಞಾನದ ಇರುವಿಕೆಯನ್ನು ತೋರಿಸುತ್ತದೆ. ಅಂದರೆ ಸ್ಥೂಲ–ಸೂಕ್ಷ್ಮಗಳೆಲ್ಲವೂ ಅವುಗಳ ಕಾರಣವಾದ ಅಜ್ಞಾನವಾಗಿ ಪ್ರಾಜ್ಞನಲ್ಲಿರುವುವು. ಅಂದರೆ 'ಅ'ಕಾರ, 'ಉ'ಕಾರಗಳೆರಡೂ 'ಮ'ಕಾರದಲ್ಲಿ ಲೀನವಾಗುತ್ತವೆ.

**ಓ.ಸಂ.80:** ಸ್ವಪ್ನವನ್ನು ಸುಷುಪ್ತಿಯಲ್ಲಿಯೂ, ಪ್ರವಿವಿಕ್ತ ಭೋಗವನ್ನು ಆನಂದದಲ್ಲಿಯೂ, ಸೂಕ್ಷ್ಮದೇಹವನ್ನು ಅಜ್ಞಾನದಲ್ಲಿಯೂ ಜ್ಞಾನದಿಂದ ನಿಶ್ಚಯವಾಗಿಯೂ ಲೀನಗೊಳಿಸಬೇಕು.

**ವಿವರಣೆ :** ಈ ಓವೀಯು ಹಿಂದಿನ ಓವೀಯ ಮುಂದುವರಿದ ಭಾಗವಾಗಿದೆ. ವಿಶ್ವವು ಸಂಪೂರ್ಣವಾಗಿ ತೈಜಸನಲ್ಲಿ ಲೀನಗೊಂಡಮೇಲೆ ( ವಿಶ್ವನು ತೈಜಸನ ಸ್ವರೂಪವೇ ಎಂದು ಜ್ಞಾನದಿಂದ ತಿಳಿದುಕೊಂಡಮೇಲೆ ) ತೈಜಸನನ್ನೂ ಕೂಡ ಪ್ರಾಜ್ಞನಲ್ಲಿ ಜ್ಞಾನದಿಂದ ಲೀನಗೊಳಿಸುವ ಪ್ರಕ್ರಿಯೆಯು ಹಿಂದಿನ ಓವೀಯಿಂದ ಮುಂದುವರೆದಿದೆ. ತೈಜಸನು ಪ್ರಾಜ್ಞನಲ್ಲಿ ಲೀನಹೊಂದುವುದೆಂದರೆ ಸ್ವಪ್ನವು ಕೇವಲ ಮನಸ್ಸಿನ ಕಲ್ಪನೆಯಾಗಿದ್ದು ಅದಕ್ಕೆ ನಿಜವಾದ ಅಸ್ತಿತ್ವವು ಇರುವುದಿಲ್ಲವೆಂದು ಜ್ಞಾನದಿಂದ ತಿಳಿದುಕೊಳ್ಳುವುದೇ ಆಗಿರುತ್ತದೆ. ಹೀಗೆ ತಿಳಿದುಕೊಂಡಾಗ ಸ್ವಪ್ನವನ್ನು ಸುಷುಪ್ತಿಯ ಅವಸ್ಥೆಯಂದೇ ಪರಿಗಣಿಸಬಹುದು. ಏಕೆಂದರೆ ಹೀಗೆ ಭಾವಿಸುವುದರಿಂದ ಇಲ್ಲದೇ ಇರುವ ಸ್ವಪ್ನಪ್ರಪಂಚವನ್ನು ಇದೆಯೆಂದು ಭಾವಿಸುವ ಭ್ರಾಂತಿಯು ಬಿಟ್ಟುಹೋದಂತಾಗುತ್ತದೆ. ಹಾಗೆಯೇ ಸ್ವಪ್ನದಲ್ಲಿ ಸೂಕ್ಷ್ಮರೂಪದ ಪ್ರವಿವಿಕ್ತಭೋಗವು ಸುಖ-ದುಃಖ ರೂಪದಲ್ಲಿರುತ್ತದೆ. ಅದು ಬಾಹ್ಯವಿಷಯಗಳಿಂದ ಬರುತ್ತಿದೆಯೆಂಬ ಭ್ರಾಂತಿಯು ತೊಲಗಿ ಸುಷುಪ್ತಿಯಲ್ಲಿ ಅನುಭವಿಸುವ ಆಂತರ್ಯದ ಆನಂದವೇ ಆಗಿರುತ್ತದೆ. ಇದರ ಜ್ಞಾನೋದಯವಾಗುವುದೇ ಪ್ರವಿವಿಕ್ತ ಭೋಗವನ್ನು ಆನಂದದಲ್ಲಿ ಲೀನಗೊಳಿಸುವುದು ಎಂಬುದಾಗಿರುತ್ತದೆ. ಹಾಗೆಯೇ ಕೊನೆಯದಾಗಿ ಸೂಕ್ಷ್ಮದೇಹವನ್ನು ಅಜ್ಞಾನದಲ್ಲಿ ಜ್ಞಾನದಿಂದ ಲೀನಗೊಳಿಸಬೇಕು. ಸ್ಥೂಲದೇಹವೆಂದರೆ ನಿಜವಾಗಿ ಅದು ಸೂಕ್ಷ್ಮದೇಹದ ಕ್ರಿಯೆಗಳೇ ಆಗಿರುತ್ತದೆ ಎಂದು ಹಿಂದೆ ತಿಳಿಸಲಾಗಿದೆ. ಹೀಗೆ ಜ್ಞಾನದಿಂದ ತಿಳಿದಾಗ ಸ್ಥೂಲದೇಹವನ್ನು ಸೂಕ್ಷ್ಮದೇಹದೊಳಗೆ ಲೀನಗೊಳಿಸಿದಂತಾಗುತ್ತದೆ. ಹಾಗೆಯೇ ಈ ಸೂಕ್ಷ್ಮದೇಹವು ಸೃಷ್ಟಿಸುವ ಬಾಹ್ಯವಿಷಯಗಳು ನಿಜವಾಗಿ ಇರುವುದಿಲ್ಲವೆಂದೂ ಜ್ಞಾನದಿಂದ ತಿಳಿಯಬೇಕು. ಆಗ ಬಾಹ್ಯದಲ್ಲಿ ವಿಷಯಗಳೇ ಇಲ್ಲದ, ವೃತ್ತಿಗಳೇ ಇರದ ಸೂಕ್ಷ್ಮದೇಹವನ್ನು ಕಲ್ಪನೆಮಾಡಲೂ ಆಗುವುದಿಲ್ಲ. ಅದು ಏನೂ ಇಲ್ಲದಿರುವ ಸುಷುಪ್ತಿ ಅವಸ್ಥೆಗೆ ಸಮನಾಗಿರುತ್ತದೆ. ಆದರೆ ನಿದ್ರೆಯಿಂದ ಎದ್ದಮೇಲೆ ಪ್ರತಿದಿನ ಪುನಃ ಸ್ವಪ್ನ-ಎಚ್ಚರಗಳು ಮತ್ತು ಅವುಗಳು (ಬಾಹ್ಯ ವಿಷಯಗಳು ) ಸತ್ಯವೆಂಬ ಭ್ರಾಂತಿಯು ಬರುವುದರಿಂದ ಅಜ್ಞಾನವು ಮೂರು ಅವಸ್ಥೆಗಳಲ್ಲಿರುವುದು ನಿಶ್ಚಯವಾಗುತ್ತದೆ. ಆತ್ಮನ ಸ್ವರೂಪವನ್ನು ಮುಚ್ಚುವ (ಆವರಣ) ಕಾರಣ-ರೂಪದ ಈ ಅಜ್ಞಾನವೂ ಸ್ವಪ್ನ-ಜಾಗ್ರತಗಳಲ್ಲಿ ಕಾಣುವ ಬಾಹ್ಯ ಅವಸ್ಥೆಗಳನ್ನೂ ಸೃಷ್ಟಿಸುತ್ತದೆ (ವಿಕ್ಷೇಪ). ಆದುದರಿಂದ ಸೂಕ್ಷ್ಮದೇಹವು ಸುಷುಪ್ತಿಯಲ್ಲಿರುವ ಅಜ್ಞಾನದಲ್ಲಿ ಲೀನಗೊಂಡಿದೆ ಎಂದು ತಿಳಿದುಕೊಳ್ಳಬೇಕು; ಕಾರಣದೇಹವಾದ ಪ್ರಾಜ್ಞನಿಂದ ವಿಸ್ತಾರಗೊಂಡಿವೆಯೆಂದು ತಿಳಿಯಬೇಕು. ಏಕೆಂದರೆ ಪ್ರಾಜ್ಞನೇ ಅಜ್ಞಾನ ರೂಪದ ಕಾರಣಕ್ಕೆ ಅಸ್ತಿತ್ವವನ್ನು ಕೊಡುತ್ತಾನೆಂದು ತಿಳಿಯಬೇಕು.

**ಓ.ಸಂ.81 :** ಮೂರೂ ಅವಸ್ಥೆಗಳಲ್ಲಿ ತೋರುವ ಸ್ಥೂಲ ಸೂಕ್ಷ್ಮ ಹಾಗೂ ಕಾರಣಗಳು ಪ್ರಾಜ್ಞನಿಂದ ವಿಸ್ತಾರಗೊಂಡಿವೆಯೆಂದೂ ತಿಳಿಯಬೇಕು. ಏಕೆಂದರೆ ಪ್ರಾಜ್ಞನೇ ಅಜ್ಞಾನರೂಪದ ಕಾರಣಕ್ಕೆ ಅಸ್ತಿತ್ವವನ್ನು ಕೊಡುತ್ತಾನೆಂದು ತಿಳಿಯಬೇಕು.

**ವಿವರಣೆ :** ಜಾಗ್ರತದಲ್ಲಿ ಸ್ಥೂಲವೆಂದರೆ ಇಡೀಸ್ಥೂಲ ಪ್ರಪಂಚ ಮತ್ತು ಸ್ಥೂಲದೇಹವಾಗಿರುತ್ತದೆ. ಇವುಗಳಿಂದ ವಿಶ್ವನು ಸ್ಥೂಲರೂಪದ ಸುಖ–ದುಃಖಗಳನ್ನು ಅನುಭವಿಸುತ್ತಾನೆ. ಅದೇರೀತಿ ಸ್ವಪ್ನದಲ್ಲಿ ಇಡೀ ವಿಶ್ವವು ಸೂಕ್ಷ್ಮವಾಗಿರುತ್ತದೆ. ಇವುಗಳ ಅಂಗವಾದ ಸೂಕ್ಷ್ಮದೇಹವು ಮತ್ತು ಇವುಗಳಿಂದ ತೈಜಸನು ಸೂಕ್ಷ್ಮರೂಪದ ಸುಖ–ದುಃಖಗಳನ್ನು ಅನುಭವಿಸುತ್ತಾನೆ. ಹೀಗೆ ಸ್ಥೂಲ–ಸೂಕ್ಷ್ಮದಲ್ಲಿರುವ ಸಕಲವೂ ಪ್ರತಿನಿತ್ಯ ಸುಷುಪ್ತಿಯಲ್ಲಿರುವ ಅಜ್ಞಾನದಲ್ಲಿ ಲೀನವಾಗಿ ಪುನಃ ಜಾಗ್ರತ–ಸ್ವಪ್ನಗಳಲ್ಲಿ ಕಾಣಿಸಿಕೊಳ್ಳುತ್ತವೆ. ಅಂದರೆ ಅಜ್ಞಾನದಿಂದ ಅವು ಹೊರಗೆ ಬರುತ್ತವೆ. ಆದುದರಿಂದ ಅಜ್ಞಾನವನ್ನು ಕಾರಣವೆಂದೂ, ಸ್ಥೂಲ–ಸೂಕ್ಷ್ಮಗಳನ್ನು ಇದರ ಕಾರ್ಯವೆಂದೂ ಹೇಳಬಹುದು. ಇನ್ನು ಈ ಸ್ಥೂಲ–ಸೂಕ್ಷ್ಮ–ಕಾರಣಗಳು ಹೇಗೆ ಪ್ರಾಜ್ಞನಿಂದ ವಿಸ್ತಾರಗೊಂಡಿದೆ ಎಂಬುದನ್ನು ತಿಳಿಯಬೇಕು. ಸ್ಥೂಲ–ಸೂಕ್ಷ್ಮ ದೇಹಗಳ ಅಭಿಮಾನಿಗಳಾದ ಕ್ರಮವಾಗಿ ವಿಶ್ವ ಮತ್ತು ತೈಜಸರು ತಮ್ಮ ಬಾಹ್ಯ–ಅಂತಃಕರಣಗಳಿಂದ ಸ್ಥೂಲ–ಸೂಕ್ಷ್ಮ ಪ್ರಪಂಚವನ್ನು ತಿಳಿಯುವರು ಹಾಗೂ ಅದರಿಂದ ಅನೇಕ ವ್ಯಾಪಾರವನ್ನು ನಡೆಸುವರು. ಇಲ್ಲಿ ತಿಳಿಯಲ್ಪಡುವ ಇಡೀ ಜಾಗ್ರತ–ಸ್ವಪ್ನ ಪ್ರಪಂಚಗಳು ಜಡವಾಗಿರಲೇಬೇಕು. ಅವುಗಳನ್ನು ತಿಳಿಯುವ ವಿಶ್ವ–ತೈಜಸರು ಮಾತ್ರ ಚೈತನ್ಯಶೀಲರಾಗಿರಬೇಕಾಗುತ್ತದೆ. ಆದರೆ ವಿಶ್ವ–ತೈಜಸರೂ ಕೂಡ ಜಡವನ್ನು ತಿಳಿಯುವವರಾಗಿ ತಿಳಿಯಲ್ಪಟ್ಟಿದ್ದಾರೆ. ಅಂದರೆ ಅವರೂ ಜಡಸ್ವರೂಪರೇ ಆಗಿರುತ್ತಾರೆ. ಹಾಗಾದರೆ ಅವರಲ್ಲಿ ವಿರುದ್ಧವಾಗಿರುವ ಜಡ ಮತ್ತು ಚೈತನ್ಯ ಸ್ವರೂಪಗಳು ಹೇಗಿರಲು ಸಾಧ್ಯ? ಅಂದರೆ ಸಾಧ್ಯವಿಲ್ಲ. ಇಲ್ಲಿ ತಿಳಿಯುತ್ತಿರುವ ಚೈತನ್ಯವು ಮೂರು ಅವಸ್ಥೆಗಳ ಸಾಕ್ಷಿಯಾಗಿರುತ್ತದೆ ಮತ್ತು ತಿಳಿಯಲ್ಪಡುವ ವಿಶ್ವ–ತೈಜಸರ ಜಡಭಾಗಗಳು ಅವರ ದೇಹಗಳೇ ಆಗಿರುತ್ತವೆ. ನಾವು ಈ ಸಾಕ್ಷಿಯನ್ನು ತಿಳಿಯದೇ ತಪ್ಪು ತಿಳುವಳಿಕೆಯಿಂದ 'ಈ ಜಡದೇಹಗಳೇ ಚೈತನ್ಯದಂತೆ ಕೆಲಸ ಮಾಡುತ್ತವೆ' ಎಂಬ ಭ್ರಮೆಯಲ್ಲಿರುತ್ತೇವೆ. ಆತ್ಮಜ್ಞಾನದಿಂದ ಈ ಅಜ್ಞಾನ ನಾಶವಾಗುತ್ತದೆ. ಆಗ ಸಾಕ್ಷಿಯಾಗಿ ಮೂರು ಅವಸ್ಥೆಗಳಿಗೆ ಅಸ್ತಿತ್ವವನ್ನು ಕೊಡುವುದಲ್ಲದೇ ಅವುಗಳಿಗೆ ಆಧಾರವಾಗಿರುತ್ತದೆ. ಅದು ಹೇಗೆಂದರೆ ಸಾಕ್ಷಿಯು ಅವುಗಳನ್ನು ತಿಳಿಯದೇ ಅವುಗಳ ಅಸ್ತಿತ್ವವು ಸಿದ್ಧವಾಗುವುದಿಲ್ಲ. ಅವುಗಳಿಗೆ ಸ್ವತಂತ್ರವಾದ ಅಸ್ಥಿತ್ವವಿರುವುದಿಲ್ಲ. ಆದುದರಿಂದ ಅವುಗಳಿಗೆ 'ನಾನಿದ್ದೇನೆ' ಎಂದು ತಿಳಿಯುವುದಿಲ್ಲ.

**ಓ.ಸಂ.82:** ನಿದ್ರೆಯಿಂದ ಎದ್ದಮೇಲೆ ಆ ಅವಸ್ಥೆಯಲ್ಲಿ 'ನಾನು' ಅಂದರೆ ಪ್ರಾಜ್ಞನು ತಾನು 'ಅಜ್ಞಾನ ರೂಪದಲ್ಲಿದ್ದೆ' ಎಂದು ತಿಳಿಯುತ್ತಾನೆ. ಜಡರೂಪದ ಈ ಅಜ್ಞಾನವು ತನ್ನನ್ನು ತಾನು 'ಇದ್ದೇನೆ' ಎಂದು ತಿಳಿಯುವುದಿಲ್ಲ.

**ವಿವರಣೆ:** ನಿದ್ರೆಯಿಂದ ಎದ್ದಮೇಲೆ 'ನಿದ್ರೆಯಲ್ಲಿ ನನಗೆ ಏನೂ ತಿಳಿಯಲಿಲ್ಲ' ಮತ್ತು 'ಅಲ್ಲಿ ನಾನು ಸುಖವಾಗಿ ನಿದ್ರಿಸಿದ್ದೆ' ಎಂದು ಹೇಳುವೆವು. ನಿದ್ರೆಯಲ್ಲಿ 'ನಾನು' ಅನ್ನುವ ಪ್ರಯೋಗವು ಪ್ರಾಜ್ಞನಿಗೆ ಅನ್ವಯಿಸುವಂತಹದು. ಏಕೆಂದರೆ ಆ ಅವಸ್ಥೆಯಲ್ಲಿ 'ವಿಶ್ವ'ನಾಗಲೀ, 'ತೈಜಸ'ನಾಗಲೀ ಇರುವಂತಿಲ್ಲ. ಆದರೂ ಚೈತನ್ಯ ಸ್ವರೂಪದ 'ನಾನು' ಎನ್ನುವ ಪದ ಪ್ರಯೋಗವು ಮೂರೂ ಅವಸ್ಥೆಗಳಲ್ಲಿ ಸಾಮಾನ್ಯವಾಗಿದ್ದು ಅದು ವಿಶ್ವ, ತೈಜಸ, ಪ್ರಾಜ್ಞರದು ಆಗಿರಲು ಸಾಧ್ಯವಿಲ್ಲ. ಏಕೆಂದರೆ ಅವರು ಆಯಾ ತಮ್ಮ ಅವಸ್ಥೆಗಳಲ್ಲಿ ಮಾತ್ರ ತೋರುತ್ತಿರುತ್ತಾರೆ. ಆದ್ದರಿಂದ ಅದು ಚೈತನ್ಯ ಸ್ವರೂಪದ ಸಾಕ್ಷಿಯಾಗಿರಲೇಬೇಕು. 'ನಿದ್ರೆಯಲ್ಲಿ ನನಗೆ ಏನೂ ತಿಳಿಯಲಿಲ್ಲ' ಎಂದು ಎದ್ದಮೇಲೆ ಹೇಳಿರುವುದರಿಂದ ಅದರ ಅರ್ಥವು 'ಆ ಅವಸ್ಥೆಯಲ್ಲಿ ನಾನು ಅಜ್ಞಾನ ಸ್ವರೂಪವೇ ಆಗಿದ್ದೆ' ಎಂದು ಅರ್ಥವಾಗುತ್ತದೆ. ಹೀಗೆ ನಾನು ಅಜ್ಞಾನ ಸ್ವರೂಪನೇ ಆಗಿದ್ದರೂ ಜ್ಞಾನಕ್ಕೆ ವಿರುದ್ಧವಾದ ಅಜ್ಞಾನವು ಜಡ ಸ್ವರೂಪವಾಗಿರುವುದರಿಂದ ಈ ಪ್ರಾಜ್ಞನು ತನ್ನನ್ನು ತಾನು 'ಇದ್ದೇನೆ' ಎಂದು ತಿಳಿಯಲು ಶಕ್ಯನಾಗುವುದಿಲ್ಲ. ಆದ್ದರಿಂದ 'ಸಾಕ್ಷಿ'ಯೇ ಈ ಅಜ್ಞಾನವನ್ನು ತಿಳಿಯುವವನೇ ಹೊರತು ಪ್ರಾಜ್ಞನಲ್ಲವೆಂಬುದನ್ನು ಮುಂದಿನ ಓವೀಗಳಲ್ಲಿ ಸ್ಪಷ್ಟಪಡಿಸಲಾಗುವುದು.

**ಓ.ಸಂ.83:** 'ನಾನು ಅಜ್ಞನಾಗಿದ್ದೇನೆ' ಎಂದು ಅಜ್ಞಾನವನ್ನು ತಿಳಿಯುವವನು ಅಜ್ಞನಾಗಿರುವುದು ಸಾಧ್ಯವಿಲ್ಲ. ಜಾಗ್ರತ–ಸ್ವಪ್ನ ಅವಸ್ಥೆಗಳಲ್ಲಿ ತೋರುವ ಜಡ ವ್ಯಷ್ಟಿ ಪ್ರಪಂಚವು ಪ್ರಾಜ್ಞನಿಂದಲೇ ಬಂದಿರುತ್ತದೆ ಎಂಬುದು ನಿಶ್ಚಯವಾಗಿರುತ್ತದೆ.

**ವಿವರಣೆ :** 'ನಾನು ನಿದ್ರೆಯಲ್ಲಿ ಅಜ್ಞನಾಗಿದ್ದೇನೆ' ಹಾಗೆಯೇ 'ನಾನು ಸ್ವಪ್ನದಲ್ಲಿ ಅಥವಾ ಜಾಗ್ರತದಲ್ಲಿ ನಾನು ದೇಹವಾಗಿದ್ದೇನೆ' ಎನ್ನುವ ವಾಕ್ಯಗಳನ್ನು ಎಚ್ಚರದಲ್ಲಿ ಉಪಯೋಗಿಸುವಾಗ ನಿದ್ರೆಯಲ್ಲಿ ನಾನು ಅಜ್ಞಾನವಾಗಿರುವುದನ್ನು ಹಾಗೂ ಎಚ್ಚರದಲ್ಲಿ ಅಥವಾ ಸ್ವಪ್ನದಲ್ಲಿ ದೇಹವಾಗಿರುವುದನ್ನು ತಿಳಿದಿದ್ದೇನೆ ಎನ್ನುವ ಅರ್ಥದಲ್ಲಿ ವಾಕ್ಯಗಳನ್ನು ಬಳಸುತ್ತೇವೆ. ಆದರೆ ಅಜ್ಞಾನವನ್ನು ತಿಳಿದಿರುವವನು ತಿಳಿಯಲ್ಪಟ್ಟ ಅಜ್ಞಾನವಾಗಲೀ ಹಾಗೆಯೇ ದೇಹವನ್ನು ತಿಳಿದಿರುವವನು ದೇಹವಾಗಲೀ ಆಗಿರಲು ಸಾಧ್ಯವಾಗುವುದಿಲ್ಲ. ಏಕೆಂದರೆ "ಘಟಾತ್ ದ್ರಷ್ಟಾ ಘಟಾತ್ ಭಿನಃ" ಎನ್ನುವಂತೆ ಘಟವನ್ನು ತಿಳಿಯುವವನು ಎಂದೂ ಘಟವಾಗುವುದಿಲ್ಲ. ತಿಳಿಯಲ್ಪಡುವ ಘಟವು ಸದಾ ಜಡವಾಗಿರುವಂತೆ ಅಜ್ಞಾನವಾಗಲೀ ದೇಹವಾಗಲೀ ಸದಾ ಅವು ಜಡವಾಗಿರಲೇಬೇಕು. ಏಕೆಂದರೆ ಅವೂ ಕೂಡ ತಿಳಿಯಲ್ಪಡುತ್ತವೆ. ಹೀಗೆ ದೇಹವಾಗಿರುವ ವಿಶ್ವ–ತೈಜಸರು ಮತ್ತು ಅವುಗಳಿಂದ ತಿಳಿಯಲ್ಪಡುವಂತೆ ತೋರುವ ಸೂಕ್ಷ್ಮ ಹಾಗೂ ಸ್ಥೂಲ ವಿಶ್ವಗಳು ಮತ್ತು ಅಜ್ಞಾನಗಳು ವ್ಯಷ್ಟಿ ಜಡವಾಗಿರುತ್ತವೆ. ಜಡ ಕಾರಣದಿಂದ ಜಡ ಕಾರ್ಯವಾಗುವಂತೆ ಜಡವಾದ ಪ್ರಾಜ್ಞನು ಕಾರಣನಾಗಿರುವುದರಿಂದ ಅವನಿಂದ ಕಾರ್ಯ ರೂಪದಲ್ಲಿ ಸ್ವಪ್ನ ಜಾಗ್ರತಾವಸ್ಥೆಗಳು ಬರುತ್ತವೆ.

**ಓ.ಸಂ.84:** ಆದ್ದರಿಂದ ವ್ಯಷ್ಟಿ ರೂಪದ ಪ್ರಾಜ್ಞ, ಅಜ್ಞಾನ ಹಾಗೂ ನಿದ್ರೆಗಳು ಕ್ರಮವಾಗಿ ಸಮಷ್ಟಿ ರೂಪದ ಅಕ್ಷರ, ಮಾಯೆ, ಹಾಗೂ ಪ್ರಳಯದ ಅಂಶವಾಗಿವೆ. ಆದರೆ ಎರಡರ ಭೋಗವೂ ಒಂದೇ ಆಗಿರುತ್ತದೆ.

**ವಿವರಣೆ :** ಶುದ್ಧ ಆತ್ಮನು ಅಥವಾ ಬ್ರಹ್ಮವು ವ್ಯಷ್ಟಿಯಲ್ಲಿ ಅಜ್ಞಾನದಿಂದ ಆವರಿಸಲ್ಪಟ್ಟಾಗ ಅಂದರೆ ಮುಚ್ಚಲ್ಪಟ್ಟಾಗ ಅದರ ಸ್ವರೂಪವು ಜೀವತ್ವವನ್ನು ಹೊಂದುತ್ತದೆ. ಹಾಗೆಯೇ ಸಮಷ್ಟಿಯಲ್ಲಿ ಅದೇ ಬ್ರಹ್ಮವು ಮಾಯೆಯಿಂದ ಮುಚ್ಚಲ್ಪಟ್ಟಾಗ ಈಶ್ವರನಾಗುತ್ತಾನೆ. ಜೀವನಿಗೆ ಜಾಗ್ರತ–ಸ್ವಪ್ನ–ಸುಷುಪ್ತಿ ಅವಸ್ಥೆಗಳಿರುವಂತೆ ಈಶ್ವರನಿಗೂ ಕ್ರಮವಾಗಿ ಸೃಷ್ಟಿ–ಸ್ಥಿತಿ–ಪ್ರಳಯ ಅವಸ್ಥೆಗಳಿರುತ್ತವೆ. ಜೀವನು ಜಾಗ್ರತಾದಿ ಅವಸ್ಥೆಗಳಲ್ಲಿ ಕ್ರಮವಾಗಿ ವಿಶ್ವ–ತೈಜಸ–ಪ್ರಾಜ್ಞನಾಗಿ ಕರೆಸಿಕೊಳ್ಳುತ್ತಾನೆ. ಹಾಗೆಯೇ ಸೃಷ್ಟ್ಯಾದಿ ಅವಸ್ಥೆಗಳಲ್ಲಿ ಕ್ರಮವಾಗಿ ವೈರಾಜ್–ಸೂತ್ರ–ಅಕ್ಷರನೆಂದು ಕರೆಸಿಕೊಳ್ಳುತ್ತಾನೆ. ಆದ್ದರಿಂದ ಸಮಷ್ಟಿಯಲ್ಲಿ ಈಶ್ವರನ ಶುದ್ಧ ತಮೋಗುಣ ಸ್ವರೂಪನಾದ ಅಕ್ಷರನ ಅಂಶವಾಗಿಯೂ ವ್ಯಷ್ಟಿಯಲ್ಲಿ 'ಜೀವ'ನ ತಮೋಗುಣ ಪ್ರಧಾನವಾದ ಪ್ರಾಜ್ಞನಾಗಿಯೂ ಆಗಿರುತ್ತಾನೆ. ಹಾಗೆಯೇ 'ಜೀವ'ನ ಅಜ್ಞಾನವು ಈಶ್ವರನ ಮಾಯೆಯ ಅಂಶವಾಗಿರುತ್ತದೆ ಮತ್ತು 'ಜೀವ'ನ ಸುಷುಪ್ತಿ ಅವಸ್ಥೆಯು ಈಶ್ವರನ ಪ್ರಳಯಾವಸ್ಥೆಯ ಅಂಶವಾಗಿರುತ್ತದೆ. ಆದರೆ ಈಶ್ವರನ ಪ್ರಳಯಾವಸ್ಥೆಯಲ್ಲಿರುವ 'ಅಕ್ಷರ'ನ ಹಾಗೂ 'ಜೀವ'ನ ಸುಷುಪ್ತಿ ಅವಸ್ಥೆಯಲ್ಲಿರುವ ಭೋಗಗಳು ಮಾತ್ರ ಒಂದೇ ಆಗಿರುತ್ತವೆ. ಈ ಭೋಗವು ಸುಖ–ದುಃಖರಹಿತವಾಗಿದ್ದು ಆನಂದ ಸ್ವರೂಪವಾಗಿರುತ್ತದೆ.

**ಓ.ಸಂ.85 :** ಇದೆಲ್ಲವೂ ಸೇರಿಕೊಂಡು 'ಮ'ಕಾರವೆಂಬ ಮಾತ್ರೆಯಾಗಿದೆ. ಆದರೆ ಇದು ಜ್ಞಾನಿಗಳಿಗೆ ಇರುವುದಿಲ್ಲ. ಆತ್ಮಾ ಅಥವಾ ಬ್ರಹ್ಮದ ಪ್ರತೀಕವಾಗಿರುವ ಓಂಕಾರವು ಈ ಮೂರು ಅಕ್ಷರಗಳನ್ನು ತಿಳಿಸುತ್ತದೆ.

ಪ್ರಾಜ್ಞನು ನಿದ್ರಾವಸ್ಥೆಯಲ್ಲಿ ಅಜ್ಞಾನ ಸ್ವರೂಪನೇ ಆಗಿದ್ದುಕೊಂಡು ಆನಂದವನ್ನು ಭೋಗಿಸುತ್ತಾನೆ. ಇದೆಲ್ಲವನ್ನೂ 'ಮ'ಕಾರವು ಸೂಚಿಸುತ್ತದೆ. 'ಮ'ಕಾರವೆಂದರೆ ಅಜ್ಞಾನ ಸ್ವರೂಪವೇ ಆದ ಪ್ರಾಜ್ಞನನ್ನು ಸೂಚಿಸುವುದರಿಂದ ಈ ಅಜ್ಞಾನ ಸ್ವರೂಪದ ನಿದ್ರಾವಸ್ಥೆಯು ಜ್ಞಾನೀ ಪುರುಷರಿಗೆ ಇರುವುದಿಲ್ಲ. ಏಕೆಂದರೆ ಅವರ ಜ್ಞಾನವು ಅಜ್ಞಾನವನ್ನು ನಾಶಮಾಡಿರುತ್ತದೆ. ಆದುದರಿಂದ ಜ್ಞಾನದ ಸಮಕಾಲದಲ್ಲಿಯೇ ಅಜ್ಞಾನದ ನಾಶವಾಗಿರುತ್ತದೆ. ಇಂತಹ ಜ್ಞಾನಿಗಳು ತುರೀಯಾವಸ್ಥೆಯನ್ನು ಹೊಂದಿರುತ್ತಾರೆ. ಈ ತುರೀಯಾವಸ್ಥೆಗೆ 'ಓಂ'ಕಾರವು ಪ್ರತೀಕವಾಗಿರುತ್ತದೆ. ಈ ಅವಸ್ಥೆಯಲ್ಲಿರುವ ತುರೀಯನು ಸ್ವತಃ ಆತ್ಮ ಅಥವಾ ಬ್ರಹ್ಮ ಸ್ವರೂಪನೇ ಆಗಿದ್ದು ಅವನು 'ಓಂ'ಕಾರದ ಹೆಸರಿನಿಂದ ಕರೆಯಲ್ಪಡುತ್ತಾನೆ. ಇವನು ಜಾಗ್ರತಾದಿ ಮೂರು ಅವಸ್ಥೆಗಳ ಅಥವಾ

'ಅ'ಕಾರ, 'ಉ'ಕಾರ ಮತ್ತು 'ಮ'ಕಾರಗಳ ಉತ್ಪತ್ತಿ–ನಾಶಗಳನ್ನು ಸೇರಿಸಿಕೊಂಡು ಈ ಜಡ ಅವಸ್ಥೆಗಳನ್ನು ಪ್ರತಿಕ್ಷಣ ತಿಳಿಯುವ ಶುದ್ಧಚೈತನ್ಯ ಸ್ವರೂಪದ 'ಸಾಕ್ಷಿ' ಆಗಿರುತ್ತಾನೆ.

**ಓ.ಸಂ.86 :** ಜಾಗ್ರತಾದಿ ಮೂರು ಅವಸ್ಥೆಗಳನ್ನು ಕ್ರಮವಾಗಿ ತಿಳಿಯುವ ವಿಶ್ವ, ತೈಜಸ ಹಾಗೂ ಪ್ರಾಜ್ಞರಲ್ಲಿ ಒಂದೇ ಚೈತನ್ಯವಿರುತ್ತದೆ. ಇವುಗಳಲ್ಲಿ ಒಂದು ಅಹಂಕಾರವು ಪ್ರಕಟವಾದಾಗ ಉಳಿದೆರಡು ಅಹಂಕಾರಗಳು ಪ್ರಕಟವಾಗುವಂತಿಲ್ಲ.

**ವಿವರಣೆ :** ಹಿಂದಿನ ಓವೀಯಲ್ಲಿ ಆತ್ಮ ಚೈತನ್ಯವು ಜಾಗ್ರತಾದಿ ಮೂರು ಅವಸ್ಥೆಗಳನ್ನು ತಿಳಿಯುತ್ತದೆ ಎಂದು ಹೇಳಲಾಗಿದೆ. ಆದರೆ ವಿಶ್ವಾದಿಗಳು ಕ್ರಮವಾಗಿ ಜಾಗ್ರತಾದಿ ಅವಸ್ಥೆಗಳನ್ನು ತಿಳಿಯುತ್ತಿರುವುದು ನಮ್ಮ ಅನುಭವಕ್ಕೆ ಬರುತ್ತದೆ. ಈ ಓವೀಯು ಈ ಎರಡರ ಸಮನ್ವಯವನ್ನು ಮಾಡುತ್ತದೆ. ಆತ್ಮ ಚೈತನ್ಯವೇ ಮೂರೂ ಅವಸ್ಥೆಗಳನ್ನು ತಿಳಿಯುವುದಾದರೂ ಅದು ವಿಶ್ವಾದಿಗಳ ಮೂಲಕವೇ ತಿಳಿಯುತ್ತದೆ. ಆದುದರಿಂದ ಆತ್ಮವೆಂಬ ಒಂದೇ ಚೈತನ್ಯವು ಕ್ರಮವಾಗಿ ವಿಶ್ವಾದಿಗಳ ಮೂಲಕ ಪ್ರಕಟವಾಗುತ್ತದೆ. ಆತ್ಮಾನಾತ್ಮರ ಅಧ್ಯಾಸದಿಂದ ಚೈತನ್ಯವು ಅವಸ್ಥೆಗಳಲ್ಲಿ ಕಾಣುವ ದೇಹೋಪಾಧಿಗಳೇ ತಾನೆಂದು ತಪ್ಪು ತಿಳಿದಾಗ ವಿಶ್ವಾದಿಗಳಾಗಿ ತೋರುತ್ತದೆ. ವಿಚಾರದಿಂದ ಉಂಟಾಗುವ ಜ್ಞಾನದಿಂದ ಈ ತಪ್ಪು ತಿಳುವಳಿಕೆಯು ಅಥವಾ ಅಜ್ಞಾನವು ನಾಶವಾಗಿ ತಾನು ಆತ್ಮನೇ ಹೊರತು ದೇಹವಲ್ಲವೆಂದು ತಿಳಿದು 'ಜೀವ'ನು ಮುಕ್ತನಾಗುತ್ತಾನೆ. ಅಜ್ಞಾನಾವಸ್ಥೆಯಲ್ಲಿ ಜಾಗ್ರತಾದಿ ಅವಸ್ಥೆಗಳಲ್ಲಿ 'ನಾನು' ಎಂಬ ಅಹಂಕಾರ ರೂಪದಿಂದ ತೋರುವ ವಿಶ್ವಾದಿಗಳಲ್ಲಿ ಇದೇ ಆತ್ಮಚೈತನ್ಯವು ಒಂದೊಂದಾಗಿ ಪ್ರಕಟವಾಗುತ್ತದೆ. ಅಂದರೆ ಒಂದು ಅಹಂಕಾರವು ಒಂದು ಅವಸ್ಥೆಯಲ್ಲಿ ಪ್ರಕಟವಾದಾಗ ಬೇರೆ ಅವಸ್ಥೆಯ ಅಹಂಕಾರವು ಪ್ರಕಟವಾಗುವಂತಿಲ್ಲ.

**ಓ.ಸಂ.87:** ಸಾಕ್ಷೀ ಸ್ವರೂಪದ ಈ ಆತ್ಮ ಚೈತನ್ಯವು ಜಾಗ್ರತಾದಿ ಮೂರೂ ಅವಸ್ಥೆಗಳಲ್ಲಿ ಯಾವ ಬದಲಾವಣೆಯೂ ಇಲ್ಲದೆ ಸಮಾನವಾಗಿರುತ್ತದೆ. ಆದ್ದರಿಂದಲೇ ಮೂರೂ ಅವಸ್ಥೆಗಳ ಸ್ಮರಣೆಯು ಆ ಚೈತನ್ಯಕ್ಕೆ ಸಾಧ್ಯವಾಗುತ್ತದೆ.

**ವಿವರಣೆ :** ವಿಶ್ವಾದಿಗಳು ಕ್ರಮವಾಗಿ ಜಾಗ್ರತಾದಿ ಮೂರು ಅವಸ್ಥೆಗಳಿಗೆ ಸೀಮಿತದಾಗಿರುತ್ತದೆ. ವಿಶ್ವನು, ತೈಜಸನ ಅಥವಾ ಪ್ರಾಜ್ಞನ ಅನುಭವವನ್ನು ಹೊಂದಲು ಶಕ್ಯವಲ್ಲ. ಹಾಗೆಯೇ ತೈಜಸ ಹಾಗೂ ಪ್ರಾಜ್ಞರು ಒಬ್ಬೊಬ್ಬರಾಗಿ ಉಳಿದವರ ಅನುಭವವನ್ನು ಪಡೆಯುವಂತಿಲ್ಲ. ಹಾಗಾದರೆ ಮೂರು ಅವಸ್ಥೆಗಳ ಸ್ಮರಣವು ನನಗಾಗುತ್ತಿರುವುದರಿಂದ ಈ 'ನಾನು' ಎನ್ನುವುದು ವಿಶ್ವಾದಿಗಳಿಗೆ ಅನ್ವಯಿಸಲು ಬರುವುದಿಲ್ಲ. ಆದ್ದರಿಂದ

ಮೂರೂ ಅವಸ್ಥೆಗಳನ್ನು ಸ್ಮರಣೆ ಮಾಡಿಕೊಳ್ಳಲು ಸಾಮರ್ಥ್ಯವಿರುವವನು ಮೂರೂ ಅವಸ್ಥೆಗಳಲ್ಲೂ ಸಾಮಾನ್ಯವಾಗಿರುವ ಏಕೈಕನಾದ ಆತ್ಮಚೈತನ್ಯವೇ ಆಗಿರಬೇಕಾಗುವುದು. ಆದರೆ ಇವನು ವಿಶ್ವಾದಿಗಳಲ್ಲಿ ತೋರುವಾಗ ಭಿನ್ನ-ಭಿನ್ನವಾಗಿ ಕಂಡರೂ ಕೂಡ ಅವನು ಯಾವ ಬದಲಾವಣೆ ಇಲ್ಲದೇ ಒಂದೇ ಸಮನಾಗಿರಬೇಕಾಗುತ್ತದೆ. ಏಕೆಂದರೆ ಅವನು ವಿಶ್ವಾದಿಗಳ ಮೂಲಕ ವಿವಿಧ ಅನುಭವಗಳನ್ನು ಪಡೆದರೂ ಆ ಭಿನ್ನ ಅನುಭವಗಳನ್ನು ನಂತರ ಸ್ಮೃತಿಗೆ ತಂದುಕೊಳ್ಳಲು ಸಾಧ್ಯವಾಗಬೇಕಾದರೆ ಅವನು ಯಾವ ಬದಲಾವಣೆಯಿಲ್ಲದೇ ಇರಬೇಕಾಗುತ್ತದೆ.

**ಓ.ಸಂ.88:** ಇರುವುದೆಲ್ಲ ಆತ್ಮಚೈತನ್ಯವಾಗಿದ್ದು ಅದು 'ಒಂದೇ' ಎಂದು ತಿಳಿಯಬೇಕು. ಅವನ ಸರ್ವ ತೋರಿಕೆಗಳೂ ಉತ್ಪತ್ತಿ-ನಾಶಗಳನ್ನು ಹೊಂದುವುದನ್ನು ನೋಡುವ ನಿತ್ಯ ಸಾಕ್ಷಿ ಆಗಿರುತ್ತಾನೆ. ಈ ಸಾಕ್ಷಿಯು ಜಾಗ್ರತ-ಸ್ವಪ್ನ-ಸುಷುಪ್ತಿಗಳನ್ನು ತಾದಾತ್ಮ್ಯಭಾವದಿಂದ ಸಂಪೂರ್ಣವಾಗಿ ವ್ಯಾಪಿಸಿ ಅವುಗಳನ್ನು ಅವನೇ ತಿಳಿಯುತ್ತಾನೆ.

**ವಿವರಣೆ :** ದೇಹ ಸಹಿತವಾದ ಇಡೀ ಜಗತ್ತು ಸ್ಥೂಲರೂಪದಲ್ಲಿ ಶಬ್ದ-ಸ್ಪರ್ಶಾದಿಗಳಾಗಿ ತೋರುವಾಗಲೂ ಮತ್ತು ಸೂಕ್ಷ್ಮರೂಪದಲ್ಲಿ ಕಾಮ-ಕ್ರೋಧಾದಿ ಮನೋವೃತ್ತಿಗಳಾಗಿ ತೋರುವಾಗಲೂ ಅರಿವಿನ ರೂಪದಲ್ಲೇ ತೋರುತ್ತದೆ. ಅಂದರೆ ಆತ್ಮಚೈತನ್ಯವು ಇಡೀ ಅವಸ್ಥೆಯನ್ನೆಲ್ಲ ತಾದಾತ್ಮ್ಯಭಾವದಿಂದ ವ್ಯಾಪಿಸಿರುತ್ತದೆ. ಅಂದರೆ ಜಾಗ್ರತ-ಸ್ವಪ್ನಗಳಲ್ಲಿ ತಿಳಿಯುವವನಾಗಿ ಹಾಗೂ ತಿಳಿಯಲ್ಪಟ್ಟದ್ದಾಗಿ ( ಎರಡಾಗಿ ತೋರಿದರೂ ) ಈ ಎರಡೂ ದೃಶ್ಯ ರೂಪದಿಂದ ಆತ್ಮನಿಗೆ ತಿಳಿಯಲ್ಪಡುವುವು. ಅಂದರೆ ಆತ್ಮನು ಅವುಗಳನ್ನು ತಿಳಿಯುವವನು ಆಗಿರುತ್ತಾನೆ. ಈ ದೃಶ್ಯರೂಪದ ಜಡವು ಅಥವಾ ಅನಾತ್ಮವು ಉತ್ಪತ್ತಿ-ನಾಶಗಳನ್ನು ಹೊಂದುವ ಕೇವಲ ತೋರಿಕೆಯದ್ದಾಗಿರುವ ಮಿಥ್ಯಾ ಸ್ವರೂಪದ್ದಾಗಿರುತ್ತದೆ. ಆದ್ದರಿಂದ ಈ ಜಡ ಉಪಾಧಿ (ಜೀವ ಮತ್ತು ಜಗತ್ತನ್ನು) ಯನ್ನು ವ್ಯಾಪಿಸಿದಂತೆ ಕಾಣುವ ಆದರೆ ಈ ಜಡಕ್ಕೆ ಅತೀತವಾಗಿರುವ ಚೈತನ್ಯ ಸ್ವರೂಪದ ಆತ್ಮವು ತೋರುವ ನಾಮ-ರೂಪಾತ್ಮಕ ಜಗತ್ತಿಗೆ ಅಸ್ತಿ-ಭಾತಿ-ಪ್ರಿಯ ಸ್ವರೂಪದಲ್ಲಿ ಅಧಿಷ್ಠಾನವಾಗಿದ್ದುಕೊಂಡು ಏಕೈಕ ಸತ್ಯವಾಗಿರುತ್ತದೆ.

**ಓ.ಸಂ.89:** ಸ್ಫಟಿಕವು ಒಂದು ಬಣ್ಣದ ವಸ್ತುವಿನ ಹಿನ್ನಲೆಯಲ್ಲಿ ಇದ್ದಾಗ ಆ ವಸ್ತುವಿನ ಬಣ್ಣವೇ ಸ್ಫಟಿಕಕ್ಕೂ ಇದ್ದಂತೆ ಕಾಣುವುದು. ಆದರೆ ನಿಜವಾಗಿ ಆ ಸ್ಫಟಿಕಕ್ಕೆ ಯಾವ ಬಣ್ಣದ ಸಂಪರ್ಕವೂ ಇಲ್ಲದೇ ಶುಭ್ರವಾಗಿಯೇ ಇರುತ್ತದೆ.

**ವಿವರಣೆ :** ಆತ್ಮಚೈತನ್ಯವು ಇರುವುದೆಲ್ಲವನ್ನೂ ವ್ಯಾಪಿಸಿ ಅಧಿಷ್ಠಾನವಾಗಿದ್ದುಕೊಂಡು ಅವುಗಳಿಗೆಲ್ಲ ಅತೀತವಾಗಿದ್ದು ಅವುಗಳ ಜೊತೆಗೆ ಮಾತ್ರ ಯಾವ ಸಂಪರ್ಕವೂ ಇರುವುದಿಲ್ಲವೆಂದು ತಿಳಿಸಲು ಈ ಓವೀಯಲ್ಲಿ ಸುಂದರವಾದ ದೃಷ್ಟಾಂತವನ್ನು ಕೊಡಲಾಗಿದೆ. ಒಂದು ಶುಭ್ರವಾದ ಸ್ಫಟಿಕವು ಒಂದು ಕೆಂಪು ಬಟ್ಟೆಯ ಮೇಲಿದ್ದಾಗ ಆ ಸ್ಫಟಿಕವೂ ಆ ಬಟ್ಟೆಯ ಬಣ್ಣವಾದ ಕೆಂಪು ಬಣ್ಣದ್ದಾಗಿಯೇ ಕಾಣುತ್ತದೆ. ಆದರೆ ವಾಸ್ತವವಾಗಿ ಈ ಸ್ಫಟಿಕದ ಬಣ್ಣವು ಕೆಂಪಾಗಿ ಬದಲಾವಣೆಯಾಗಿರುವುದಿಲ್ಲ. ಇದನ್ನು ತಿಳಿಯಲು ಆ ಕೆಂಪಾದ ಬಟ್ಟೆಯನ್ನು ಅಲ್ಲಿಂದ ತೆಗೆದಾಗ ಪುನಃ ಸ್ಫಟಿಕವು ಶುಭ್ರವಾಗಿಯೇ ಇರುವುದು ನಮಗೆ ತಿಳಿದು ಬರುತ್ತದೆ..

**ಓ.ಸಂ.90:** ಅದೇ ರೀತಿ ಆತ್ಮಚೈತನ್ಯವು ಜಾಗ್ರತಾದಿ ಉಪಾಧಿಗಳಲ್ಲಿ ತಾನೇ ಉಪಾಧಿಯಾಗಿದೆ ಎಂದು ತೋರುತ್ತದೆ. ಆದರೆ ಅದು ಯಾವುದೇ ಉಪಾಧಿಗಳ ಸಂಬಂಧವಿಲ್ಲದೇ ಯಾವುದೇ ಬದಲಾವಣೆ ಇಲ್ಲದೇ ತಾನೇ ತಾನಾಗಿರುತ್ತದೆ.

**ವಿವರಣೆ :** ಹಿಂದಿನ ಓವೀಯಲ್ಲಿ ಸ್ಫಟಿಕ ದೃಷ್ಟಾಂತವನ್ನು ಕೊಟ್ಟು ಅದರ ಅನ್ವಯವನ್ನು ಈ ಓವೀಯಲ್ಲಿ ಕೊಡಲಾಗಿದೆ. ಸ್ಫಟಿಕವು ಹೇಗೆ ಅದರ ಹಿನ್ನಲೆಯಲ್ಲಿರುವ ಬಣ್ಣವನ್ನು ಮೆತ್ತಿಕೊಂಡಿರುವಂತೆ ಭಾಸವಾಗುವುದೋ ಹಾಗೆಯೇ ಆತ್ಮನು ಯಾವುದೇ ಜಡ ಉಪಾಧಿಯಾಗಿದ್ದಾಗ ಅದರ ಜೊತೆಗೆ ತಾದಾತ್ಮ್ಯವನ್ನು ಹೊಂದಿ ಆ ಜಡಉಪಾಧಿಯೇ ತಾನೆಂದು ಭಾಸವಾಗಲು ಕಾರಣನಾಗುತ್ತಾನೆ. ಉದಾಹರಣೆಗೆ ಮನುಷ್ಯನಂತೆ ಎಲ್ಲ ಪ್ರಾಣಿಗಳಲ್ಲೂ 'ನಾನು' ಎಂಬ ಆತ್ಮವು 'ದೇಹವೇ' ಆಗಿದೆ ಎಂಬ ಅರಿವು ಇರುತ್ತದೆ. ಆದರೆ ಸರಿಯಾದ ವಿಚಾರ ಮಾಡಿದಾಗ, 'ನಾನು' ಎಂಬುದು ತಿಳಿಯಲ್ಪಡುವ ಜಡ ದೇಹವಲ್ಲವೆಂದೂ ಚೈತನ್ಯ ಸ್ವರೂಪನಿದ್ದು ಆ ದೇಹವನ್ನು ತಿಳಿಯುವವನು ಎಂದೂ ತಿಳಿಯುತ್ತದೆ. ಹೀಗೆ ಸಕಲ ಜಡವನ್ನು ತಿಳಿಯುವ, ಅಸ್ತಿ-ಭಾತಿ-ಪ್ರಿಯ ಸ್ವರೂಪದಿಂದ ಸಕಲ ಜಡಕ್ಕೂ ಅಧಿಷ್ಠಾನನಾಗಿರುವ ಹಾಗೂ ತಾನೇ ಸಕಲವೂ ಆಗಿ ತೋರುವುದೇ ಏಕೈಕ ಚೈತನ್ಯವಾಗಿರುತ್ತದೆ. ಆದರೆ ಸಾಕ್ಷೀ ಸ್ವರೂಪದ ಈ ಚೈತನ್ಯವು ಜಡಕ್ಕೆ ಅತೀತವಾಗಿದ್ದು ಯಾವ ಬದಲಾವಣೆಯಿಲ್ಲದೇ ತಾನೇತಾನಾಗಿ ನಿತ್ಯಸತ್ಯವಾಗಿರುವುದು.

**ಓ.ಸಂ.91 :** ಒಂದು ವೇಳೆ ಆತ್ಮಚೈತನ್ಯವು 'ವಿಶ್ವ'ನ ಸ್ವರೂಪವನ್ನು ಹೊಂದಿರುವಂತಿದ್ದರೆ ಆಗ ಜಾಗ್ರತಾವಸ್ಥೆಯು ಮುಗಿದು ಸ್ವಪ್ನಾವಸ್ಥೆಗೆ ಬಂದಾಗ ವಿಶ್ವನೊಡನೆಯೇ ನಾಶವಾಗಬೇಕಿತ್ತು. ಆದರೆ ಹಾಗಾಗದೇ ಆ ಚೈತನ್ಯವು ತೈಜಸನ ಸ್ವರೂಪವನ್ನು ಸ್ವಪ್ನದಲ್ಲಿ ಹೊಂದಿದಂತೆ ಕಾಣುತ್ತದೆ.

**ವಿವರಣೆ :** ಆತ್ಮಚೈತನ್ಯವು ಮೂರೂ ಅವಸ್ಥೆಗಳಲ್ಲಿ ಯಾವ ಬದಲಾವಣೆಯನ್ನೂ ಹೊಂದದೇ ತನ್ನ ಸ್ವರೂಪದಲ್ಲೇ ಇರುವುದೆಂದು ಈ ಓವೀಯಿಂದ ತೋರಿಸಲಾಗುವುದು. ಈ ಆತ್ಮಚೈತನ್ಯವು ಜಾಗ್ರತಾವಸ್ಥೆಯಲ್ಲಿ 'ವಿಶ್ವ'ನಂತೆ ತೋರಿದರೂ ಕೂಡ ಅವನು ವಿಶ್ವನಾಗಿ ಬದಲಾವಣೆಯಾಗಿಲ್ಲವೆಂದೇ ಹೇಳಬೇಕು. ಒಂದುವೇಳೆ ಹಾಗೆ ಬದಲಾವಣೆ ಆಗಿದ್ದಿದ್ದರೆ ಆತ್ಮಚೈತನ್ಯವು, ಜಾಗ್ರತಾವಸ್ಥೆಯು ಮುಗಿದ ಕೂಡಲೇ ವಿಶ್ವನ ಜೊತೆಗೆ ತಾನೂ ನಾಶವಾಗುತ್ತಿತ್ತು ಮತ್ತು ಸ್ವಪ್ನಾವಸ್ಥೆಯಲ್ಲಿ ತಾನು ತೈಜಸನ ಜೊತೆಗೆ ತಾದಾತ್ಮ್ಯನನ್ನು ಹೊಂದುತ್ತಿರಲಿಲ್ಲ.

**ಓ.ಸಂ.92:** ಅದೇರೀತಿ ಒಂದು ವೇಳೆ ಆತ್ಮಚೈತನ್ಯವು ತೈಜಸನಾಗಿ ಬದಲಾಗಿದ್ದಿದ್ದರೆ, ಅದು ಸ್ವಪ್ನ ಮುಗಿದ ಕೂಡಲೇ ತೈಜಸನೊಡನೆ ನಾಶವಾಗಬೇಕಿತ್ತು. ಆದರೆ ಹಾಗಾಗದೇ ಅದು ಸುಷುಪ್ತಿಯಲ್ಲಿ 'ಪ್ರಾಜ್ಞ'ನಾಗಿ ತೋರುತ್ತದೆ.

**ವಿವರಣೆ :** ಈ ಓವೀಯು ಹಿಂದಿನ ಓವೀಯಂತೆಯೇ ವಾದವನ್ನು ಮಂಡಿಸುತ್ತದೆ. ಸ್ವಪ್ನದಲ್ಲಿ ಚೈತನ್ಯವು ತೈಜಸನ ಸ್ವರೂಪವನ್ನು ಹೊಂದಿದಂತೆ ತೋರಿದರೂ ವಾಸ್ತವಿಕವಾಗಿ ಚೈತನ್ಯದಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ಒಂದು ವೇಳೆ ಹಾಗೆ ಚೈತನ್ಯವೇ ತೈಜಸನ ಸ್ವರೂಪವನ್ನು ಹೊಂದಿದ್ದು ಸತ್ಯವಾಗಿದ್ದಲ್ಲಿ ಸ್ವಪ್ನವು ಮುಗಿದಾಗ ತೈಜಸನ ಜೊತೆಗೆ ಈ ಚೈತನ್ಯವೂ ನಾಶಹೊಂದಬೇಕಾಗಿತ್ತು. ಆದರೆ ಹಾಗಾಗದೇ ಅದೇ ಚೈತನ್ಯವು 'ಪ್ರಾಜ್ಞ'ನ ಸ್ವರೂಪದಿಂದ ಸುಷುಪ್ತಿಯಲ್ಲಿರುವುದು ಕಂಡು ಬರುತ್ತದೆ. ಆದ್ದರಿಂದ ಆತ್ಮಚೈತನ್ಯವು ಯಾವ ಬದಲಾವಣೆಯಿಲ್ಲದೇ ವಿಶ್ವ–ತೈಜಸರಿಗೆ ಅಧಿಷ್ಠಾನನಾಗಿದ್ದುಕೊಂಡು ಈಗ ಪ್ರಾಜ್ಞನಾಗಿರುವುದು ಕಂಡುಬರುವುದು.

**ಓ.ಸಂ.93:** ಹಾಗೆಯೇ ಆತ್ಮಚೈತನ್ಯವು ಸುಷುಪ್ತಿಯಲ್ಲಿ 'ಪ್ರಾಜ್ಞ'ನ ಸ್ವರೂಪವನ್ನು ಹೊಂದಿದ್ದರೆ ಅದು 'ಪ್ರಾಜ್ಞ'ನ ಜೊತೆಗೆ ನಾಶವಾಗಬೇಕಿತ್ತು ಮತ್ತು ತುರೀಯನಲ್ಲಿ ಅವಸ್ಥಾತ್ರಯಗಳ ಸಾಕ್ಷಿಯಾಗಿ ಪ್ರತ್ಯಗಾತ್ಮ ಸ್ವರೂಪದಿಂದ ನಿತ್ಯ ಇರುತ್ತಿರಲಿಲ್ಲ.

**ವಿವರಣೆ :** ಹಿಂದಿನ ವಾದದ ರೀತಿಯನ್ನೇ ಇಲ್ಲೂ ಮುಂದುವರಿಸಲಾಗಿದೆ. ಆತ್ಮಚೈತನ್ಯವು ಸುಷುಪ್ತಿಯಲ್ಲಿ ಅಜ್ಞಾನವೇ ತಾನಾಗಿ 'ಪ್ರಾಜ್ಞ'ನ ರೂಪವನ್ನು ಧರಿಸಿದಂತೆ ಕಾಣುವುದು. ಏಕೆಂದರೆ ಆ ಅವಸ್ಥೆಯಲ್ಲಿ ಚೈತನ್ಯವು ಸುಪ್ತವಾಗಿರುವುದರಿಂದ ಅರಿವೇ ಇಲ್ಲದೇ ಯಾವ ವೃತ್ತಿಯೂ ಪ್ರಕಟವಾಗುವಂತಿಲ್ಲ. ಆದರೆ ಇದರಿಂದ ಚೈತನ್ಯವು ಪೂರ್ತಿ ನಾಶವಾಯಿತೆಂದು ತಿಳಿಯಬಾರದು. ಸುಷುಪ್ತಿಯಲ್ಲಿ ಎಲ್ಲ ಆಂತರಿಕ ವೃತ್ತಿಗಳು ಅಜ್ಞಾನದಲ್ಲಿ ಲಯ ಹೊಂದುವುದರಿಂದ ವೃತ್ತಿಅರಿವೇ ಸತ್ಯವೆಂದು ತಿಳಿದ ನಮಗೆ ವೃತ್ತಿರಹಿತಾವಸ್ಥೆಯು ಅಪ್ರಜ್ಞಾವಸ್ಥೆಯಾಗಿ (ಅಚೇತನವಾಗಿರುವುದು) ಇರುವುದೆಂದು ತೋರುವುದು. ಒಂದುವೇಳೆ ಸುಷುಪ್ತಿಯಲ್ಲಿ ಚೈತನ್ಯವು ನಿಜವಾಗಿ ನಾಶವಾಗಿದ್ದರೆ ನಮಗೆ ಎಚ್ಚರವಾದಮೇಲೆ 'ನನಗೆ ಸುಖವಾಗಿ ನಿದ್ರೆ ಬಂದಿತು' ಎಂದು ಸುಷುಪ್ತಿಯ ಸ್ಮರಣೆಯನ್ನು ಮತ್ತು ಮೂರೂ ಅವಸ್ಥೆಗಳ ಅನುಭವವು ನನಗೇ ಆಗುತ್ತದಾದ್ದರಿಂದ ನಾನು ಅವಸ್ಥಾತ್ರಯಗಳ

ಸಾಕ್ಷಿಯೆಂದೂ ನನ್ನನ್ನು ಪ್ರತ್ಯಗಾತ್ಮ ಸ್ವರೂಪದಿಂದ ಕಾಣುತ್ತಿರಲಿಲ್ಲ. ಅಂದರೆ ಪ್ರತ್ಯಗಾತ್ಮನು ನಮ್ಮ ನಿತ್ಯಸಾಕ್ಷಿ ಚೇತನ.

**ಓ.ಸಂ.94 :** ಜೀವಭಾವದಿಂದ ಪ್ರಕಟವಾಗುವ 'ವಿಶ್ವಾ'ದಿಗಳ ಚೈತನ್ಯವು ಮತ್ತು ಅದರ ಸಾಕ್ಷಿಯಾದ ಪ್ರತ್ಯಗಾತ್ಮನ ಚೈತನ್ಯಗಳು ಕ್ರಮವಾಗಿ ಅಂಶ–ಅಂಶಿ ಭಾವದಿಂದ ಕೂಡಿವೆ. ಇದೇ ನ್ಯಾಯದಿಂದ ಈಶ್ವರ ಭಾವದಿಂದ ಪ್ರಕಟವಾಗುವ ವಿರಾಜ್, ಸೂತ್ರ ಹಾಗೂ ಅಕ್ಷರಗಳನ್ನು ನಿರಸನ ಮಾಡಿದಾಗ ಶುದ್ಧ ಬ್ರಹ್ಮನೇ ಉಳಿಯುತ್ತಾನೆ.

**ವಿವರಣೆ:** 'ನಾನು', 'ನಾನು' ಎಂಬ ಜೀವಭಾವದಿಂದ ಅವಸ್ಥಾತ್ರಯಗಳಲ್ಲಿ ತೋರುವ ವಿಶ್ವಾದಿಗಳು ಸ್ಥೂಲ–ಸೂಕ್ಷ್ಮ–ಕಾರಣವೆಂಬ ಜಡರೂಪದಲ್ಲಿದ್ದರೂ ಇದರ ಜೊತೆಗೆ ಚೈತನ್ಯದ ಅಂಶವೂ ಸೇರಿಕೊಂಡು ಆಯಾ ಅವಸ್ಥೆಗಳಲ್ಲಿ ವ್ಯವಹರಿಸಲು ಯೋಗ್ಯವಾಗುತ್ತವೆ. ಆದರೆ ಈ ಜೀವ ಚೈತನ್ಯವನ್ನೂ, ಅದು ತಿಳಿಯುವ ಜಗತ್ತನ್ನೂ – ಎರಡನ್ನೂ ಸೇರಿಸಿಕೊಂಡು ಒಟ್ಟಾಗಿ ನೋಡುವ ಪೂರ್ಣದೃಷ್ಟಿಯು ಅವಸ್ಥಾತ್ರಯದ ಸಾಕ್ಷಿಚೈತನ್ಯಕ್ಕೆ ಅಥವಾ ಪ್ರತ್ಯಗಾತ್ಮ ಚೈತನ್ಯಕ್ಕೆ ಇರುತ್ತದೆ. ಈ ಪ್ರತ್ಯಗಾತ್ಮ ಚೈತನ್ಯವು 'ಅಂಶಿ'ಯಾದರೆ ಅದರ ಅಂಶವಾಗಿ ವಿಶ್ವಾದಿ ಜೀವ ಚೈತನ್ಯವು ಇರುತ್ತದೆ. ಈ ಅಂಶ–ಅಂಶಿ ಸಂಬಂಧವನ್ನು ಸಮಷ್ಟಿಯಲ್ಲಿ ಕ್ರಮವಾಗಿ ಸೃಷ್ಟಿ–ಸ್ಥಿತಿ–ಲಯಗಳಿಗೆ ಕಾರಣವಾದ ವಿರಾಜ್–ಸೂತ್ರಾತ್ಮ–ಅಕ್ಷರಗಳೆಂಬ ಈಶ್ವರ ಸಮಷ್ಟಿ ಚೈತನ್ಯಕ್ಕೂ ಮತ್ತು ಇವುಗಳಿಗೆ ಸಮಷ್ಟಿ ಸಾಕ್ಷಿಯಾದ ಶುದ್ಧ ಬ್ರಹ್ಮನಿಗೂ ಇರುವುದಾಗಿ ಹೇಳಬಹುದು. ಸೃಷ್ಟಿ ಕಾಲದಲ್ಲಿ 'ವಿರಾಜ್'ಎಂಬ ಈಶ್ವರ ಚೈತನ್ಯವು ಬದಲಾಗದೇ ಸ್ಥಿತಿಕಾಲದಲ್ಲಿ ಸೂತ್ರಾತ್ಮನಾಗಿ ತೋರುತ್ತದೆ. ಹಾಗೆಯೇ ಸ್ಥಿತಿಕಾಲವು ಬದಲಾಗಿ ಲಯಕಾಲವು ಬಂದರೂ ಆ ಚೈತನ್ಯವು ನಾಶವಾಗದೇ ಅಕ್ಷರನಾಗಿ ತೋರುತ್ತದೆ. ಹಾಗೆಯೇ ಲಯಕಾಲವು ಮುಗಿದರೂ ಆ ಚೈತನ್ಯವು ನಾಶವಾಗದೇ ಸೃಷ್ಟಿ–ಸ್ಥಿತಿ–ಲಯಗಳ ಸಮಷ್ಟಿ ಸಾಕ್ಷಿಯಾದ ಪರಿಪೂರ್ಣವಾದ ಪರಬ್ರಹ್ಮ ಚೈತನ್ಯದಲ್ಲಿ ಒಂದಾಗುತ್ತದೆ. ಹೀಗೆ ಸಮಷ್ಟಿಯಲ್ಲಿ ಕೂಡ ಪರಿಪೂರ್ಣ ಶುದ್ಧ ಪರಬ್ರಹ್ಮ ಚೈತನ್ಯವನ್ನು ಅಂಶವೆಂದು ತೆಗೆದುಕೊಂಡರೆ ಸೃಷ್ಟಿ–ಸ್ಥಿತಿ–ಲಯಗಳಿಗೆ ಕಾರಣವಾದ ಈಶ್ವರ ಚೈತನ್ಯವನ್ನು ಅದರ ಅಂಶಿಯೆಂದು ಪರಿಗಣಿಸಬಹುದು. "ಪುರುಷಸೂಕ್ತ"ದಲ್ಲೂ ಪರಬ್ರಹ್ಮನು ಭೂಮಿ–ಆಕಾಶ ಮುಂತಾದ ಸಕಲವನ್ನೂ ವ್ಯಾಪಿಸಿ (ಅಂಶ) ತಾನು ಅತೀತನಾಗಿ ಹೆಚ್ಚಿನ ಭಾಗವಾಗಿ ತಾನೇತಾನಾಗಿದ್ದಾನೆ (ಸ ಭೂಮಿಂ ವಿಶ್ವತೋವೃತ್ವಾ ಅತ್ಯತಿಷ್ಠದ್ದಶಾಂಗುಲಮ್...). ಅಂಶ–ಅಂಶಿ ಭೇದವು ಕೇವಲ ಜಡ ಉಪಾಧಿಗೆ ಸಂಬಂಧಿಸಿದ್ದು ಅದು ಚೈತನ್ಯದಲ್ಲಿರುವಂತಿಲ್ಲ.

ಓ.ಸಂ.95 : ಅವಸ್ಥೆಗಳ ಬದಲಾವಣೆಯಾದರೆ ಅವುಗಳ ಸಾಕ್ಷಿಯು ನಿತ್ಯಸತ್ಯನಾದ ಚೈತನ್ಯನೆಂದು ಸಿದ್ಧವಾಯಿತು. ಆದರೆ ಅವನಿಗಿದ್ದ ಅವಸ್ಥೆಗಳೊಳಗಿನ ತಾದಾತ್ಮ್ಯವು ಇಲ್ಲವಾಯಿತು. ಇದರ ಪರಿಣಾಮವಾಗಿ ಅವಸ್ಥೆಗಳ ಸತ್ಯತ್ವವು ನಾಶವಾಯಿತು.

ವಿವರಣೆ : ಅವಸ್ಥೆಗಳಲ್ಲಿ ಕಾಣುವ ವಿಶ್ವಾದಿಗಳು ನಾಶವಾದರೂ ಅವುಗಳ ಚೈತನ್ಯವು ಯಾವುದೇ ರೀತಿಯ ಬದಲಾವಣೆ ಹೊಂದದೇ ಕೊನೆಗೆ ಸಾಕ್ಷಿ ಚೈತನ್ಯವೇ ಎಂಬುದು ತಿಳಿಯಿತು. ಅಂದರೆ ಆಂಶಿಕ (ಅಂಶದ) ರೂಪದಲ್ಲಿ ತೋರಿದ ಚೈತನ್ಯವು ಜಡ ಉಪಾಧಿಯನ್ನು ಬಿಟ್ಟ ಕೂಡಲೇ ತನ್ನ ನಿಜ ಸ್ವರೂಪದಿಂದ ಪೂರ್ಣತ್ವವನ್ನು (ಅಂಶಿ) ಪಡೆಯಿತು. ಇದು ವಿಚಾರದಿಂದ ಉಂಟಾಗುವ ಜ್ಞಾನದಿಂದಲೇ ಸಿದ್ಧವಾಗುತ್ತದೆ. ಈ ಜ್ಞಾನವಿಲ್ಲದಾಗ ಭ್ರಾಂತಿಯಿಂದ ಅಂದರೆ ಆತ್ಮಾ ಮತ್ತು ಅನಾತ್ಮರ (ಜಡ–ಉಪಾಧಿಗಳ) ಅನ್ಯೋನ್ಯ ಅಧ್ಯಾಸದಿಂದ ಜಡವು ಚೈತನ್ಯ ಸ್ವರೂಪವೆಂದೇ ತಪ್ಪು ತಿಳಿಯಲಾಗುತ್ತದೆ. ಈ ಅಜ್ಞಾನವಿದ್ದಾಗಲೇ ಚೈತನ್ಯವು ಕಾಣುವ ಜಡದ ಅಧಿಷ್ಠಾನವಾಗಿರುತ್ತದೆ ಮತ್ತು ಇದರ ಪರಿಣಾಮವಾಗಿ ಸಕಲ ಜಡದಲ್ಲಿ ಚೈತನ್ಯದ ಅಂಶವಾದ ಅಸ್ತಿ–ಭಾತಿ–ಪ್ರಿಯ ಸ್ವರೂಪವು ಬದಲಾಗದಂತೆ ಇರಲು ಕಾರಣವಾಗುತ್ತದೆ. ಆದರೆ ಜ್ಞಾನದಿಂದ ಚೈತನ್ಯವು ಜಡದಿಂದ ಭಿನ್ನವೆಂದು ತಿಳಿದ ಕೂಡಲೇ ಜಡವು ಅಸ್ತಿ–ಭಾತಿ–ಪ್ರಿಯ ಸ್ವರೂಪವನ್ನು ಕಳೆದುಕೊಂಡು ಅದು ಸತ್ಯತ್ವವನ್ನು ಕಳೆದುಕೊಳ್ಳುತ್ತದೆ. ಅಂದರೆ ಜೀವಸಹಿತ ಅವಸ್ಥಾತ್ರಯಗಳು ನಿಜವಾಗಿ ಇರುವುದಿಲ್ಲ.

ಓ.ಸಂ.96 : ಪ್ರಕಾಶ್ಯವಾದ ಅಂದರೆ ತಿಳಿಯಲ್ಪಟ್ಟ ಅವಸ್ಥೆಗಳು ನಿಜವಾಗಿ ಅಸ್ತಿತ್ವದಲ್ಲಿಯೇ ಇಲ್ಲವೆಂದಮೇಲೆ ಪ್ರಕಾಶಕ ಅಂದರೆ ತಿಳಿಯುವವನಾದ ಸಾಕ್ಷಿಯೂ ಕೂಡ ಇರುವುದಿಲ್ಲವೆಂದು ಸಿದ್ಧವಾಗುತ್ತದೆ. ನಂತರ ಉಳಿಯುವುದೇ ಜ್ಞಾನಾಜ್ಞಾನರಹಿತವಾದ ಅದ್ವಯ ಪೂರ್ಣಬ್ರಹ್ಮನ ಸ್ಥಿತಿಯು.

ವಿವರಣೆ : ಇಡೀ ಜಗತ್ತನ್ನು ತಿಳಿಯುವವನು (ಪ್ರಕಾಶಕ) ಹಾಗೂ ತಿಳಿಯಲ್ಪಟ್ಟದ್ದು (ಪ್ರಕಾಶ್ಯ) ಎಂದು ಸಾಪೇಕ್ಷವಾಗಿ ಎರಡು ಭಾಗಗಳಾಗಿರುತ್ತವೆ. ಇಲ್ಲಿ ಅರಿವು ಅಥವಾ ಪ್ರಜ್ಞೆಯನ್ನು ಪ್ರಕಾಶಕ್ಕೆ ಹೋಲಿಸಿ ಬೆಳಕಿನ ಮೂಲ ಅಥವಾ ಅರಿವನ್ನು ಹೊಂದಿ ತಿಳಿಯುವವನನ್ನು 'ಪ್ರಕಾಶಕ'ನಿಗೂ, ಆ ಬೆಳಕಿನಿಂದ ಅಥವಾ ಅರಿವಿನಿಂದ ತಿಳಿಯಲ್ಪಟ್ಟ ಜಡಕ್ಕೆ 'ಪ್ರಕಾಶ್ಯ' ಎಂದು ಹೇಳಲಾಗಿದೆ. ಇವೆರಡೂ ಸಾಪೇಕ್ಷ್ಯವಾಗಿವೆ. ಅಂದರೆ ಒಂದರ ಅಸ್ತಿತ್ವದಿಂದ ಇನ್ನೊಂದರ ಅಸ್ತಿತ್ವವು ಸಿದ್ಧವಾಗುತ್ತದೆ. ತಿಳಿಯಲ್ಪಟ್ಟ ಜಡ ಅವಸ್ಥೆಗಳ ಅಸ್ತಿ–ಭಾತಿ–ಪ್ರಿಯ ಸ್ವರೂಪಗಳು ಸಾಕ್ಷಿಯ ಸ್ವರೂಪವಾಗಿದ್ದು ಅವುಗಳನ್ನು ಭ್ರಾಂತಿಯಿಂದ ಕ್ಷಣಿಕವಾಗಿ ತೋರುವ ಅವಸ್ಥೆಗಳ ಮೇಲೆ ಆರೋಪ ಮಾಡಿದ್ದಕ್ಕೆ (ಅಧ್ಯಾಸ) ಅವಸ್ಥೆಗಳು ಇದ್ದಂತೆ ತೋರುತ್ತವೆ. ಲೌಕಿಕ ಪ್ರಮಾಣ ಜ್ಞಾನದಿಂದ ಅವಸ್ಥೆಗಳು ಇವೆಯೆಂದು ತಿಳಿದ ಮೇಲೆ, ಅವುಗಳ ಇರುವಿಕೆಯ ಹಿನ್ನಲೆಯಲ್ಲಿ (ಜ್ಞಾನದ) ಅವುಗಳ

ಇಲ್ಲದಿರುವಿಕೆಯನ್ನು ಅನುಪಲಬ್ಧಿ ಎಂಬ ಪ್ರಮಾಣದಿಂದ ತಿಳಿಯುತ್ತೇವೆ. ಅಂದರೆ ಸ್ವಪ್ನ-ಸುಷುಪ್ತಿಗಳಲ್ಲಿ ಜಾಗ್ರತ ಪ್ರಪಂಚವು ಇಲ್ಲದಿದ್ದರೂ ಸತ್ಯವಾಗಿದೆ ಎಂಬ ನಂಬಿಕೆಯೇ ಅಜ್ಞಾನವಾಗಿರುತ್ತದೆ. ಅಲೌಕಿಕವಾದ ಶಬ್ದ ಪ್ರಮಾಣದಿಂದ ಅಂದರೆ ಉಪನಿಷತ್ತುಗಳ ವಾಕ್ಯ ಪ್ರಮಾಣದಿಂದ 'ಬ್ರಹ್ಮವೊಂದೇ ಸತ್ಯ'ವೆಂಬ ಜ್ಞಾನವು ನಮಗಾಗಿರುತ್ತದೆ. 'ಜಾಗ್ರತದ ಪ್ರಪಂಚವು ಸತ್ಯವಲ್ಲ' ಎಂಬ ಜ್ಞಾನವು ವಿಚಾರದಿಂದ ಬಂದ ಮೇಲೆ ಈ ಪ್ರಪಂಚದ ಲೌಕಿಕ ಜ್ಞಾನ ಹಾಗೂ ಅಜ್ಞಾನಗಳು ಅರ್ಥವಿಲ್ಲದಂತಾಗಿ ಸಾಪೇಕ್ಷವಾಗಿರುವ ಸಾಕ್ಷಿಯು ತನ್ನ ಸಾಕ್ಷಿತ್ವವನ್ನು ಕಳಚಿಕೊಂಡು ಶುದ್ಧ ನಿರ್ಗುಣ ಪೂರ್ಣ ಬ್ರಹ್ಮನು ಒಬ್ಬನೇ ಉಳಿಯುತ್ತಾನೆ.

**ಓ.ಸಂ.97:** ಹೀಗೆ ಅವಸ್ಥಾತ್ರಯಗಳಲ್ಲಿ ಕಾಣುವುದೆಲ್ಲವೂ ಮತ್ತು ಅವುಗಳನ್ನು ನಿತ್ಯ ನೋಡುವ ಸಾಕ್ಷಿಯನ್ನೂ ಅಸತ್ಯವೆಂದು ಪರಿಗಣಿಸಿದ ಮೇಲೆ ಉಳಿಯುವುದೇ ನಿರ್ಗುಣ ಬ್ರಹ್ಮ. ಅದನ್ನೇ ಪ್ರತ್ಯಗಾತ್ಮನೆಂದೂ ಮತ್ತು ಓಂಕಾರವೆಂದೂ ಕರೆಯುತ್ತಾರೆ. ಹೀಗೆ ಜ್ಞಾನ ಮಾರ್ಗದಿಂದ ತಿಳಿಯುವುದೇ ಪಾದಸೇವನಾ ಭಕ್ತಿಯಾಗಿದೆ.

**ವಿವರಣೆ:** ಹಿಂದಿನ ಓವೀಯಲ್ಲಿ ಪ್ರಕಾಶ್ಯ ಹಾಗೂ ಪ್ರಕಾಶಕಗಳು ( ಸಾಕ್ಷ್ಯ ಹಾಗೂ ಸಾಕ್ಷಿಗಳು) ಒಂದಕ್ಕೊಂದು ಸಾಪೇಕ್ಷವಾಗಿದ್ದು ಪ್ರಕಾಶ್ಯವು ( ಅವಸ್ಥಾತ್ರಯಗಳು ) ಅವಸ್ಥಾತ್ರಯ ಪರೀಕ್ಷೆಯಿಂದ ಸತ್ಯವಲ್ಲವೆಂದು ಗೊತ್ತಾದಾಗ ಸಾಕ್ಷಿಯು ಹೇಗೆ ಸತ್ಯವಾಗಲು ಸಾಧ್ಯ? ಅಂದರೆ ಅದು ಸತ್ಯವಲ್ಲ. ನಮ್ಮ ಅಜ್ಞಾನದಿಂದುಂಟಾದ ಭ್ರಾಂತಿಯಿಂದ ಸಾಕ್ಷ್ಯವು (ಜಗತ್ತು) ಸತ್ಯವೆನಿಸುತ್ತದೆ. ಅಂದರೆ ನಿಜವಾಗಲೂ ಇಲ್ಲದ ಜಗತ್ತಿಗೆ ಸಾಕ್ಷಿಯಾದ ಆತ್ಮನು ತನ್ನ ಸಾಕ್ಷಿತ್ವವನ್ನು ಕಳೆದುಕೊಳ್ಳುತ್ತಾನೆ. 'ಜೀವ'ನ ಅಂತಃಕರಣದ ಸಾತ್ವಿಕ ಬುದ್ಧಿಯ ಉಪಾಧಿಯಿಂದ ಆತ್ಮನು, ಸತ್ಯವೆಂದು ಭ್ರಮಿಸಿದ ಜಗತ್ತಿಗೆ ಸಾಕ್ಷಿಯಾಗಿದ್ದಾನೆ ಎಂದು ಭ್ರಮಿಸಲಾಗುತ್ತದೆ. ಈ ಜಡ ಉಪಾಧಿಯಾದ ಸಾತ್ವಿಕ ಬುದ್ಧಿಸಹಿತ ಸಕಲ ಜಗತ್ತು ಸತ್ಯವಲ್ಲವೆಂದು ಗೊತ್ತಾದಾಗ ಆತ್ಮನ ಸಾಕ್ಷಿತ್ವವೂ ನಾಶವಾಗಿ ಶುದ್ಧ ಆತ್ಮನು ಉಳಿಯುತ್ತಾನೆ. ಇವನನ್ನೇ ಶುದ್ಧ, ನಿರ್ಗುಣ, ಅದ್ವಯ ಬ್ರಹ್ಮನೆಂದೂ ಮತ್ತು ಇದರ ಹೆಸರನ್ನು ಓಂಕಾರವೆಂದೂ ಕರೆಯುತ್ತಾರೆ. ( 'ಓಂ ಇತಿ ಏಕಾಕ್ಷರಂ ಬ್ರಹ್ಮ' ). ಹೀಗೆ ವಿಚಾರದಿಂದ ಓಂಕಾರದ ಚತುರ್ಥಪಾದವನ್ನು ಅಂದರೆ ತುರೀಯಾವಸ್ಥೆಯನ್ನು ತಿಳಿದುಕೊಳ್ಳುವುದೇ ಪಾದಸೇವನವೆಂಬ ಭಕ್ತಿಯ ಪ್ರಕಾರವಾಗಿರುತ್ತದೆ.

**ಓ.ಸಂ.98 :** ಹೀಗೆ ಜ್ಞಾನದಿಂದ ಉಂಟಾಗುವ ಪಾದಸೇವನೆಯಿಂದ ಮುಮುಕ್ಷುವಿನ ಜೀವನವು ಕೃತಾರ್ಥತೆಯನ್ನು ಪಡೆಯುತ್ತದೆ. ಆ ತಕ್ಷಣವೇ ಅವನಿಗೆ ಬಂಧ-ಮೋಕ್ಷರಹಿತವಾದ ನಿಜ ಬ್ರಹ್ಮತ್ವವು ಲಭಿಸುತ್ತದೆ.

**ವಿವರಣೆ :** ಪುರುಷನಿಗೆ ಪರಮ ಪುರುಷಾರ್ಥವಾದ ಮೋಕ್ಷವೆಂಬುದು ಜ್ಞಾನದಿಂದ ಪ್ರಾಪ್ತಿಯಾದ ಮೇಲೆ ಸಾಧಿಸಬೇಕಾಗಿರುವುದು ಏನೂ ಅವನಿಗೆ ಉಳಿದಿರುವುದಿಲ್ಲ. ಅವನಿಗೆ ತನ್ನ ಜನ್ಮವು ಸಾರ್ಥಕವೆನಿಸುತ್ತದೆ. ಏಕೆಂದರೆ ಅದು ಜನ್ಮ–ಮರಣಗಳ ವಿಷ ಚಕ್ರದಿಂದ ಅವನನ್ನು ಪಾರು ಮಾಡುತ್ತದೆ. ಆದರೆ ಬಂಧದ ಹಿನ್ನೆಲೆಯಲ್ಲಿಯೇ ಸದಾ ಮೋಕ್ಷವನ್ನು ಅರ್ಥಮಾಡಿಕೊಳ್ಳಬೇಕು. ಮೋಕ್ಷವೆಂದರೆ 'ಬಂಧದಿಂದ ಬಿಡುಗಡೆ'ಯೇ ಆಗಿರುತ್ತದೆ. ಹೀಗೆ ಮುಕ್ತನಾದವನ ಒಲವು ಆತ್ಮಾನಂದದ ಕಡೆಗೆ ಹೆಚ್ಚಾಗಿ ಜಗತ್ತಿನ ಹಾಗೂ ತನ್ನ ಬಂಧದ ಸ್ಮರಣವು ತನಗೆ ತಾನೇ ನಾಶವಾಗುತ್ತದೆ. ಆಗ ಸಾಪೇಕ್ಷ ಪದವಾದ ಮೋಕ್ಷವೂ ನಾಶವಾಗುತ್ತದೆ. ಇದರಿಂದ ಅವನಿಗೆ ಬಂಧ–ಮೋಕ್ಷರಹಿತವಾದ ಬ್ರಹ್ಮತ್ವವು ಪ್ರಾಪ್ತವಾಗಿ ಅದ್ವಯ ನಿರಪೇಕ್ಷ ಅಮಿತ ಆನಂದದಲ್ಲಿ ತನಗೆ ತಾನೇ ನಿತ್ಯನಾಗಿರುತ್ತಾನೆ.

**ಓ.ಸಂ.99:** ಯಾರು ಎಲ್ಲವನ್ನೂ ವ್ಯಾಪಿಸಿರುವನೋ ಅವನೇ ವಿಷ್ಣುವಾಗಿದ್ದಾನೆ. ಅವನಿಗೆ ಸ್ಫೂರ್ತಿಯಾಗಿ ಅವನ ಪತ್ನಿಯಾದ ಲಕ್ಷ್ಮಿಯು ಅವನ ಶಕ್ತಿಯಾಗಿದ್ದಾಳೆ. ಪುರುಷನ ಮೂರು ಅವಸ್ಥೆಗಳೇ ವಿಷ್ಣುವಿನ ಮೂರು ಪಾದಗಳಾಗಿದ್ದು ಅವುಗಳ ವಿಶ್ಲೇಷಣೆಯಿಂದ ತನ್ನ ವಿಷ್ಣುತ್ವದ ಅರಿವಾಗುತ್ತದೆ.

**ವಿವರಣೆ :** ಸಗುಣ ಬ್ರಹ್ಮನಾದ ಈಶ್ವರನು ಸೃಷ್ಟಿ–ಸ್ಥಿತಿ–ಲಯಗಳನ್ನು ಮಾಡುತ್ತಾನೆ. ಈ ಮೂರನ್ನು ಕ್ರಮವಾಗಿ ಮಾಡುವಾಗ ಅವನೇ ಬ್ರಹ್ಮ–ವಿಷ್ಣು–ಮಹೇಶ್ವರರೆಂಬ ಹೆಸರನ್ನು ಹೊತ್ತುಕೊಳ್ಳುತ್ತಾನೆ. ಜಗತ್ತನ್ನು ಸೃಷ್ಟಿಸುವಾಗ ಬ್ರಹ್ಮನಾಗಿದ್ದವನು, ಈಗ ಕಾಪಾಡಲು ವಿಷ್ಣುವಾಗಿದ್ದಾನೆ. ಅವನನ್ನೇ ಪ್ರಳಯಕಾಲದಲ್ಲಿ ಮಹೇಶ್ವರ (ಶಿವ) ನೆಂದೂ ಕರೆಯುತ್ತಾರೆ. ಇಲ್ಲಿ ವಿಷ್ಣುವೆಂದರೆ ಜಗತ್ತನ್ನೇ ವ್ಯಾಪಿಸಿದವನು. ಅವನ ಶಕ್ತಿಯಾದ ಮಾಯೆಗೆ ಲಕ್ಷ್ಮೀ ಎಂದು ಕರೆಯುತ್ತಾರೆ. ಜಡ ಸ್ವರೂಪದ ತ್ರಿಗುಣಾತ್ಮಕವಾದ ಈ ಮಾಯೆಯು ವಿಷ್ಣುವಿಗೆ ಸ್ಫೂರ್ತಿಯನ್ನು ಕೊಡುತ್ತಾಳೆ. ವಿಷ್ಣುವು ಜಗತ್ತಿನ ಉಪಾದಾನ ಕಾರಣವೂ ಹಾಗೂ ಅವನು ಜಗತ್ತಿನ ನಿಮಿತ್ತ ಕಾರಣವೂ ಆಗಿರುತ್ತಾನೆ. ಇಬ್ಬರೂ ಕೂಡಿ ಜಗತ್ತಿನ ಸೃಷ್ಟಿ–ಸ್ಥಿತಿ–ಲಯಗಳಿಗೆ ಕಾರಣರಾಗಿದ್ದಾರೆ. ವಿಷ್ಣುವು ತ್ರಿವಿಕ್ರಮನಾಗಿ ಮೂರು ಲೋಕಗಳನ್ನು ತನ್ನ ಮೂರು ಪಾದಗಳಿಂದ ಮೆಟ್ಟಿದ ಕಥೆಯು ಒಂದು ಸಂಕೇತವಾಗಿದೆ. ಅದು ದೇವನ ಮೂರು ಅವಸ್ಥೆಗಳನ್ನು ಸಂಕೇತಿಸುತ್ತದೆ. ಜಾಗ್ರತ–ಸ್ವಪ್ನ–ಸುಷುಪ್ತಿಗಳೇ ಆತ್ಮನ ಮೂರು ಪಾದಗಳಾಗಿದ್ದು ಇವುಗಳಿಗೆ ಈ ವರೆಗೆ ಮಾಡಿದ ವಿಶ್ಲೇಷಣೆಯಿಂದ ಮುಮುಕ್ಷುವಿಗೆ ತನ್ನ ವಿಷ್ಣುತ್ವದ ಅರಿವಾಗುತ್ತದೆ ಮತ್ತು ಸದ್ಯೋಮುಕ್ತಿಯು ಸಿಗುವುದು.

**ಓ.ಸಂ.100 :** ಈ ರೀತಿಯ ಅವಸ್ಥಾತ್ರಯಗಳ ಪರೀಕ್ಷೆಯಿಂದ ಉಂಟಾಗುವ ಜ್ಞಾನದಿಂದ ತತ್‌ಕ್ಷಣವೇ ಮುಮುಕ್ಷುವಿಗೆ ಮೋಕ್ಷವು ಪ್ರಾಪ್ತವಾಗುತ್ತದೆ. ಈ ಜ್ಞಾನಮಾರ್ಗವೇ ಅತ್ಯಂತ ಉತ್ತಮವಾದ ಪಾದಸೇವನೆಯು.

**ವಿವರಣೆ :** ಈ ಓವೀಯ ಕೊನೆಯ ಎರಡು ಚರಣಗಳನ್ನು ಮುಂದಿನ ಓವೀಯಲ್ಲಿ ವಿವರಿಸಲಾಗಿದೆ. ಈವರೆಗೆ ನಡೆಸಿದ ವಿಚಾರ ಪ್ರಧಾನವಾದ ಜ್ಞಾನಮಾರ್ಗದಿಂದ ಅವಸ್ಥಾತ್ರಯಗಳ ದೀರ್ಘ ಪರೀಕ್ಷೆಯಿಂದ ಉಂಟಾದ ವಿವೇಕವು ಅಥವಾ ಜ್ಞಾನವು ತತ್ ಕ್ಷಣವೇ ಅನಾದಿಯಾದ ಅಜ್ಞಾನವನ್ನು ನಾಶಮಾಡುತ್ತದೆ. ಇದರಿಂದ ಮೂರು ಅವಸ್ಥೆಗಳಲ್ಲಿದ್ದ 'ನಾನು ದೇಹ'ವೆಂಬ ಭಾವವು ನಾಶವಾಗಿ 'ನಾನು ಆತ್ಮ'ನು ಮತ್ತು ಈ ಮೂರು ಅವಸ್ಥೆಗಳಿಗೆ ಸಾಕ್ಷಿಯು ಎಂಬ ಅರಿವು ಉದ್ಭವಿಸಿ ಸದ್ಯೋಮುಕ್ತಿಯನ್ನು ಅಂದರೆ ಆ ಕ್ಷಣವೇ, ಅಲ್ಲೇ, ನಾನು ಜೀವನ್ಮುಕ್ತಿಯನ್ನು ಪಡೆಯುತ್ತೇನೆ. ನನ್ನ ಜೀವಭಾವವು ನಾಶವಾಗಿ ಬ್ರಹ್ಮಭಾವವು ನಿತ್ಯ ನೆಲೆಸುತ್ತದೆ.

ಇಲ್ಲಿಗೆ ಜ್ಞಾನನಿಷ್ಠರಿಗೆ ಹೇಳಿರುವ 'ಪಾದಸೇವನ ಭಕ್ತಿಯು' ಓವೀ ಸಂ.64 ರಿಂದ ಈ ಓವೀಯವರೆಗೆ ಅಂದರೆ 37 ಓವೀಗಳಲ್ಲಿ ಮಾಡಿದ ವಿವೇಚನವು ಮುಕ್ತಾಯವಾಯಿತು. ಮುಂದಿನ ಎರಡು ಓವೀಗಳಲ್ಲಿ ಕರ್ಮಠರಿಗೆ ಹೇಳಲ್ಪಟ್ಟ 'ಪಾದಸೇವನ ಭಕ್ತಿಯು' ವಿವರಿಸಲ್ಪಟ್ಟಿದೆ. ಹೀಗೆ ಜ್ಞಾನನಿಷ್ಠರಿಗೆ ಮತ್ತು ಕರ್ಮನಿಷ್ಠರಿಗೆ ಹೇಳಲ್ಪಟ್ಟ ಎರಡು ರೀತಿಯ 'ಪಾದಸೇವನ ಭಕ್ತಿ'ಯ ಮಾರ್ಗಗಳಲ್ಲಿ ಜ್ಞಾನನಿಷ್ಠರಿಗೆ ಈವರೆಗೆ ಹೇಳಿದ ವಿಚಾರಮಾರ್ಗವು ಅತ್ಯಂತ ಶೀಘ್ರವಾಗಿಯೂ, ಇಲ್ಲೇ, ಈ ಕ್ಷಣವೇ, ಸಿಗುವ ಸದ್ಯೋಮುಕ್ತಿಯಾಗಿದೆ. ಆದುದರಿಂದ ಇದು ಅತ್ಯುತ್ತಮವಾದುದು. ಆದರೆ ಕೆಲವರಿಗೆ ಇದು ಕಠಿಣವೆನಿಸಿದರೆ ಅವರು ಮುಂದೆ ಕರ್ಮಠರಿಗೆ ಹೇಳುವ ಗೌಣ ಮಾರ್ಗವನ್ನು ಅನುಸರಿಸಬಹುದು.

**ಓ.ಸಂ. 101 :** ಈ ರೀತಿ ಅವಸ್ಥಾತ್ರಯ ಪರೀಕ್ಷೆಯನ್ನು ವಿಚಾರ ಕ್ರಮದಿಂದ ಮಾಡುವುದು ಯಾರಿಗೆ ಕಠಿಣವೆನಿಸುವುದೋ ಅಂತಹವರು ತಮ್ಮ ಗುರುದೇವನ ಪಾದಗಳನ್ನೇ ಸೇವಿಸಬೇಕು. ಅವರು ಗುರುಚರಣಗಳನ್ನೇ ನಿಷ್ಠೆಯಿಂದ ರಾತ್ರಿ ಹಗಲು ಕಾಯ-ವಾಚಾ-ಮನಸಾ ಸೇವನೆ ಮಾಡಬೇಕು. ಅನ್ಯ ವಿಷಯಗಳನ್ನು ಚಿಂತಿಸಬಾರದು. ಇದರಿಂದ ಚಿತ್ತ-ಶುದ್ಧಿಯಾಗುವುದು.

**ವಿವರಣೆ :** ಹಿಂದಿನ ಓವೀಯ ಕೊನೆಯ ಎರಡು ಚರಣಗಳನ್ನು ಈ ಓವೀಯಲ್ಲಿ ವಿವರಿಸಲಾಗಿದೆ. ಹಿಂದೆ ಈವರೆಗೆ ಹೇಳಿದ ಜ್ಞಾನನಿಷ್ಠರಿಗೆ ಹೇಳಿದ ಮಾರ್ಗವು ಕೆಲವರಿಗೆ ಕಠಿಣವೆನಿಸಬಹುದು. ಅಂತಹವರು ಕರ್ಮ ಪ್ರಧಾನವಾದ ಈ ಗೌಣ ಮಾರ್ಗವನ್ನು ಅನುಸರಿಸಬಹುದು. ಈ ಮಾರ್ಗದಲ್ಲಿ ಸಾಧಕನು ನಿತ್ಯ-ನೈಮಿತ್ತಿಕ ಹಾಗೂ ವರ್ಣಾಶ್ರಮ ಧರ್ಮಗಳನ್ನು ಬಿಡದೇ ಮಾಡಬೇಕು. ಇದರ ಜೊತೆಗೆ ಇಷ್ಟದೇವತೆಯ ಉಪಾಸನೆಯನ್ನು ಎಡಬಿಡದೇ ನಿಷ್ಠೆಯಿಂದ ಜೀವನದ ಕೊನೆಯ ಘಳಿಗೆಯತನಕ ಮಾಡಬೇಕು. ಈ ರೀತಿ ಈಶ್ವರನ ಉಪಾಸನೆಗಿಂತ ಶ್ರೇಷ್ಠವಾದ ಸದ್ಗುರುವಿನ ಪಾದಸೇವನೆಯನ್ನು ಭಕ್ತಿಯಿಂದ ಮಾಡುವುದೇ ಆಗಿರುತ್ತದೆ. ಅನ್ಯ ವಿಷಯಗಳನ್ನು ಚಿಂತಿಸದೇ ಗುರುವಿನ ಪಾದಸೇವನೆಯ ಚಿಂತೆಯನ್ನೇ ನಿಷ್ಠೆಯಿಂದ ಕಾಯಾ-ವಾಚಾ-ಮನಸಾ ಮಾಡಬೇಕು. ಗುರುವಿಗೆ ಬೇಕಾದ ಸಕಲವನ್ನೂ ತಾನೇ ಒದಗಿಸಬೇಕು. ಗುರುವಿನ

ಮನೆಯನ್ನು ಸ್ವಚ್ಛಮಾಡುವುದು, ಬಟ್ಟೆಗಳನ್ನು ತೊಳೆಯುವುದು, ಆರೋಗ್ಯ ರಕ್ಷಣೆಗಾಗಿ ಸಕಲವನ್ನೂ ಮಾಡಬೇಕು. ಗುರುವಿನ ಉಪದೇಶಕ್ಕಾಗಿ ನಿಷ್ಠೆಯಿಂದ ಕಾಯಬೇಕು. ಹೀಗೆ ನಿರಂತರವೂ ಹಗಲು ರಾತ್ರಿಯೆನ್ನದೇ ಗುರುವಿನ ಸೇವೆ ಮಾಡುವುದರಿಂದ ಸಾಧಕನಿಗೆ ಚಿತ್ತಶುದ್ಧಿಯು ಉಂಟಾಗುತ್ತದೆ. ಇದು ಜ್ಞಾನ ಪ್ರಾಪ್ತಿಗೆ ಸಹಕಾರಿಯಾಗಿರುತ್ತದೆ.

<u>ಓ.ಸಂ.102 :</u> ಹೀಗೆ ಶ್ರೀಗುರು ಚರಣ ಸೇವನೆಯಿಂದ ಚಿತ್ತ ಶುದ್ಧಿಯಾಗುವುದು. ಅವನಿಗೆ ಸಹಜವಾಗಿ ಗುರುಪ್ರಸಾದದಿಂದ ಜ್ಞಾನ ಉಂಟಾಗುವುದು ಹಾಗೂ ಭವ ಬಂಧನವು ನಾಶವಾಗುವುದು. ಸಹಜ ಜೀವನ ನಡೆಯುವುದು.

<u>ವಿವರಣೆ :</u> ಹಿಂದಿನ ಓವೀಯಲ್ಲಿ ಕರ್ಮಠನಾದವನು ಗುರುಚರಣ ಸೇವನೆಯಿಂದ ಅವನ ಚಿತ್ತ ಶುದ್ಧಿಯಾಗುವುದು ಎಂದು ತಿಳಿಸಲಾಗಿದೆ. ಚಿತ್ತಶುದ್ಧಿಯೆಂದರೆ ಲೌಕಿಕ ವಿಷಯಗಳಲ್ಲಿ ಅನಾಸಕ್ತಿಯನ್ನೂ ಹಾಗೂ ಅಧ್ಯಾತ್ಮ ವಿಷಯಗಳಲ್ಲಿ ಆಸಕ್ತಿಯನ್ನು ಬೆಳೆಸಿಕೊಳ್ಳುವುದು ಹಾಗೂ ಇದರ ಪರಿಣಾಮವಾಗಿ ಚಿತ್ತದ ಏಕಾಗ್ರತೆಯೂ ಉಂಟಾಗುತ್ತದೆ. ಹೀಗೆ ಚಿತ್ತಶುದ್ಧಿ ಹಾಗೂ ಚಿತ್ತದ ಏಕಾಗ್ರತೆಯಿಂದ ಜ್ಞಾನಪ್ರಾಪ್ತಿ ಯೋಗ್ಯತಾ ಸಾಮರ್ಥ್ಯವು ಉಂಟಾಗುತ್ತದೆ. ಕ್ರಮೇಣ ಶ್ರೀಗುರುಪ್ರಸಾದದಿಂದ ಅಂದರೆ ಗುರೂಪದೇಶದಿಂದ ಬ್ರಹ್ಮಾತ್ಮೈಕ್ಯ ಜ್ಞಾನ ಉಂಟಾಗುವುದು. ಇದರಿಂದ ಶಿಷ್ಯನು ಸಂಸಾರವೆಂಬ ಭವ ಸಾಗರವನ್ನು ದಾಟುವನು. ಈ ಕರ್ಮಮಾರ್ಗದಿಂದ ಹೀಗೆ ಗುರಿ ತಲುಪುವುದು ನಿಧಾನವಾಗಬಹುದು. ಈ ಜನ್ಮದಲ್ಲಿ ಸಾಧ್ಯವಾಗದಿದ್ದಲ್ಲಿ ಮುಂದಿನ ಜನ್ಮದಲ್ಲಾದರೂ ಇದು ಸಾಧ್ಯವಾಗುತ್ತದೆ. ಇಲ್ಲಿಗೆ 'ಪಾದಸೇವನೆ' ಎಂಬ ಭಕ್ತಿ ಪ್ರಕಾರದ ದೀರ್ಘವಿವೇಚನೆಯು ಮುಕ್ತಾಯವಾಯಿತು.

<u>ಓ.ಸಂ.103 :</u> ಈಗ 'ಅರ್ಚನ'ವೆಂಬ ಭಕ್ತಿ ಪ್ರಕಾರದ ವಿವೇಚನವು ಪ್ರಾರಂಭವಾಗುತ್ತದೆ. 'ಪಾದಸೇವನೆ'ಯ ವಿವರದಿಂದ ತಿಳಿದುಕೊಂಡ ದೇವನ ಸ್ವರೂಪವನ್ನು ಅರ್ಚನೆಗಾಗಿ ಜಗತ್ತಿನ ಒಳಗೂ ಹಾಗೂ ಹೊರಗೂ ವಿಚಾರದಿಂದ ಸ್ಥಾಪಿಸಬೇಕು.

<u>ವಿವರಣೆ :</u> ಈಗ ಐದನೆಯ ಭಕ್ತಿ ಪ್ರಕಾರವಾದ ಅರ್ಚನ ಭಕ್ತಿಯ ವಿವರಗಳನ್ನು ಈ ಓವೀಯಿಂದ ಪ್ರಾರಂಭಿಸಲಾಗಿದೆ. ಹಿಂದಿನ ಪಾದಸೇವನೆಯ ವಿವರಗಳಿಂದ ತಿಳಿದ ಪರಮಾತ್ಮನ ಸ್ವರೂಪವನ್ನು ಅರ್ಚನ ಭಕ್ತಿಯ ಅಭ್ಯಾಸಕ್ಕೆ ಬಳಸಿಕೊಳ್ಳಲಾಗುವುದು. ಪಾದಸೇವನೆಯಲ್ಲಿ ಪರಮಾತ್ಮನು ಓಂಕಾರ ಸ್ವರೂಪಿಯು ಅಂದರೆ ಜಾಗ್ರತಾದಿ ಅವಸ್ಥಾತ್ರಯಗಳಿಗೆ ಅಧಿಷ್ಠಾನನೂ, ಸಾಕ್ಷಿಯೂ ಆಗಿರುವ ತುರೀಯಾತ್ಮನಾಗಿದ್ದಾನೆ. ಅವನು ಸತ್-

ಚಿತ್-ಆನಂದ ಸ್ವರೂಪನಿದ್ದಾನೆ. ಹೀಗೆಂದು ತಿಳಿಯಲ್ಪಟ್ಟಿದ್ದಾನೆ. ಇಂತಹ ಪರಮಾತ್ಮನನ್ನು ಇರುವುದೆಲ್ಲದರ ಅಂದರೆ ಇಡೀ ಜಗತ್ತಿನ ಒಳಗೂ ಹೊರಗೂ ಅರ್ಚನೆಗಾಗಿ ಪ್ರತಿಷ್ಠಾಪಿಸಬೇಕು. ನಾಮ-ರೂಪಗಳಿಗೆ ತುರೀಯನಾದ ( ಅತೀತನಾದ ) ಇವನನ್ನು ಹೀಗೆ ಪ್ರತಿಷ್ಠಾಪಿಸುವುದು ಹೇಗೆ ಸಾಧ್ಯ? ಪದಾರ್ಥಗಳು ಮತ್ತು ಅವುಗಳ ಗುಣಗಳು (ನಾಮ-ರೂಪಗಳು) ಇರುವಲ್ಲಿ ಪರಮಾತ್ಮನು ಅವುಗಳ ಅಸ್ತಿ-ಭಾತಿ-ಪ್ರಿಯತ್ವನಾಗಿ ಸದಾ ಇರುತ್ತಾನೆ. ತಿಳಿಯುವ ಜೀವನೂ ಹಾಗೂ ತಿಳಿಯಲ್ಪಟ್ಟ ಜಗತ್ತೂ – ಎರಡೂ ಅಸ್ತಿ-ಭಾತಿ-ಪ್ರಿಯ ಸ್ವರೂಪಾತ್ಮಕವಾಗಿಯೇ ತೋರುವುವು. ಹೀಗೆ ಸಕಲವೂ ಪರಮಾತ್ಮ ಸ್ವರೂಪವಾಗಿರುವುದರಿಂದ ಅವನನ್ನು ಎಲ್ಲ ಕಡೆಗೆ ಪ್ರತಿಷ್ಠಾಪಿಸಬೇಕು. ಅಸ್ತಿ-ಭಾತಿ-ಪ್ರಿಯ ಸ್ವರೂಪಗಳನ್ನು ಕೇವಲ ಮಾನಸಿಕವಾಗಿ ಚಿಂತಿಸಬಹುದು. ಆದುದರಿಂದ ಕೇವಲ ವಿಚಾರಾತ್ಮಕವಾಗಿ ದೇವನನ್ನು ಸರ್ವ ವ್ಯಾಪಕವಾಗಿ ಪ್ರತಿಷ್ಠಾಪಿಸಬಹುದು.

<u>ಓ.ಸಂ.104:</u> ಅಸ್ತಿ-ಭಾತಿ-ಪ್ರಿಯ ಸ್ವರೂಪವಾಗಿ ಸಕಲವನ್ನೂ ವ್ಯಾಪಿಸಿದ ಈ ಪರಮಾತ್ಮನು, ನಿರ್ಮಲನೂ, ಏಕನೂ ಆಗಿದ್ದಾನೆ. ಆದರೆ ನಾಮ-ರೂಪಗಳು ನಿಃಸಂದೇಹವಾಗಿ ಕೇವಲ ತೋರಿಕೆಯಾಗಿದ್ದು ಜಾಣರು ಇದನ್ನು ಮಾಯೆಯೆಂದೇ ತಿಳಿಯಬೇಕು.

<u>ವಿವರಣೆ :</u> ಅಸ್ತಿ-ಭಾತಿ-ಪ್ರಿಯ ಸ್ವರೂಪದಿಂದ ಸಕಲವನ್ನೂ ವ್ಯಾಪಿಸಿದ ಪರಮಾತ್ಮನು ನಿರ್ಮಲನೂ ಮತ್ತು ಏಕನೂ ಆಗಿದ್ದಾನೆ. ಯಾವ ಜಡ ಉಪಾಧಿಯ ಸೋಂಕೂ ಇಲ್ಲದೇ ಪರಮಾತ್ಮನು ನಿರ್ಮಲನಾಗಿದ್ದಾನೆ. ಯಾವುದೇ ಜಡದ ಉತ್ಪತ್ತಿ-ಸ್ಥಿತಿ-ನಾಶಗಳಿಗೆ ಅತೀತವಾಗಿಯೇ ಇದ್ದುಕೊಂಡು ಬೆಳಗುವುದರಿಂದಲೇ ಅವುಗಳನ್ನು ಅರಿಯುತ್ತಾನೆ. ಹೇಗೆ ಬೆಳಕಿನ ಮೂಲವು ದೂರದಿಂದಲೇ ಇದ್ದುಕೊಂಡು ಹೇಗೆ ಬೆಳಗುತ್ತದೋ ಹಾಗೆಯೇ ಇವನು ಸಕಲ ಜಡವನ್ನೂ ತಿಳಿಯುತ್ತಾನೆ. ಇವನು ಏಕನು, ಅಂದರೆ ಅದ್ವಯನು, ಅಂದರೆ ಎರಡಲ್ಲದವನು. ಇವನು ಚೈತನ್ಯ ಸ್ವರೂಪನಾಗಿರುವುದರಿಂದಲೂ ಹಾಗೂ ಎರಡು ಚೈತನ್ಯಗಳಿರುವಂತಿಲ್ಲದಿರುವುದರಿಂದಲೂ ಅವನು ಏಕನೂ ಆಗಿದ್ದಾನೆ. ಜಡ ಸ್ವರೂಪದ ನಾಮ-ರೂಪಗಳು ಕ್ಷಣಿಕವೂ ಹಾಗೂ ತೋರಿಕೆಯೂ ಆಗಿರುತ್ತವೆ. ಅವುಗಳಿಗೆ ನಿಜವಾದ ಅಸ್ತಿತ್ವವು ಇಲ್ಲದಿರುವುದರಿಂದ ಮಾಯಾ ಸ್ವರೂಪವಾಗಿರುತ್ತವೆ. 'ಮಾ' ಅಂದರೆ ಇಲ್ಲದಿರುವುದು, 'ಯಾ' ಅಂದರೆ ಯಾವುದು. 'ಮಾಯಾ' ಅಂದರೆ ಯಾವುದು ನಿಜವಾಗಿ ಇಲ್ಲವೋ ಅದು ಮಾಯೆಯಾಗಿದೆ.

**ಓ.ಸಂ.105 :** ನಾಮ-ರೂಪಾತ್ಮಕವಾದ ಸಕಲ ವಿಷಯಗಳು ನಾಶವಾದರೂ ಅವುಗಳ ಅಸ್ತಿತ್ವವು ಮಾತ್ರ ಅವಿನಾಶಿಯಾಗಿರುತ್ತದೆ. ಇದೇ ರೀತಿ ಅವುಗಳ ಭಾತಿ ಪ್ರಿಯತ್ವಗಳೂ ಕೂಡ ಅವಿನಾಶಿಯಾಗಿರುತ್ತವೆ.

**ವಿವರಣೆ :** ಸಕಲ ಜಗತ್ತು ಹಾಗೂ 'ದೇಹೋಽಹಂ' ಎಂಬ ಭಾವವುಳ್ಳ 'ಜೀವ'ನು – ಈ ಎರಡೂ ಜಡ ಸ್ವರೂಪವಿರುವುದರಿಂದ ನಾಮ-ರೂಪಾತ್ಮಕವಾಗಿರುತ್ತವೆ. ಇವು ಕಾರ್ಯ-ಕಾರಣ ಪ್ರಕ್ರಿಯೆಗೆ ಒಳಗಾಗಿ ಕ್ಷೀಣಿಸುತ್ತಾ ಹೋಗಿ ಒಂದು ದಿನ ನಿಶ್ಚಯವಾಗಿ ನಾಶವಾಗುತ್ತವೆ. ಇವುಗಳನ್ನು ನೋಡುವ ಸಾಕ್ಷಿಯು ಅವುಗಳ ಅಸ್ತಿ-ಭಾತಿ-ಪ್ರಿಯ ಸ್ವರೂಪವಾಗಿದ್ದು ಅದಕ್ಕೆ ಮಾತ್ರ ನಾಶವಿರುವುದಿಲ್ಲ. ಸಾಕ್ಷಿಯು ಒಂದೇ ಚೈತನ್ಯ ಸ್ವರೂಪವಿರುವುದರಿಂದ ಅದೊಂದೇ ಎಲ್ಲವನ್ನು ತಿಳಿಯಬಲ್ಲದು. ಉದಾಹರಣೆಗೆ, 'ಪುಸ್ತಕವಿದು' ಎಂದು ನನಗೆ ತಿಳಿದಾಗ ತಿಳಿಯುವ ನನ್ನ ಅಂತಃಕರಣವು ತಿಳಿಯುವವನಾಗಿಯೂ, ಪುಸ್ತಕವು ತಿಳಿಯಲ್ಪಟ್ಟದ್ದಾಗಿಯೂ ತೋರಿಕೊಳ್ಳುವವು (ಭಾತಿ) ಮತ್ತು ತನ್ಮೂಲಕ ಅವು ಇದ್ದಾವೆಂದು (ಅಸ್ತಿ) ಸಾಕ್ಷಿಗೆ ತಿಳಿದು ಬರುತ್ತದೆ. ಹೀಗೆ ಎಲ್ಲವೂ ಅಸ್ತಿ-ಭಾತಿ-ಪ್ರಿಯ ಸ್ವರೂಪವಾಗಿರುವುದೆಂದು ತಿಳಿದುಬರುತ್ತದೆ. ಆದರೆ ನಾಮ-ರೂಪಾತ್ಮಕವಾದ ಜಡವೆಲ್ಲವೂ ನಾಶವಾಗುವಂತಹದ್ದಾಗಿರುತ್ತದೆ. ಪುಸ್ತಕವು ಸುಟ್ಟಾಗ ಅದರ ನಾಮ-ರೂಪಗಳು ನಾಶವಾದರೂ ಅದರ ಅಸ್ತಿ-ಭಾತಿ-ಪ್ರಿಯ ಸ್ವರೂಪಗಳು ಬೂದಿಯ ರೂಪವನ್ನು ತಾಳುತ್ತವೆ. ಅಂದರೆ ಅಸ್ತಿ-ಭಾತಿ-ಪ್ರಿಯಗಳು ನಾಶಹೊಂದುವುದಿಲ್ಲ. ಅವು ನಿತ್ಯವಾಗಿ ಸಾಕ್ಷಿ ಸ್ವರೂಪವಾಗಿರುತ್ತವೆ.

**ಓ.ಸಂ.106:** 'ಅಸ್ತಿ' ಮುಂತಾದವುಗಳ ನಾಶವನ್ನು ಯಾರಿಂದಲೂ ತಿಳಿಯಲಾಗುವುದಿಲ್ಲ. ಯಾವುದು ಅವುಗಳ ನಾಶವನ್ನು ತಿಳಿಯುವುದೋ ಅದು ಅಸ್ತಿತ್ವವನ್ನು ಹೊಂದಿರಬೇಕೇ ಹೊರತು ನಾಸ್ತಿತ್ವವನ್ನಲ್ಲ. ಆದ್ದರಿಂದ 'ಅಸ್ತಿತ್ವವು ನಾಶವಾಗುವುದಿಲ್ಲ' ಎಂಬ ವಚನವು ಪ್ರಮಾಣವಾಗಿದೆ.

**ವಿವರಣೆ:** ಈ ಓವೀಯಿಂದ ಅಸ್ತಿ-ಭಾತಿ-ಪ್ರಿಯತ್ವಗಳು ನಾಮರೂಪಗಳ ಅಧಿಷ್ಠಾನವಾಗಿ ನಿತ್ಯ ನಾಶವಾಗದೇ ಉಳಿಯುವುವು ಎಂದು ಮುಂದಿನ ಎಂಟು ಓವೀಗಳ ಪರ್ಯಂತ ವಿವರಿಸಲಾಗಿದೆ. ನಾಮ-ರೂಪಗಳು ನಾಶವಾದರೂ ಅವುಗಳ ಅಸ್ತಿತ್ವವು ನಾಶವಾಗುವುದಿಲ್ಲ. ಏಕೆಂದರೆ ಅವು ಮುಂದಿನ ನಾಮ-ರೂಪಗಳಾಗಿ ತೋರುತ್ತವೆ. ಆದರೆ ಎಲ್ಲ ನಾಮ-ರೂಪಗಳು ಪ್ರಳಯದಲ್ಲಿ ನಾಶವಾದಾಗ ಅಸ್ತಿತ್ವವೂ ನಾಶವಾಗಬಹುದಲ್ಲ? 'ಹಾಗೆ ನಾಶವಾಗುವುದಿಲ್ಲ' ಎಂದು ಯಾರಿಗೆ ತಿಳಿದಿದೆ ಎಂದು ಹೇಳಲಾಗುವುದಿಲ್ಲ. ಅದ್ದರಿಂದ ಹೀಗೆ 'ನಾಶವಾಗುವುದಿಲ್ಲ' ಎಂಬ ವಚನವನ್ನು 'ಅಪ್ರಮಾಣ'ವಾಗಿದೆ ಅಂದರೆ ಸಿದ್ಧಮಾಡಲು ಆಗುವುದಿಲ್ಲ ಎಂಬ

ಸಂಶಯವನ್ನು ಹೊಂದಬಾರದು ಏಕೆಂದರೆ ಒಂದು ವೇಳೆ ಹೀಗೆ ಅಸ್ತಿತ್ವವು ನಾಶವಾಗುತ್ತದೆ ಎಂಬುದನ್ನು ಯಾವುದಾದರೂ ತಿಳಿಯಬಹುದಾಗಿದ್ದರೆ ಅದೂ ಕೂಡ ಅಸ್ತಿತ್ವವನ್ನು ಹೊಂದಿರಬೇಕಾಗುತ್ತದೆಯೇ ಹೊರತು 'ನಾಸ್ತಿತ್ವ'ವನ್ನಲ್ಲ, ಅಂದರೆ ಇಲ್ಲದಿರುವಿಕೆಯನ್ನಲ್ಲ. ಆದ್ದರಿಂದ ನಾಮ-ರೂಪಗಳ ಅಸ್ತಿತ್ವವು ನಾಶವಾಗುವುದಿಲ್ಲ.

**ಓ.ಸಂ.107 :** ಹೀಗೆ ಎಲ್ಲ ನಾಮ-ರೂಪಗಳು ನಾಶವಾಗುವುದನ್ನು ಯಾವುದು ತಿಳಿಯುವುದೋ ಅದು ಅಸ್ತಿತ್ವ ರೂಪದಿಂದ ನಿತ್ಯ ಉಳಿಯುವುದು. ಎಲ್ಲ ನಾಮ-ರೂಪಗಳು ನಾಶವಾದ ಮೇಲೆ ಅದಕ್ಕೆ ತಿಳಿಯುವುದಾಗಲೀ ಅಥವಾ ತಿಳಿಯದಿರುವುದಾಗಲೀ ಸಂಭವಿಸುವುದಿಲ್ಲ.

**ವಿವರಣೆ :** ಸಕಲ ಜೀವಗಳ ಹಾಗೂ ಜಗತ್ತಿನ ಜಡ ನಾಮ-ರೂಪಗಳು ನಾಶವಾಗುತ್ತದೆಯೆಂಬುದನ್ನು ಯಾವ ಅಸ್ತಿತ್ವವು ತಿಳಿಯುವುದೋ ಅದು ನಾಶವಾಗದೇ ನಿತ್ಯವಿರುತ್ತದೆ. ಅದೇ ಅಸ್ತಿತ್ವವು ಎಲ್ಲ ನಾಮ-ರೂಪಗಳಿಗೂ ಅಧಿಷ್ಠಾನವಾಗಿರುತ್ತದೆ. ಆದರೆ ಈ ಅಸ್ತಿತ್ವವು ನಾಮ-ರೂಪಗಳಿಗೆ ಅಧಿಷ್ಠಾನವಾಗಿದ್ದರೂ ಅವುಗಳಿಗೆ ಅಂಟಿಕೊಂಡಿರುವುದೆಂದು ತಿಳಿಯಬಾರದು. ಏಕೆಂದರೆ 'ಘಟದ್ರಷ್ಟಾ ಘಟಾತ್‌ಭಿನ್ನ:' ಎನ್ನುವಂತೆ ನೋಡುವವನು ನೋಡಲ್ಪಡುವುದಕ್ಕಿಂತ ಸದಾ ಭಿನ್ನವಾಗಿಯೇ ಇರುತ್ತಾನೆ. ಸೂರ್ಯನ ಚಲನೆಯ ತೋರಿಕೆಯ ಅಧಿಷ್ಠಾನವು ಭೂಮಿಯ ಚಲನೆಯಲ್ಲಿರುತ್ತದೆ. ಹಾಗೆಯೇ ಭ್ರಾಂತಿಯ ಸರ್ಪದ ನಿಮಿತ್ತ-ಕಾರಣವು ನೋಡುವವನ ಸ್ಮೃತಿಯಾಗಿರುತ್ತದೆ. ಹೀಗೆ ಸಕಲ ನಾಮ-ರೂಪಗಳ ಅಸ್ತಿತ್ವವು ಒಂದೇ ಇದ್ದು ಪ್ರಳಯದಲ್ಲಿ ಎಲ್ಲ ನಾಮ-ರೂಪಗಳು ನಾಶವಾಗುವುದನ್ನು ಅದು ತಿಳಿದ ಮೇಲೆ ಅದಕ್ಕೆ ತಿಳಿಯುವುದಾಗಲೀ ಅಥವಾ ತಿಳಿಯದಿರುವುದಾಗಲೀ ಇರುವುದಿಲ್ಲ. ಏಕೆಂದರೆ ತಿಳಿಯಲು ಅದಕ್ಕೆ ಯಾವ ನಾಮ-ರೂಪಗಳೂ ಇರುವುದಿಲ್ಲ. ಇಲ್ಲಿ ಬುದ್ಧಿ ವೃತ್ತಿಯ ಉಪಾಧಿಯಿಂದ ಈ ನಿತ್ಯ ಅಸ್ತಿತ್ವವುಳ್ಳ ಸಾಕ್ಷಿಯು ತಿಳಿಯುವವನಾಗಿಯೂ ಹಾಗೆಯೇ ಬುದ್ಧಿವೃತ್ತಿಯ ಉಪಾಧಿಯು ಇಲ್ಲದಾಗ ಸಾಕ್ಷಿ ಚೈತನ್ಯದ 'ತಿಳಿಯದಿರುವುದೂ' ಇರುತ್ತದೆ.

**ಓ.ಸಂ.108:** ಸರ್ವ ಸಾಕ್ಷಿಯು ಸಕಲ ನಾಮ-ರೂಪಗಳ ದ್ರಷ್ಟಾ ಆಗಿರುವುದರಿಂದ ಸರ್ವ ನಾಮ-ರೂಪಗಳು ನಾಶವಾದರೂ ಅದಕ್ಕೆ ನಿತ್ಯ ಅಸ್ತಿತ್ವದ ಜೊತೆಗೆ ನಿತ್ಯ ಭಾತಿಯೂ ಇರುತ್ತದೆ. ಆದರೆ ಸರ್ವ ನಾಮ-ರೂಪಗಳು ನಾಶವಾದ ಮೇಲೆ ಅದಕ್ಕೆ ತಿಳಿಯುವುದಾಗಲೀ ಅಥವಾ ತಿಳಿಯದಿರುವುದಾಗಲೀ ಘಟಿಸುವುದಿಲ್ಲವಾದ್ದರಿಂದ ಅದನ್ನು ಜಡವೆನ್ನುವುದಾಗುವುದಿಲ್ಲ.

**ವಿವರಣೆ :** ಸರ್ವ ನಾಮ-ರೂಪಗಳ ಉತ್ಪತ್ತಿ-ಸ್ಥಿತಿ-ನಾಶಗಳನ್ನು ತಿಳಿಯುವ ಸಾಕ್ಷಿಯು ದ್ರಷ್ಟಾ ಆಗಿ ಸರ್ವ ನಾಮ-ರೂಪಗಳು ನಾಶವಾದರೂ ಕೂಡ ನಿತ್ಯ ತೋರುತ್ತಿರುತ್ತಾನೆ. ಈ ತೋರುವಿಕೆಗೆ 'ಭಾತಿ' ಎನ್ನುತ್ತೇವೆ. ಆದ್ದರಿಂದ ಸರ್ವಸಾಕ್ಷಿಗೆ ನಿತ್ಯ ಅಸ್ತಿತ್ವದ ಜೊತೆಗೆ ಭಾತಿಯೂ ನಿತ್ಯವಾಗಿರುತ್ತದೆ. ಆದರೆ ಪ್ರಳಯ ಕಾಲದಲ್ಲಿ

ಸರ್ವ ನಾಮ-ರೂಪಗಳು ಇಲ್ಲದಿರುವ ಕಾರಣ ಅವುಗಳನ್ನು ತಿಳಿಯುವ ಸಾಕ್ಷಿಯು ತಿಳಿಯುವವನಾಗಿ (ಸಾಕ್ಷಿಯಾಗಿ) ಇರಲು ಸಾಧ್ಯವಿಲ್ಲ. ಅದು ಪರಿಶುದ್ಧ ಆತ್ಮನಾಗಿ ನಿರ್ಗುಣನಾಗಿರುತ್ತದೆ. ಆದ್ದರಿಂದ ಆ ಕಾಲದಲ್ಲಿ ಅದನ್ನು ಇರುವುದಿಲ್ಲ ಎಂದಾಗಲೀ ಅಥವಾ ಅದು ತೋರುವುದಿಲ್ಲವಾದುದರಿಂದ ಅದಕ್ಕೆ ಚೈತನ್ಯವೇ ಇರುವುದಿಲ್ಲ ಎಂದಾಗಲೀ ಪರಿಗಣಿಸಿ ಅದನ್ನು ಜಡವೆಂದು ತಿಳಿಯಬಾರದು. ಅಸ್ತಿ-ಭಾತಿ-ಪ್ರಿಯತ್ವವಿರುವ ಸತ್ಯ ಸ್ವರೂಪಕ್ಕೆ ವಿರುದ್ಧವಾಗಿರುವ ಅಸತ್ಯ ಸ್ವರೂಪವು ಅಸತ್-ಜಡ-ದುಃಖ ರೂಪವಾಗಿರುತ್ತದೆ ಎಂದು ಅರ್ಥವಾಗುವುದರಿಂದ ಸಾಕ್ಷಿಯು ಅಸತ್-ಜಡ-ದುಃಖ ಸ್ವರೂಪದ್ದಾಗಿರುತ್ತದೆ ಎಂದು ಅರ್ಥೈಸಬಾರದು.

**ಓ.ಸಂ.109 :** ಕಣ್ಣುಗಳು ದೃಶ್ಯವಿದ್ದಾಗ ನೋಡುವ ಶಕ್ತಿಯನ್ನು ಹೊಂದಿವೆ. ದೃಶ್ಯವೇ ಇಲ್ಲದಾಗ ಕಣ್ಣುಗಳು ಅಂಧತ್ವವನ್ನು ಅನುಭವಿಸುವುದಿಲ್ಲ..

**ವಿವರಣೆ :** ಸರ್ವ ಸಾಕ್ಷಿಯಾದ ಆತ್ಮನ ಸಕಲನಾಮಗಳು (ಸಾಕ್ಷ್ಯ) ನಾಶವಾದ ಮೇಲೆ ತನ್ನ ಸಾಕ್ಷಿತ್ವವನ್ನು (ಜ್ಞಾತೃತ್ವ) ಕಳೆದುಕೊಂಡರೂ ಆತ್ಮನ ಚೈತನ್ಯವಾಗಲೀ ಅಥವಾ ಅದರ ಅಸ್ತಿತ್ವಕ್ಕಾಗಲೀ ನಾಶವಿಲ್ಲವೆಂದು ಹೇಳಲು ಒಂದು ದೃಷ್ಟಾಂತವನ್ನು ಈ ಓವೀಯಲ್ಲಿ ಕೊಡಲಾಗಿದೆ. ನಮ್ಮ ಕಣ್ಣುಗಳಿಂದ ಜಗತ್ತಿನ ಹೊರ ದೃಶ್ಯಗಳನ್ನು ನೋಡುತ್ತೇವೆ. ಆದರೆ ಕಣ್ಣುಗಳು ನೋಡಲು ಅವುಗಳಿಗೆ ಬೆಳಕಿನ ಅವಶ್ಯಕತೆಯು ಇರುತ್ತದೆ. ಬೆಳಕಿಲ್ಲದೇ ಅವು ನೋಡಲಾರವು. ರಾತ್ರಿಯಲ್ಲಿ ಅವುಗಳಿಗೆ ದೀಪದ ಬೆಳಕಾದರೂ ಬೇಕಾಗುತ್ತದೆ. ರಾತ್ರಿ ಹೊತ್ತಿನಲ್ಲಿ ವಿದ್ಯುತ್ ದೀಪಗಳು ಹೋದ ಕೂಡಲೇ ದೃಶ್ಯಗಳು ಕಾಣದಂತಾಗುವುವು. ಆ ಕಾಲದಲ್ಲಿ ಕಣ್ಣುಗಳಿಗೆ ಅಂಧತ್ವವೇನೂ ಬರುವುದಿಲ್ಲ. ಆಗ ಅವುಗಳ ಶಕ್ತಿಯು ಸುಪ್ತವಾಗಿರುತ್ತದೆ. ಏಕೆಂದರೆ ಪುನಃ ವಿದ್ಯುತ್ ಬಂದ ಕೂಡಲೇ ಕಣ್ಣುಗಳು ಮೊದಲಿನಂತೆ ನೋಡಲು ಪ್ರಾರಂಭಿಸುತ್ತವೆ.

**ಓ.ಸಂ.110 :** ಹಾಗೆಯೇ ಜ್ಞೇಯವು ಇರುವವರೆಗೆ ಜ್ಞಾತೃವೂ ಇರುವಂತೆ ತೋರುವುದು. ಯಾವುದೇ ಜ್ಞೇಯವೇ ಇಲ್ಲದಾಗ ಜ್ಞಾತೃತ್ವವು ನಾಶವಾದರೂ ಜ್ಞಾತೃವಿನ ಚೈತನ್ಯವು ಅಂದರೆ ಶುದ್ಧಜ್ಞಾನವು ಸುಪ್ತವಾಗಿರುವುದೇ ಹೊರತು ನಾಶವಾಗುವುದಿಲ್ಲ.

**ವಿವರಣೆ :** ಹೇಗೆ ದೃಶ್ಯವು ಇರುವವರೆಗೆ ಕಣ್ಣುಗಳಿಗೆ ನೋಡುವ ಶಕ್ತಿ ಇರುತ್ತದೆಯೋ ಹಾಗೆ ಜ್ಞೇಯವು ಇರುವವರೆಗೆ ಅಂದರೆ ತಿಳಿಯಲ್ಪಡುವುದು ಇರುವವರೆಗೆ ತಿಳಿಯುವವನು ಅಂದರೆ ಜ್ಞಾತೃವೂ ಇರುವನು. ದೃಶ್ಯವಿಲ್ಲದಾಗ ಹೇಗೆ ಕಣ್ಣುಗಳು ನೋಡುವ ಶಕ್ತಿ ಕಳೆದುಕೊಂಡಂತೆ ಇರುತ್ತದೆಯೋ ಹಾಗೆಯೇ ಜ್ಞೇಯ ಇಲ್ಲದಾಗ ಜ್ಞಾತೃವು ಇರಲಾರನು. ಕತ್ತಲಿದ್ದಾಗಲೂ ಕಣ್ಣು ನೋಡದಿದ್ದರೂ ಹೇಗೆ ಕಣ್ಣಿನ ನೋಡುವ ಶಕ್ತಿಯು

ಕಣ್ಣಿನಲ್ಲಿ ಸುಪ್ತವಾಗಿರುತ್ತದೋ ಹಾಗೆಯೇ ಜ್ಞೇಯವಿಲ್ಲದಾಗ ಜ್ಞಾತೃವು ತನ್ನ ಜ್ಞಾತೃತ್ವವನ್ನು ಕಳೆದುಕೊಂಡಂತೆ ಅನ್ನಿಸಿದರೂ ಅದರ ಚೈತನ್ಯವು ಅಥವಾ ವೃತ್ತಿರಹಿತ ಶುದ್ಧಜ್ಞಾನವು ಆತ್ಮನ ಸ್ವರೂಪವೇ ಆಗಿದ್ದು ಅದರಲ್ಲೇ ಲೀನವಾಗುತ್ತದೆ. ಅಂದರೆ ಎಲ್ಲವನ್ನು ತಿಳಿಯುವ ಸಾಕ್ಷಿಯು ತನ್ನ ತಿಳಿಯುವ ಕ್ರಿಯೆಯನ್ನು ನಿಲ್ಲಿಸಿ ಸಾಕ್ಷಿತ್ವವನ್ನು ಕಳೆದುಕೊಂಡರೂ ಶುದ್ಧ ಆತ್ಮನಾಗಿ ತಾನೇ ತಾನಾಗಿ ಬ್ರಹ್ಮಸ್ವರೂಪವಾಗಿರುತ್ತದೆ. ಹೀಗೆ ಸಾಕ್ಷಿತ್ವವು ನಾಶವಾದಮೇಲೆ ಅದು ಜ್ಞಾನವನ್ನು (ಚೈತನ್ಯವನ್ನು) ಕಳೆದುಕೊಂಡು ಅಜ್ಞಾನ ಸ್ವರೂಪವಾದ ಜಡವಾಗುವುದು.

**ಓ.ಸಂ.111 :** ಈ ರೀತಿ ಕೊನೆಗೆ ಉಳಿಯುವ ಅಸ್ತಿತ್ವವು ಚೈತನ್ಯ ಸ್ವರೂಪವೂ ಆಗಿರಲೇಬೇಕಾಗಿರುವುದರಿಂದ ಅದು ಭಾತಿಯಾಗಿರುತ್ತದೆ. ಇನ್ನು ಸರ್ವರಲ್ಲೂ ತಮ್ಮನ್ನು ತಾವು ಪ್ರೀತಿಸಿದಷ್ಟು ಬೇರೆ ಯಾವುದನ್ನೂ ಪ್ರೀತಿಸುವುದಿಲ್ಲವೆಂಬುದು ತಿಳಿದಿರುತ್ತದೆ.

**ವಿವರಣೆ :** ಈವರೆಗೆ ನಾಮ–ರೂಪಗಳು ನಾಶವಾದರೂ ಅವುಗಳಲ್ಲಿರುವ ಅಸ್ತಿತ್ವವು ನಾಶವಾಗುವುದಿಲ್ಲವೆಂದೂ ಹಾಗೂ ಅದು ನಿತ್ಯವಾಗಿರುವುದೆಂದೂ ತೋರಿಸಲಾಗುತ್ತದೆ. ನಾಮರೂಪಗಳ ಉತ್ಪತ್ತಿ–ನಾಶಗಳನ್ನು ತಿಳಿಯಲು ಈ ನಿತ್ಯ ಅಸ್ತಿತ್ವವು ಚೈತನ್ಯವಾಗಿರಲೇಬೇಕಾಗುತ್ತದೆ. ತಿಳಿಯಲ್ಪಡುವ ಸಾಕ್ಷ್ಯವಿಲ್ಲದಿದ್ದರೂ ಕೂಡ ಈ ಚೈತನ್ಯಕ್ಕೆ ತಿಳಿಯುವವನಾದ 'ಸಾಕ್ಷಿ' ಎನ್ನುವ 'ನಾಮ'ವು ಸಲ್ಲದಿದ್ದರೂ ಆ ತಿಳಿಯುವ ಶಕ್ತಿಯು ಚೈತನ್ಯದಲ್ಲೇ ಉಳಿಯುವುದರಿಂದ ಅದು 'ಸ್ವಪ್ರಕಾಶ'ವೆಂದು ಕರೆಯಲ್ಪಟ್ಟು ತನ್ನನ್ನು ತಾನು ಅರಿಯುವ ಸಾಮರ್ಥ್ಯವನ್ನು ಹೊಂದಿರುತ್ತದೆ. ಇದನ್ನು 'ಭಾತಿ' ಎಂದೂ ತಿಳಿಯಬಹುದು. ಹಾಗೆಯೇ ಇದು ಎಲ್ಲ ಜೀವರಲ್ಲೂ ಇರುವ ಅತ್ಯಂತ ಪ್ರೀತಿಪಾತ್ರವಾದ ಆತ್ಮವಾಗಿರುತ್ತದೆ. ಪ್ರತಿಜೀವಿಯು ಮಾಡುವ ಕ್ರಿಯೆಗಳೆಲ್ಲವೂ ತನ್ನ ಆತ್ಮನ ಮೇಲಿನ ಪ್ರೀತಿಗಾಗಿಯೇ ಇರುತ್ತದೆ. ಇದನ್ನೇ ವ್ಯವಹಾರದಲ್ಲಿ 'ಸ್ವಾರ್ಥ'ವೆಂದು ಕರೆಯುತ್ತಾರೆ. ಹೀಗೆ ಆತ್ಮವು ಅಥವಾ ಬ್ರಹ್ಮವು 'ಸಾಕ್ಷ್ಯ'ದ ಮೂಲವಾದ ಅಥವಾ ಅಧಿಷ್ಠಾನವಾದ ಅಸ್ತಿ–ಭಾತಿ–ಪ್ರಿಯ ಸ್ವರೂಪವೇ ಆಗಿರುತ್ತದೆ. ಅದನ್ನೇ ಸತ್–ಚಿತ್–ಆನಂದವೆಂದೂ ಕರೆಯುತ್ತಾರೆ.

**ಓ.ಸಂ.112 :** ಅಥವಾ ಆತ್ಮ ಅಂದರೆ ಬ್ರಹ್ಮತತ್ತ್ವವು ಎರಡನೆಯದಿಲ್ಲದ ಅದ್ವಯ ತತ್ತ್ವವಾಗಿದ್ದು ಅದಕ್ಕೆ ಲೌಕಿಕ ಸುಖ–ದುಃಖಗಳು ಇರುವಂತಿಲ್ಲ. ಏಕೆಂದರೆ ಬೇರೆ ಇನ್ನೊಂದಿಲ್ಲದಿರುವುದರಿಂದ ತಾನೇ ತಾನಾಗಿರುವ ನಿರ್ಭಯವಾದ ಅದ್ವಯ ಬ್ರಹ್ಮನು ಆನಂದ ಸ್ವರೂಪನಿದ್ದಾನೆ.

**ವಿವರಣೆ :** ಜೀವಿಯ ಪ್ರತಿಯೊಂದು ಭಾವನಾ ವೃತ್ತಿಯು ಸುಖ ಅಥವಾ ದುಃಖ ಸ್ವರೂಪವಾಗಿರುತ್ತದೆ. ಇಲ್ಲಿ ಸುಖ ಮತ್ತು ದುಃಖಗಳು ವ್ಯಾವಹಾರಿಕವಾಗಿ ಕೇವಲ ತರ–ತಮಗಳು ವ್ಯತ್ಯಾಸ ಹೊಂದಿರುತ್ತವೆ ಮತ್ತು ಸುಖ–ದುಃಖಗಳು ಒಂದಕ್ಕೊಂದು ಸಾಪೇಕ್ಷವಾಗಿರುತ್ತವೆ. ಅಂದರೆ ಕಡಿಮೆ ಸುಖವನ್ನು ಹೆಚ್ಚು ಸುಖಕ್ಕೆ ಹೋಲಿಸುವುದರಿಂದ ಕಡಿಮೆ ಸುಖವನ್ನು ದುಃಖವೆಂದು ತಿಳಿಯುತ್ತೇವೆ. ಹಾಗೆಯೇ ಕಡಿಮೆ ದುಃಖವನ್ನು ಹೆಚ್ಚು ದುಃಖಕ್ಕೆ ಹೋಲಿಸಿದರೆ ಕಡಿಮೆ ದುಃಖವನ್ನು ಸುಖವೆಂದು ತಿಳಿಯುತ್ತೇವೆ. ಅಂದರೆ ಪ್ರತಿಯೊಂದು

ಭಾವನಾ ವೃತ್ತಿಯೂ ಸುಖ ಮತ್ತು ದುಃಖಗಳ ಮಿಶ್ರಣದಿಂದ ಆಗಿರುತ್ತದೆ. ಆತ್ಮಾ ಮತ್ತು ಅನಾತ್ಮರ ಅನ್ಯೋನ್ಯ ಅಧ್ಯಾಸದಿಂದಲೇ ಹೀಗೆ ಸುಖ-ದುಃಖಗಳ ಮಿಶ್ರಣವು ಆಗಿರುತ್ತದೆ. ಅಂದರೆ ಸುಖವು ಆತ್ಮನಿಂದಲೂ ದುಃಖವು ಜಡದಿಂದಲೂ ಉಂಟಾಗಿರುತ್ತದೆ. ಇಡೀ ಜಗತ್ತು ಜಡವಾಗಿದ್ದು ಇದರ ಅಧಿಷ್ಠಾನವು ಅಸ್ತಿ-ಭಾತಿ-ಪ್ರಿಯ ಸ್ವರೂಪದ ಆತ್ಮನೇ ಆಗಿರುತ್ತದೆ. ನಾಮ-ರೂಪಾತ್ಮಕ ಜಗತ್ತು ನಾಶವಾದ ಮೇಲೆ ಸುಖ-ದುಃಖಗಳೂ ನಾಶವಾಗುತ್ತವೆ. ಉಳಿಯುವ ಅದ್ವಯ ಬ್ರಹ್ಮನೇ ಅಸ್ತಿ-ಭಾತಿ-ಪ್ರಿಯ ಸ್ವರೂಪನಾಗಿರುತ್ತಾನೆ. ಅಂದರೆ ಸಚ್ಚಿದಾನಂದ ಸ್ವರೂಪದವನು ಆಗಿ ಉಳಿಯುತ್ತಾನೆ.

**ಓ.ಸಂ.113 :** ಈ ರೀತಿ ಜಗತ್ತಿನ ಅನುಭವವನ್ನು ವಿಶ್ಲೇಷಣೆ ಮಾಡುವುದರಿಂದ ಜಗತ್ತಿನ ಅಧಿಷ್ಠಾನವು ಅಸ್ತಿ-ಭಾತಿ-ಪ್ರಿಯ ಸ್ವರೂಪವೆಂದು ತಿಳಿದುಕೊಂಡು ಇಡೀ ಜಗತ್ತನ್ನು ಪರಮಾತ್ಮನು ತನ್ನ ಅಸ್ತಿ-ಭಾತಿ-ಪ್ರಿಯತ್ವಗಳಿಂದ ವ್ಯಾಪಿಸಿಬಿಟ್ಟಿರುವನೆಂದು ತಿಳಿಯಬೇಕು. ಇದೇ ಭಗವಂತನ ಪ್ರತಿಷ್ಠಾಪನೆಯಾಗಿರುತ್ತದೆ.

**ವಿವರಣೆ :** ಅರ್ಚನಾ ಭಕ್ತಿಯಲ್ಲಿ ಪರಮಾತ್ಮನನ್ನು ಜಗತ್ತಿನಲ್ಲಿ ಹೇಗೆ ಪ್ರತಿಷ್ಠಾಪಿಸಬೇಕು ಎನ್ನುವುದನ್ನು ಇಲ್ಲಿಯವರೆಗೆ ತಿಳಿಸಿ ಈ ಓವೀಯಲ್ಲಿ ಅದರ ಸಮಾರೋಪವನ್ನು ಮಾಡಲಾಗಿದೆ. ನಾಮ-ರೂಪಾತ್ಮಕವಾದ ಈ ವಿಶ್ವವು ಕಾರ್ಯಕಾರಣ ಪ್ರಕ್ರಿಯೆಗೆ ಸಿಕ್ಕು ವಿಕಾರವಾಗುತ್ತಿರುವುದು ಮತ್ತು ನಾಶವಾಗುತ್ತಿರುವುದು ನಮಗೆ ಗೋಚರವಾಗುತ್ತಿರುತ್ತದೆ. ಆದರೆ ಅವುಗಳಲ್ಲಿ ಅವಿಭಾಜ್ಯವಾಗಿ ತೋರುವ ಅಸ್ತಿ-ಭಾತಿ-ಪ್ರಿಯತ್ವಗಳು ಅವಿನಾಶಿಯಾಗಿರುತ್ತವೆ ಎಂದೂ ತಿಳಿದುಕೊಳ್ಳಬೇಕು. ಈ ಅಸ್ತಿ-ಭಾತಿ-ಪ್ರಿಯತ್ವಗಳೇ ಸಚ್ಚಿದಾನಂದ ಸ್ವರೂಪನು ಎಂದೂ ಅವನು ಇಡೀ ವಿಶ್ವವನ್ನು ವ್ಯಾಪಿಸಿದ್ದಾನೆಂದೂ ತಿಳಿದುಕೊಳ್ಳುವುದೇ ಪರಮಾತ್ಮನನ್ನು ವಿಶ್ವದಲ್ಲಿ ಪ್ರತಿಷ್ಠಾಪಿಸುವುದೆಂದೂ ಆಗಿರುತ್ತದೆ. ಮುಂದಿನ ಓವೀಯ ಕೊನೆಯ ಚರಣವನ್ನು ಈ ಓವೀಯಲ್ಲಿಯೇ ತೆಗೆದುಕೊಂಡು ವಿವರಿಸಲಾಗಿದೆ.

**ಓ.ಸಂ.114 :** ಈ ರೀತಿ ಸರ್ವವ್ಯಾಪಕನಾದ ಅಸ್ತಿ-ಭಾತಿ-ಪ್ರಿಯತ್ವ ಉಳ್ಳ ಅದ್ವಯ ಪರಮಾತ್ಮನನ್ನು ಪೂಜಿಸುವಾಗ ಪೂಜ್ಯ-ಪೂಜಕ ಭಾವವು ಇರುವುದಿಲ್ಲವಾದ್ದರಿಂದ ಅದ್ವಯ ಭಾವದಿಂದ ಅಪ್ರಯತ್ನವಾಗಿ ಪೂಜೆಯು ತನಗೆ ತಾನೇ ಘಟಿಸುತ್ತದೆ. ನಾಮ-ರೂಪಗಳ ನಿರಾಕರಣೆಯೇ ಈ ಪರಮಾತ್ಮನಿಗೆ ಮಾಡುವ ಸರ್ವಸಮರ್ಪಣೆ.

**ವಿವರಣೆ :** ಈ ಓವೀಯ ಪ್ರಥಮ ಚರಣವನ್ನು ಹಿಂದಿನ ಓವೀಯಲ್ಲೇ ವಿವರಿಸಲಾಗಿದೆ. ಈ ಓವೀಯಲ್ಲಿ ಜ್ಞಾನನಿಷ್ಠನು ಮಾಡಬೇಕಾದ ಪೂಜಾಕ್ರಮವನ್ನು ವಿವರಿಸಲಾಗಿದೆ. ಜ್ಞಾನನಿಷ್ಠನು ಜೀವ ಜಗತ್ತುಗಳ ನಾಮ-ರೂಪಗಳನ್ನು ನಿರಾಕರಣೆ ಮಾಡಿಯೇ ಅದ್ವಯವಾದ ಸರ್ವವ್ಯಾಪಕವಾದ ಅಸ್ತಿ-ಭಾತಿ-ಪ್ರಿಯತ್ವವೇ ಪರಮಾತ್ಮ

ಪ್ರತಿಷ್ಠಾಪಿಸಿರುತ್ತಾನೆ. ಹೀಗೆ ಜೀವ ಜಗತ್ತುಗಳಿಂದ ಕೇವಲ ಸ್ವರೂಪವೆಂದು ತಿಳಿದು ಜಗತ್ತಿನಲ್ಲಿ ಈ ದೇವನನ್ನು ಪ್ರತಿಷ್ಠಾಪಿಸಿರುತ್ತಾನೆ. ಹೀಗೆ ಜೀವ ಜಗತ್ತುಗಳಿಂದ ಕೇವಲ ಪರಮಾತ್ಮನು ಉಳಿದಾಗ ಪೂಜಿಸುವ ಪೂಜಕನಿಗಾಗಲೀ ಮತ್ತು ಪೂಜಿಸಲ್ಪಡುವ ಪರಮಾತ್ಮನ ವಿಗ್ರಹಕ್ಕಾಗಲೀ ಇರಲೇಬೇಕಾದ ಸಂಬಂಧವಾದ ದ್ವೈತಭಾವವು ಇರಲು ಸಾಧ್ಯವಿಲ್ಲ. ಹೀಗಿದ್ದಾಗ ಜ್ಞಾನನಿಷ್ಠನಿಗೆ ಕೇವಲ ಸರ್ವವ್ಯಾಪಕನಾದ ಅದ್ವಯ ಪರಮಾತ್ಮ ಭಾವವು ಮಾತ್ರ ಉಳಿಯುತ್ತದೆ. ಈ ಅದ್ವಯ ಭಾವವನ್ನು ಪಡೆಯುವುದೇ ಪೂಜೆಯಾಗಿದೆ. ಇಲ್ಲಿ ಪ್ರತಿಕ್ಷಣವೂ ಕೂಡ ನಾಮ-ರೂಪಗಳ ನಿರಾಕರಣೆಯು ಅನಿವಾರ್ಯವಾಗಿದ್ದು ಅದೇ ಇಲ್ಲಿ ಪೂಜೆಯಲ್ಲಿ ಬೇಕಾದ ಸರ್ವಸಮರ್ಪಣ ಭಾವವಾಗಿದೆ. ಇಲ್ಲಿ ಅರಿವು ಬಹಿರ್ಮುಖವಾದಾಗ ಅದಕ್ಕೆ ಸರ್ವವ್ಯಾಪಕತ್ವವೂ, ಅಂತರ್ಮುಖವಾದಾಗ ಅದೇ ಶುದ್ಧಆತ್ಮ ಸ್ವರೂಪವೂ ಆಗುತ್ತದೆ.

**ಓ.ಸಂ.115 :** ಈ ಜ್ಞಾನನಿಷ್ಠೆಯಲ್ಲಿ ಪರಮಾತ್ಮನನ್ನು ಆಹ್ವಾನಿಸುವ ಕೆಲಸವಿಲ್ಲ. ಏಕೆಂದರೆ ಅವನು ಪರಿಪೂರ್ಣನಾಗಿರುವುದರಿಂದ ಅವನಿಲ್ಲದ ಸ್ಥಳವಿಲ್ಲ. ಹಾಗೆಯೇ ಸರ್ವ ನಾಮ-ರೂಪಗಳಿಗೆ ಆಸನನಾಗಿರುವ ಅಂದರೆ ಅಧಿಷ್ಠಾನನಾಗಿರುವ ಅವನಿಗೆ ಬೇರೆ ಆಸನವಿರಲಾರದು.

**ವಿವರಣೆ :** ಮುಂದಿನ ಓವೀಯ ಪ್ರಥಮ ಚರಣವನ್ನು ಇಲ್ಲಿಯೇ ತೆಗೆದುಕೊಂಡು ಅರ್ಥೈಸಲಾಗಿದೆ. ಈ ಓವೀಯಲ್ಲಿ ಷೋಡಶೋಪಚಾರಗಳಾದ ದೇವರನ್ನು ಆಹ್ವಾನಿಸುವುದು, ಅಂದರೆ ಸ್ವಾಗತಿಸುವುದು ಮತ್ತು ಆಸನದ ವ್ಯವಸ್ಥೆಯನ್ನು ಮಾಡುವುದು, ಅಂದರೆ ದೇವರನ್ನು ಕೂಡಿಸುವುದು - ಹೀಗೆ ಜ್ಞಾನನಿಷ್ಠೆಯ ಸಾಧಕರು ಅವುಗಳನ್ನು ಹೇಗೆ ಮಾಡಬೇಕೆಂಬುದರ ವಿವರಣೆಯನ್ನು ಕೊಡಲಾಗಿದೆ. ಈ ಜ್ಞಾನ ಮಾರ್ಗದಲ್ಲಿ ಪರಿಪೂರ್ಣನಾದ ಮತ್ತು ಸರ್ವ ವ್ಯಾಪಿಯಾದ ದೇವನನ್ನು ಆಹ್ವಾನಿಸಲು ಸಾಧ್ಯವಿಲ್ಲ. ಏಕೆಂದರೆ ಅವನಿಲ್ಲದ ಸ್ಥಳವು ಇರುವುದಿಲ್ಲ. ಅಸ್ತಿ-ಭಾತಿ-ಪ್ರಿಯ ಸ್ವರೂಪನಾಗಿರುವ ಅವನು ಜೀವ-ಜಗತ್ತುಗಳಲ್ಲಿ ಓತ-ಪ್ರೋತವಾಗಿ ತುಂಬಿಕೊಂಡಿರುವನು. ಅವನಿಲ್ಲದ ಸ್ಥಳವು ಇರಲು ಸಾಧ್ಯವಿಲ್ಲ. ಅವನನ್ನು ಆಹ್ವಾನಿಸಬೇಕಾದರೆ ಅವನಿಲ್ಲದಿರುವ ಸ್ಥಳವನ್ನು ಹುಡುಕಬೇಕಾಗುವುದು. ಆದ್ದರಿಂದ ಇದು ಸಾಧ್ಯವಿಲ್ಲ. ಹಾಗೆಯೇ ಎಲ್ಲ ನಾಮ-ರೂಪಗಳಿಗೂ ಅಧಿಷ್ಠಾನವಾಗಿರುವುದೇ ಅವನ 'ಆಸನ'ವಾಗಿರುತ್ತದೆ. ಹೀಗಾಗಿ ಅವನಿಗೆ ಪ್ರತ್ಯೇಕವಾದ ಆಸನದ ವ್ಯವಸ್ಥೆಮಾಡುವುದು ಸಾಧ್ಯವಿಲ್ಲ. ಆದ್ದರಿಂದ ಜ್ಞಾನನಿಷ್ಠರಿಗೆ ಯಾವ ಅರ್ಥದಲ್ಲಿ 'ಆವಹನ' ಹಾಗೂ 'ಆಸನ'ಗಳನ್ನು ಕಲ್ಪಿಸಬೇಕೆಂಬುದು ಪರಮಾತ್ಮ ಸ್ವರೂಪದ ಸ್ಮರಣೆಯಿಂದಲೇ ತಿಳಿಯುತ್ತದೆ.

**ಓ.ಸಂ.116:** ಇದೇ ರೀತಿ ಪೂಜಾ ವಿಧಿಗೆ ಅನುಸರಿಸಿ ಸ್ವಭಾವದಿಂದ ನಿತ್ಯ ಶುದ್ಧನಾದ ಪರಮಾತ್ಮನಿಗೆ ಪಾದ್ಯ, ಅರ್ಘ್ಯ ಹಾಗೂ ಅಭಿಷೇಕಗಳನ್ನು ಕೈಗೊಳ್ಳಲು ಸಾಧ್ಯವಿಲ್ಲ.

**ವಿವರಣೆ :** ಷೋಡಶೋಪಚಾರಗಳಾದ ಪಾದ್ಯ, ಅರ್ಘ್ಯ ಮತ್ತು ಅಭಿಷೇಕಗಳನ್ನು ದೇವರಿಗೆ ಸಮರ್ಪಿಸುವ ಬಗೆಯನ್ನು ಈ ಓವೀಯಲ್ಲಿ ತಿಳಿಸಲಾಗಿದೆ. ಪರಮಾತ್ಮನು ಆಸೀನನಾದ ನಂತರ ಅವನ ಕಾಲನ್ನು ಶುದ್ಧಮಾಡಲು ನೀರಿನಿಂದ ತೊಳೆಯುತ್ತಾರೆ. ಇದಕ್ಕೆ 'ಪಾದ್ಯ'ವೆಂದು ಹೆಸರು. ನಿತ್ಯ ಶುದ್ಧನಾದ ಪರಮಾತ್ಮನ ಕಾಲನ್ನು ಶುದ್ಧಿಮಾಡುವ ಅವಶ್ಯಕತೆಯಿರುವುದಿಲ್ಲ. ಅಲ್ಲದೇ ಅವನಿಗೆ ಸ್ಥೂಲ-ಸೂಕ್ಷ್ಮ ದೇಹಗಳಿರುವುದಿಲ್ಲ ("ಅಕಾಯಂ ಅವ್ರಣಂ ಅಸ್ನಾವಿರಂ" – ಈಶೋಪನಿಷದ್). ಆದ್ದರಿಂದ ಶುದ್ಧ ಚೈತನ್ಯನಾದ ಅವನಲ್ಲಿ ಯಾವ ಅಂಗಗಳೂ ಇಲ್ಲದಿರುವುದರಿಂದ ಅವನಲ್ಲಿ ಸ್ವಗತಭೇದವಿರುವುದಿಲ್ಲ. ಹೀಗಾಗಿ ಪಾದ್ಯವು ತಾನಾಗಿಯೇ ಜರುಗುತ್ತದೆ. 'ಅರ್ಘ್ಯ' ವೆಂದರೆ ಪರಮಾತ್ಮನಿಗೆ ಕುಡಿಯಲು ಜಲವನ್ನು ಸಮರ್ಪಣೆ ಮಾಡುವುದು ಆಗಿರುತ್ತದೆ. ವಿಶ್ವದಲ್ಲಿರುವ ಸಕಲ ಜಲವೂ ಅವನ ಅಧಿಷ್ಠಾನದಲ್ಲೇ ಇರುವುದರಿಂದ ಅವನ ವಶದಲ್ಲೇ ಇರುತ್ತದೆ. ಹೀಗಾಗಿ ನಮ್ಮದಾಗಿ ಯಾವುದೇ ಜಲವೂ ಇರುವುದಿಲ್ಲ. ಹೀಗೆ ತಿಳಿದುಕೊಂಡಾಗ ತಾನಾಗಿಯೇ ಅರ್ಘ್ಯಕೊಟ್ಟಂತೆ ಆಗುತ್ತದೆ. ಕೊನೆಯದಾಗಿ ನಿತ್ಯ ಶುದ್ಧನಾದ ಅವನಿಗೆ ಅಭಿಷೇಕದಿಂದ ಶುದ್ಧಿಮಾಡಿಸುವುದೂ ಕೂಡ ಹಾಸ್ಯಾಸ್ಪದವಾಗಿರುತ್ತದೆ. ಆದ್ದರಿಂದ ಪರಮಾತ್ಮನ ಸ್ವರೂಪದ ಕಾರಣ ಧ್ಯಾನ, ಸ್ತೋತ್ರ – ಇವೆಲ್ಲವೂ ತನಗೆ ತಾನೇ ಘಟಿಸಿದಂತಾಗುತ್ತದೆ.

**ಓ.ಸಂ.117:** ಪರಮಾತ್ಮನು ಸಕಲ ಸುವಾಸನಾಯುಕ್ತ ಪದಾರ್ಥಗಳ ( ಗಂಧಗಳ ) ಅಧಿಷ್ಠಾನವೇ ಆಗಿರುತ್ತಾನೆ. ಆದ್ದರಿಂದ ಅವನಿಗೆ ಅನ್ಯ ಗಂಧದ ಅವಶ್ಯಕತೆಯೇ ಇರುವುದಿಲ್ಲ. ಪರಮಾತ್ಮನನ್ನು ನಾಶ (ಕ್ಷತ) ರಹಿತನೆಂದು ತಿಳಿದುಕೊಳ್ಳುವುದೇ ಅವನಿಗೆ ಅಕ್ಷತೆಯನ್ನು ಅರ್ಪಿಸಿದಂತಾಗುತ್ತದೆ.

**ವಿವರಣೆ :** ಈ ಓವೀಯಲ್ಲಿ ಪರಮಾತ್ಮನಿಗೆ ಗಂಧ ಹಾಗೂ ಅಕ್ಷತೆಗಳ ಸಮರ್ಪಣೆಯು ಅನವಶ್ಯಕವೆಂದು ತಿಳಿಸಲಾಗಿದೆ. ಪರಮಾತ್ಮನೇ ಸಕಲ ನಾಮರೂಪಗಳಾಗಿ ತೋರುತ್ತಿದ್ದಾನೆ. ಆಕಾಶಾದಿ ಪಂಚಭೂತಗಳೂ ಅವನೇ ಆಗಿದ್ದು ಪೃಥ್ವಿ ಹಾಗೂ ಅದರ ಗುಣವಾದ ಗಂಧಗಳ ಅಸ್ತಿ-ಭಾತಿ-ಪ್ರಿಯ ಸ್ವರೂಪಗಳಾಗಿ ಅವನೇ ಎಲ್ಲ ಕಡೆ ತೋರುತ್ತಿದ್ದಾನೆ. ಹೀಗಾಗಿ ಅವನನ್ನು ಬಿಟ್ಟು ಬೇರಾವ ಸುಗಂಧ ಅಥವಾ ಸುವಾಸನಾಯುಕ್ತ ಗಂಧಗಳು ಇರುವಂತಿಲ್ಲ. ಆದ್ದರಿಂದ ಅವನಿಗೆ ಬೇರೆ ಗಂಧದ ಅರ್ಪಣೆಯ ಅವಶ್ಯಕತೆಯೂ ಇರುವುದಿಲ್ಲ. ಹಾಗೆಯೇ 'ಕ್ಷತ' ವೆಂದರೆ ಗಾಯಗೊಳ್ಳುವುದು, ವಿಕಾರವಾಗುವುದು, ನಾಶವಾಗುವುದು ಎಂದರ್ಥ. ಪರಮಾತ್ಮನು ಸಕಲ ನಾಮ-ರೂಪಗಳ ನಾಶವನ್ನು ನೋಡುವ ಅವಿನಾಶಿಯಾಗಿದ್ದಾನೆ. ಇಂತಹವನಿಗೆ 'ಅಕ್ಷತೆ'ಯ ಸಮರ್ಪಣೆಯೂ ಕೂಡ ಅರ್ಥಹೀನವಾಗಿರುತ್ತದೆ.

**ಓ.ಸಂ.118:** ಪರಮಾತ್ಮ ತತ್ತ್ವವನ್ನು ತಿಳಿಯಲು ಜ್ಞಾನನಿಷ್ಠನು ನಾಮ-ರೂಪವೆಂಬ ಧೂಪವನ್ನು ಉರಿಸಿ ನಾಶಮಾಡುತ್ತಾನೆ ಇದರಿಂದ ಪರಮಾತ್ಮನನ್ನು ಅರಿತಾಗ ಪರಮಾತ್ಮನು ಅಖಂಡವಾಗಿ ಪ್ರಕಾಶಿಸುವ ನಿತ್ಯ

ಸ್ವಯಂ ಜ್ಯೋತಿಯೆಂದು ತಿಳಿಯುತ್ತದೆ. ಆದ್ದರಿಂದ ಸಕಲ ಪ್ರಕಾಶಗಳನ್ನು ಪ್ರಕಾಶಿಸುವ ಪರಮಾತ್ಮನೆಂಬುವನಿಗೆ ಬೇರೇ ದೀಪವು ಬೇಕಾಗಿಲ್ಲ.

**ವಿವರಣೆ :** ಈ ಓವೀಯಲ್ಲಿ ಸಾಮಾನ್ಯವಾಗಿ ಪೂಜೆಯ ಅಂಗವಾಗಿರುವ ದೀಪ ಸಮರ್ಪಣೆಯು ಜ್ಞಾನನಿಷ್ಠನಿಗೆ ಅನಾವಶ್ಯಕವೆಂದು ತಿಳಿಸಲಾಗಿದೆ. ಜ್ಞಾನನಿಷ್ಠ ಸಾಧಕನು ತನ್ನ ಸಾಧನೆಯ ಅಂಗವಾಗಿ ಶ್ರವಣ-ಮನನಗಳಿಂದ ವಿಕಾರವಾಗಿ ನಾಶವಾಗುತ್ತಿರುವ ದೇಹಸಹಿತ-ಜಗತ್ತು ನಾಮ-ರೂಪಾತ್ಮಕವಾಗಿದ್ದು ಅದು ಸತ್ಯವಲ್ಲವೆಂಬ ನಿರ್ಣಯಕ್ಕೆ ಬರುತ್ತಾನೆ. ಹೇಗೆ ಉರಿದ ಕರ್ಪೂರವು (ಧೂಪವು) ಮೊದಲು ಕಂಡುಬಂದು ನಂತರ ಇಲ್ಲವಾಗುತ್ತದೋ ಹಾಗೆ ಅಜ್ಞಾನದಿಂದ ನಾಮ-ರೂಪಗಳು ಸತ್ಯವೆಂದು ತಿಳಿದವನು ಜ್ಞಾನ ಬಂದ ನಂತರ ನಾಮ-ರೂಪಗಳೆಲ್ಲ ತನ್ನ ಭ್ರಾಂತಿಯಿಂದ ಸೃಷ್ಟಿಯಾದವುಗಳೆಂದು ತಿಳಿಯುತ್ತಲೇ ಅವುಗಳ ಅಧಿಷ್ಠಾನವಾದ ಅಸ್ತಿ-ಭಾತಿ-ಪ್ರಿಯ ಸ್ವರೂಪವಾಗಿರುವ ತನ್ನ ಆತ್ಮನು ಸಕಲವನ್ನೂ ಪ್ರಕಾಶಿಸುವ ಅಖಂಡವಾದ ನಿತ್ಯ ಸ್ವಯಂ ಜ್ಯೋತಿಯೆಂದು ತಿಳಿದುಕೊಳ್ಳುತ್ತಾನೆ. ದೀಪದ ಬೆಳಕಿನಿಂದ ನೋಡುವುದು ಸಾಧ್ಯವಾಗುತ್ತದೆ. ಆದರೆ ಚೈತನ್ಯ ಸ್ವರೂಪದ ಪರಮಾತ್ಮನು ನೋಡುವ ಜೀವಿಯನ್ನೂ, ದೀಪವನ್ನೂ ಹಾಗೂ ದೀಪದಿಂದ ಬೆಳಗುವ ಸಕಲ ಜಗತ್ತನ್ನೂ ನೋಡುತ್ತಾನೆ. ಸೂರ್ಯಚಂದ್ರಾದಿ ಸಕಲ ದೀಪಗಳು ಖಂಡವಾಗಿ ( ಕೆಲಹೊತ್ತು) ಮಾತ್ರ ಬೆಳಗುತ್ತವೆ. ದೇವನು ಅಖಂಡವಾಗಿಯೂ, ನಿತ್ಯನಾಗಿಯೂ ಚೈತನ್ಯದಿಂದ ಬೆಳಗುತ್ತಿದ್ದು ಅವನಿಗೆ ಬೇರೆ ದೀಪಗಳ ಅವಶ್ಯಕತೆ ಇರುವುದಿಲ್ಲ.

**ಓ.ಸಂ.119:** ನಿತ್ಯ ತೃಪ್ತನಾದ ಪರಮಾತ್ಮನಿಗೆ ಯಾವ ನೈವೇದ್ಯದ ಅವಶ್ಯಕತೆಯೂ ಇಲ್ಲ. ಪರಮಾತ್ಮನು ಸಹಜವಾಗಿ ಸಕಲ ಫಲಗಳ ಫಲವಾಗಿದ್ದಾನೆ. ಹೀಗಿದ್ದಾಗ ಅವನಿಗೆ ಫಲಗಳ ಸಮರ್ಪಣೆಯು ಅನವಶ್ಯಕವಾಗಿರುತ್ತದೆ.

**ವಿವರಣೆ :** ಪರಮಾತ್ಮನು ಅದ್ವಯನು ಹಾಗೂ ಪರಿಪೂರ್ಣನು. ಆದ್ದರಿಂದ ಅವನಿಗೆ ಹಸಿವು ನೀರಡಿಕೆಯಿಲ್ಲ. ಎರಡನೆಯದಿಲ್ಲದ ( ಅದ್ವಯ ) ಅವನಿಗೆ ಆಹಾರವಾಗಲೀ ಅಥವಾ ನೀರಾಗಲೀ ಪ್ರತ್ಯೇಕವಿರಲು ಸಾಧ್ಯವಿಲ್ಲ. ಅಂದರೆ ಇರುವುದೆಲ್ಲವೂ ಅವನೇ ಆಗಿರುವುದರಿಂದ ವಿಧ-ವಿಧವಾಗಿ ತೋರುತ್ತಾನೆ. ಅಂದರೆ ಅವನು ನಿತ್ಯ ತೃಪ್ತನು. ಇಂತಹವನಿಗೆ ನೈವೇದ್ಯದ ಅವಶ್ಯಕತೆಯು ಇರುವುದಿಲ್ಲ. ನಾವು ನೈವೇದ್ಯದ ರೂಪವಾಗಿ ಅನೇಕ ಫಲಗಳನ್ನು ಸಮರ್ಪಣೆ ಮಾಡುತ್ತೇವೆ. ನಾವು ಕೇಳಿದ ವರ ( ಫಲ ) ವನ್ನು ದಯಪಾಲಿಸೆಂದು ಅವನನ್ನು ಹೀಗೆ ತೃಪ್ತಿಪಡಿಸಲು ಪ್ರಯತ್ನಿಸುತ್ತೇವೆ. ಆನಂದಸಾಗರನಾದ ಪರಮಾತ್ಮನ ಈ ಸಾಗರದಲ್ಲಿ ಕೇಳಲ್ಪಟ್ಟ

ವರಗಳೆಲ್ಲವೂ ಕೆಲವು ಹನಿಗಳಿದ್ದಂತೆ. ಆದರೆ ಪರಮಾತ್ಮನು ಸಕಲ ಫಲಗಳ ಫಲವಾಗಿದ್ದಾನೆ. ಅವನು ಸಿಕ್ಕರೆ ನಮಗೆ ಸಕಲ ಫಲಗಳು ಸಿಕ್ಕಂತೆ. ಹೀಗಿರುವಾಗ ಬೇರೆ ಫಲಗಳ ಸಮರ್ಪಣೆಯ ಅವಶ್ಯಕತೆಯಿರುವುದಿಲ್ಲ.

**ಓ.ಸಂ.120 :** ಪರಮಾತ್ಮನೇ ಪಂಚಭೂತಗಳಲ್ಲಿ ಒಂದಾದ ಭೂಮಿಯನ್ನೂ ಹಾಗೂ ಅದರಲ್ಲಿ ಹುದುಗಿದ ಚಿನ್ನದ ಗಣಿಗಳನ್ನೂ ಸೃಷ್ಟಿಸಿರುವಾಗ ಅವನಿಗೆ ಪೂಜೆಯ ಅಂಗವಾಗಿ ಸುವರ್ಣ ದಕ್ಷಿಣೆಯನ್ನು ಸಮರ್ಪಿಸುವುದು ಅರ್ಥವಿಲ್ಲ. ಹಾಗೆಯೇ ಪರಿಪೂರ್ಣ ಸ್ವರೂಪನಾದ ಪರಮಾತ್ಮನು ಸರ್ವವ್ಯಾಪಕನಿರುವಾಗ ಅವನಿಗೆ ಪ್ರದಕ್ಷಿಣೆಯು ಅಸಾಧ್ಯವಾಗಿರುತ್ತದೆ.

**ವಿವರಣೆ :** ದೇವ ಪೂಜಾ ಅಂಗವಾಗಿ "ಸುವರ್ಣ ದಕ್ಷಿಣಾಂ ಸಮರ್ಪಯಾಮಿ..." ಎಂದು ಹೇಳುತ್ತಾ ಒಂದು ನಾಣ್ಯವನ್ನು ಇಡುವ ಪದ್ಧತಿ ಈಗಲೂ ಇದೆ. ಶ್ರೀಮಂತರು ಸುವರ್ಣವನ್ನೇ ಸಮರ್ಪಿಸಬಹುದು. ಆದರೆ ಜ್ಞಾನನಿಷ್ಠನಿಗೆ ಸಕಲ ನಾಮ–ರೂಪಗಳೂ ಕೂಡ ಅಸ್ತಿ–ಭಾತಿ–ಪ್ರಿಯತ್ವಗಳಿಂದ ಪರಮಾತ್ಮ ಸ್ವರೂಪವೇ ಆಗಿರುತ್ತವೆ. ಆದ್ದರಿಂದ ಚಿನ್ನದ ಗಣಿಗಳನ್ನು ಹೊಂದಿರುವ ವಸುಂಧರೆಯು (ಭೂಮಿ) ಪರಮಾತ್ಮನ ಸ್ವರೂಪವೇ ಇರುವುದು. ಇಂತಹ ಪರಮಾತ್ಮನಿಗೆ ಸುವರ್ಣ ಸಮರ್ಪಣೆಯನ್ನುವುದು ಹಾಸ್ಯಾಸ್ಪದವಾಗಿರುತ್ತದೆ. ಹಾಗೆಯೇ ಪರಮಾತ್ಮನು ಸರ್ವವ್ಯಾಪಕನಿದ್ದು ಅವನಿಗೆ ಪ್ರದಕ್ಷಿಣೆ ಎಂಬುದು ಹಾಸ್ಯಾಸ್ಪದವೇ ಸರಿ. ಶ್ರೀ ಶಂಕರಾಚಾರ್ಯರು "ಸಂಚಾರ ಪದಯೋಃ ಪ್ರದಕ್ಷಿಣ ವಿಧಿಃ" ಎಂದಿದ್ದಾರೆ. ಅಂದರೆ ಪಾದಗಳಿಂದ ನಾವು ಮಾಡುವ ಸಂಚಾರವೆಲ್ಲವೂ ದೇವನ ಪ್ರದಕ್ಷಿಣ ವಿಧಿಯೇ ಆಗಿರುತ್ತದೆ. ಆದ್ದರಿಂದ ಸಹಜವಾಗಿಯೇ ಅಪ್ರಯತ್ನ ಪೂರ್ವಕವಾಗಿ ಪ್ರದಕ್ಷಿಣವು ಸಮರ್ಪಿಸಲ್ಪಡುತ್ತದೆ.

**ಓ.ಸಂ.121:** ಯಾರನ್ನು (ಯಾವ ದೇವನನ್ನು) ವಾಕ್ ಮತ್ತು ಮನಸ್ಸುಗಳು ಮುಟ್ಟಲಾರವೋ ಅಂತಹವನನ್ನು ಯಾವ ಸ್ತೋತ್ರದಿಂದಲೂ ಸ್ತುತಿಸಲಾಗುವುದಿಲ್ಲ. ಆದರೆ ಪರಮಾತ್ಮನು ಎಲ್ಲ ವಾಕ್‌ಗಳಿಗೆ ಅಧಿಷ್ಠಾನನಾಗಿರುವುದರಿಂದ ಸಹಜವಾಗಿಯೇ ವಾಕ್‌ನಿಂದ ಅವನ ಸ್ತುತಿಸಿದಂತಾಗುವುದು.

**ವಿವರಣೆ :** ಪರಮಾತ್ಮನನ್ನು ವಾಕ್ ಮತ್ತು ಮನಸ್ಸುಗಳು ಮುಟ್ಟಲಾರವೆಂದು ಶ್ರುತಿಯು ತಿಳಿಸುತ್ತದೆ ("ಯತೋವಾಚೋನಿವರ್ತಂತೆ ತತ್‌ಪ್ರಾಪ್ಯ ಮನಸಾ ಸಹ" – ತೈ.ಉಪನಿಷತ್, ಬ್ರಹ್ಮಾನಂದವಲ್ಲಿ, IV.1.). ಅಂತಹ ಪರಮಾತ್ಮನನ್ನು ಯಾವುದೇ ರೀತಿಯಲ್ಲಿ ಸ್ತೋತ್ರ ಮಾಡಿದಾಗಲೂ ಯಾವ ಪ್ರಯೋಜನವಿಲ್ಲವೆಂಬುದು ತಿಳಿಯುತ್ತದೆ. ಆದುದರಿಂದ ಪೂಜಾವಿಧಿಯಲ್ಲಿ ಹೇಳುವ ಸ್ತೋತ್ರಗಳು ಜ್ಞಾನನಿಷ್ಠೆಯ

ದೃಷ್ಟಿಯಿಂದ ಉಪಯೋಗವಿಲ್ಲವೆಂದು ತಿಳಿಯುತ್ತದೆ. ಆದರೆ ಪ್ರತಿಯೊಂದು ವಾಕ್‌ಗೂ ಹಾಗೂ ಅದಕ್ಕೆ ಸಂಬಂಧಪಟ್ಟ ಮನೋವೃತ್ತಿಗೂ ಅಸ್ತಿ-ಭಾತಿ-ಪ್ರಿಯತ್ವದಿಂದ ಪರಮಾತ್ಮನೇ ಅಧಿಷ್ಠಾನನಾಗಿರುವುದು ಕಂಡುಬರುವುದು. ಆದುದರಿಂದ ಏನನ್ನೇ ಮಾತನಾಡಿದರೂ ಅಥವಾ ಮಾನಸಿಕವಾಗಿ ವಿಚಾರ ಮಾಡಿದರೂ ಅದು ಸಹಜವಾಗಿಯೇ ಪರಮಾತ್ಮನ ಸ್ತುತಿಗೆ ಸಮಾನವಾಗಿರುತ್ತದೆ

( ... ಸ್ತೋತ್ರಾಣಿ ಸರ್ವಾಗಿರಃ – ಶಂಕರರ ಶಿವ ಮಾನಸ ಸ್ತ್ರೋತ್ರ ). ಶ್ರೀಗಳು ಜ್ಞಾನನಿಷ್ಠರಿಗಾಗಿ ಹೇಳಿದ ಅರ್ಚನ ಭಕ್ತಿ ವಿಧಾನವು ಇಲ್ಲಿಗೆ ಮುಗಿಯಿತು (ಓವೀ ಸಂ.103 ರಿಂದ 121; ಒಟ್ಟು 19 ಓವೀಗಳು).

**ಓ.ಸಂ.122:** ಈವರೆಗೆ ಜ್ಞಾನನಿಷ್ಠರಿಗೆ ಹೇಳಿರುವ 'ಅರ್ಚನ' ಭಕ್ತಿ ವಿಧಾನವನ್ನು ಅನುಸರಿಸಲು ಇತರರಿಗೆ ಕಷ್ಟವಾಗಿರುವುದರಿಂದ ಇತರರಿಗೆ ಇನ್ನು ಮುಂದೆ ಬೇರೆ ಸುಲಭವಾದ ವಿಧಾನವನ್ನು ಹೇಳಲಾಗಿದೆ. ಅವರು ಯಾವುದೇ ಧಾತುವಿನ ಅಥವಾ ಶಿಲೆಯ ದೇವತಾ ಮೂರ್ತಿಯನ್ನು ಮಾಡಿಸಬೇಕು.

**ವಿವರಣೆ:** ಈವರೆಗೆ ಉಳಿದ ಭಕ್ತಿ ವಿಧಾನಗಳಲ್ಲಿ ಹೇಳಿದಂತೆ ಜ್ಞಾನನಿಷ್ಠರಿಗೆ ಮಾತ್ರ ಅನುಕೂಲವಾಗುವಂತೆ 'ಅರ್ಚನ' ಭಕ್ತಿಯನ್ನು ವಿವರಿಸಲಾಗಿದೆ. ಈ ವಿಧಾನವು ಸಾಮಾನ್ಯರಿಗೆ ಅನುಸರಿಸಲು ಕಷ್ಟಕರವಾಗಿರುತ್ತದೆ. ಏಕೆಂದರೆ ಇದು ವಿಚಾರಮಾರ್ಗವಾಗಿದ್ದು ಇದನ್ನು ಅನುಸರಿಸಲು ಯಾರಿಗೆ ಚಿತ್ತಶುದ್ಧಿ ಇದೆಯೋ ಅಂತಹವರು ಮಾತ್ರ ಇದನ್ನು ಸ್ವೀಕರಿಸುವರು. ಇತರರ ಮನಸ್ಸು ಚಂಚಲವಾಗಿರುವುದರಿಂದ ಇದನ್ನು ಅರ್ಥಮಾಡಿಕೊಳ್ಳುವುದಾಗಲೀ ಹಾಗೂ ಅದನ್ನು ಅನುಸರಿಸುವುದಾಗಲೀ ಅವರಿಗೆ ಸಾಧ್ಯವಾಗುವುದಿಲ್ಲ. ಅಂತಹ ಸಾಮಾನ್ಯರಿಗಾಗಿಯೇ ಅರ್ಥಮಾಡಿಕೊಳ್ಳಲು ಸುಲಭವಾಗಿರುವ ಭಕ್ತಿ ಮಾರ್ಗವನ್ನು ಹಿಂದೆ ಹೇಳಿದ ಭಕ್ತಿಯ ವಿಧಗಳಂತೆ ಈ ಅರ್ಚನ ಭಕ್ತಿಗೂ ಹೇಳಲಾಗಿದೆ. ಇಲ್ಲಿ ಅವರು ಮೊದಲು ಯಾವುದೇ ಧಾತುವಿನ (ಲೋಹದ) ದೇವತಾ ಮೂರ್ತಿಯನ್ನು ಪೂಜೆಗಾಗಿ ಹೇಳಿ ಮಾಡಿಸಿಕೊಳ್ಳಬೇಕು. ಹೀಗೆ ಧಾತುವಿನಿಂದ ಅಥವಾ ಶಿಲೆಯಿಂದ ಮೂರ್ತಿಯನ್ನು ಮಾಡಿಸಲಾಗದಿದ್ದಲ್ಲಿ ಬೇರೆ ಹೇಗೆ ಮಾಡಬೇಕೆಂಬುದನ್ನು ಮುಂದಿನ ಓವೀಯಲ್ಲಿ ತಿಳಿಸಲಾಗಿದೆ.

**ಓ.ಸಂ.123:** ಹೀಗೆ ಲೋಹದ ಅಥವಾ ಶಿಲೆಯ ಮೂರ್ತಿಯನ್ನು ಮಾಡಿಸಲು ಅಶಕ್ಯವಾದರೆ ಅಂತಹವರು ಮಣ್ಣಿನ ಅಥವಾ ಕಟ್ಟಿಗೆ (ದಾರು) ಯಿಂದ ಮಾಡಲ್ಪಟ್ಟ ಸುಂದರವಾದ ಹಾಗೂ ಭವ್ಯವಾದ ಮತ್ತು ಮಂದಸ್ಮಿತ ವದನದಿಂದ ಕೂಡಿರುವ ಮೂರ್ತಿಯನ್ನು ಮಾಡಿಸಬೇಕು. ಇಂತಹ ಸುಂದರವಾದ ಮೂರ್ತಿಯನ್ನು

ನೋಡಿದಾಗ ಅವರಿಗೆ ಕೂಡಲೇ ಶಾಂತಿ ಸಮಾಧಾನ ಹಾಗೂ ಆನಂದ ಉಂಟಾಗಿ ಅಲ್ಲಿಯೇ ವಿಶ್ರಾಂತಿಯನ್ನು ಪಡೆಯುವಂತಿರಬೇಕು.

ವಿವರಣೆ : ಹಿಂದಿನ ಓವೀಯಲ್ಲಿ ಜ್ಞಾನನಿಷ್ಠರ 'ಅರ್ಚನ' ವಿಧಾನವನ್ನು ಅನುಸರಿಸಲು ಸಮರ್ಥರಿಲ್ಲವಾದ್ದರಿಂದ ಅಂತಹವರಿಗಾಗಿ ಲೋಹದ ಅಥವಾ ಶಿಲೆಯ ಮೂರ್ತಿಯನ್ನು ಮಾಡಿಸಬೇಕು ಎಂದು ತಿಳಿಸಲಾಗಿದೆ. ಬಹಳಷ್ಟು ದೇವಸ್ಥಾನಗಳಲ್ಲಿ ಶಿಲೆಯ ಮೂರ್ತಿಗಳನ್ನು ನೋಡುತ್ತೇವೆ. ಶಿಲೆಯಿಂದ ಮೂರ್ತಿಯನ್ನು ಮಾಡಿಸಲಾಗದಿದ್ದಲ್ಲಿ ಮಣ್ಣಿನ (ಮೃಣ್ಮಯ) ಮೂರ್ತಿಯನ್ನಾದರೂ ಭಕ್ತರು ಪೂಜಿಸಲು ಮಾಡಿಸಬೇಕು. ಇದೂ ಇಲ್ಲದಿದ್ದರೆ ಕೊನೆಯಪಕ್ಷ ಕಟ್ಟಿಗೆಯಿಂದಲಾದರೂ ಮೂರ್ತಿಯನ್ನು ಮಾಡಿಸಬೇಕು. ಹಳ್ಳಿಗಳಲ್ಲಿ ಈಗಲೂ ಮಾರಮ್ಮ ಹಾಗೂ ದುರ್ಗಮ್ಮ ಮುಂತಾದ ಹೆಣ್ಣು ದೇವತೆಗಳಿಗೆ ಕಟ್ಟಿಗೆಯಿಂದ ಮಾಡಲ್ಪಟ್ಟ ವಿಗ್ರಹಗಳನ್ನೇ ಮಾಡಿಸಿರುತ್ತಾರೆ. ಹೀಗೆ ಯಾವುದೇ ರೀತಿಯಲ್ಲಿ ಮೂರ್ತಿಯನ್ನು ಮಾಡಿಸಿದರೂ ಕೂಡ ಅದು ಸುಂದರವಾಗಿಯೂ ಹಾಗೂ ಭವ್ಯವಾಗಿಯೂ ಇರಬೇಕು. ಮೂರ್ತಿಯು ಮಂದಸ್ಮಿತ ವದನವನ್ನು ಹೊಂದಿರಬೇಕು. ಇಂತಹ ಮೂರ್ತಿಯನ್ನು ನೋಡಿದವರಿಗೆ ಕೂಡಲೇ ಶಾಂತಿ ಸಮಾಧಾನ ಹಾಗೂ ಆನಂದ ಉಂಟಾಗಿ ಅಲ್ಲಿಯೇ ವಿಶ್ರಾಂತಿಯನ್ನು ಅವರು ಪಡೆಯುವಂತಿರಬೇಕು.

ಓ.ಸಂ.124: ಹೀಗೆ ಸುಂದರವಾದ ಮೂರ್ತಿಯನ್ನು ಅಥವಾ ಪ್ರತಿಮೆಯನ್ನು ಮಾಡಿಸಬೇಕು. ಇದನ್ನು ಪ್ರತಿಷ್ಠಾಪಿಸಲು ಒಂದು ಸುಂದರವಾದ ದೇವಸ್ಥಾನವನ್ನು ಕಟ್ಟಿಸಬೇಕು. ಈ ದೇವಸ್ಥಾನದ ಗೋಡೆಗಳ ಮೇಲೆ ದಶಾವತಾರದ ರೇಖಾಚಿತ್ರಗಳನ್ನು ಬರೆಯಿಸಬೇಕು. ಹಾಗೆಯೇ ಮೂರ್ತಿಗಾಗಿ ಅತ್ಯಂತ ಸುಂದರವಾಗಿರುವ ಹಾಗೂ ಆಕರ್ಷಕವಾದ ಸಿಂಹಾಸನ ಒಂದನ್ನು ಭಕ್ತಿಯಿಂದ ನಿರ್ಮಿಸಬೇಕು.

ವಿವರಣೆ : ಹಿಂದಿನ ಓವೀಯಲ್ಲಿ ಸುಂದರವಾದ ಮೂರ್ತಿಯೊಂದನ್ನು ಪೂಜೆಗಾಗಿ ಹೇಗೆ ನಿರ್ಮಿಸಬೇಕು ಎಂಬುದರ ವಿವರಗಳನ್ನು ತಿಳಿಸಲಾಗಿದೆ. ಈ ಓವೀಯಲ್ಲಿ ಆ ಮೂರ್ತಿಯನ್ನು ಪ್ರತಿಷ್ಠಾಪಿಸಲು ದೇವಸ್ಥಾನವೊಂದನ್ನು ಹೇಗೆ ನಿರ್ಮಿಸಬೇಕು ಎನ್ನುವುದರ ಬಗ್ಗೆ ಮಾಹಿತಿಯನ್ನು ಕೊಡಲಾಗಿದೆ. ಮೂರ್ತಿಯನ್ನು ಪ್ರತಿಷ್ಠಾಪಿಸಲು ಒಂದು ಸುಂದರವಾದ ದೇವಸ್ಥಾನವನ್ನು ಆ ದೇವರ ಭಕ್ತರು ಇರುವ ಸ್ಥಳವನ್ನು ನೋಡಿ ಅಲ್ಲಿ ಒಂದು ಎತ್ತರವಾದ ಹಾಗೂ ವಿಶಾಲವಾದ ಸ್ಥಳದಲ್ಲಿ ಕಟ್ಟಬೇಕು. ಈ ದೇವಸ್ಥಾನದ ಗೋಡೆಗಳ ಮೇಲೆ ಒಬ್ಬ ಚಿತ್ರಕಾರನನ್ನು ಕರೆಯಿಸಿ ಅವನಿಂದ ಸುಂದರವಾದ ದಶಾವತಾರದ ರೇಖಾಚಿತ್ರಗಳನ್ನು ಬರೆಯಿಸಬೇಕು. ಅಲ್ಲದೇ ಆ ದೇವಸ್ಥಾನದಲ್ಲಿ ಮೂರ್ತಿಯನ್ನು ಪ್ರತಿಷ್ಠಾಪಿಸಲು ಅತ್ಯಂತ ಆಕರ್ಷಕವಾದ ಬಣ್ಣ-ಬಣ್ಣದ ಸುಂದರವಾದ ಸಿಂಹಾಸನವನ್ನು ಭಕ್ತಿಯಿಂದ ಸೃಷ್ಟಿಸಬೇಕು.

**ಓ.ಸಂ.125 :** ಇಂತಹ ಸಿಂಹಾಸನದ ಮೇಲೆ ಮಾಡಿಸಿದ ಮೂರ್ತಿಯನ್ನು ಭಕ್ತಿಯಿಂದ ಪ್ರತಿಷ್ಠಾಪಿಸಬೇಕು. ನಂತರ ನೈಮಿತ್ತಿಕವಾಗಿ ಆಗಾಗ ಉತ್ಸವಗಳನ್ನು ಪ್ರೇಮದಿಂದ ಮಾಡುತ್ತಿರಬೇಕು. ಸ್ವತಃ ದಿನಂಪ್ರತಿ ನಿಯಮದಿಂದ ನಂದಾದೀಪಯುಕ್ತವಾದ ಪೂಜೆಯನ್ನು ಭಕ್ತಿಯಿಂದ ಮಾಡಬೇಕು.

**ವಿವರಣೆ :** ಹಿಂದಿನ ಓವೀಯಲ್ಲಿ ಮೂರ್ತಿ ಪ್ರತಿಷ್ಠಾಪನೆಗಾಗಿ ಸುಂದರವಾದ ದೇವಾಲಯವನ್ನೂ ಮತ್ತು ಅದರ ಗರ್ಭಗುಡಿಯಲ್ಲಿ ಒಂದು ಅತ್ಯಂತ ಸುಂದರವಾದ ಮತ್ತು ವರ್ಣರಂಜಿತವಾದ ಸಿಂಹಾಸನವನ್ನೂ ಮಾಡಬೇಕೆಂದು ತಿಳಿಸಲಾಗಿದೆ. ಆ ಸಿಂಹಾಸನದಲ್ಲಿ ಶಿಲ್ಪಿಯಿಂದ ಕೆತ್ತಲ್ಪಟ್ಟ ಸುಂದರವಾದ ಇಷ್ಟದೇವತಾ ಮೂರ್ತಿಯನ್ನು ಪ್ರೇಮ ಹಾಗೂ ಭಕ್ತಿಯಿಂದಲೂ, ವಿಜೃಂಭಣೆಯಿಂದಲೂ ಯಾರಾದರೂ ಸಂತರು ಅಥವಾ ಮಹಾತ್ಮರ ಅಮೃತಹಸ್ತದಿಂದ ಪ್ರತಿಷ್ಠಾಪಿಸಬೇಕು. ನಂತರ ಆಗಾಗ ನೈಮಿತ್ತಿಕವಾಗಿ ಅನೇಕ ಉತ್ಸವಗಳನ್ನು ಮಾಡುತ್ತಿರಬೇಕು. ಉದಾಹರಣೆಗೆ, ಮೂರ್ತಿಯನ್ನು ಪ್ರತಿಷ್ಠಾಪಿಸಿದ ದಿನ ಶ್ರೀರಾಮನ ವಿಗ್ರಹವಾಗಿದ್ದಲ್ಲಿ ರಾಮನವಮಿಯ ದಿನ, ಯುಗಾದಿ ಹಬ್ಬದ ದಿನ ಇತ್ಯಾದಿಗಳಲ್ಲಿ ಉತ್ಸಾಹದಿಂದ ಉತ್ಸವಗಳನ್ನು ಆಚರಿಸಬೇಕು. ಆದರೆ ಅತಿ ಮುಖ್ಯವಾಗಿ ದಿನಂಪ್ರತಿ ತಪ್ಪಿಸದಂತೆ ನಂದಾದೀಪಯುಕ್ತ ಪೂಜೆಯನ್ನು ಸ್ವತಃ ಮಾಡಲೇಬೇಕು. ಈ ಪೂಜೆಯನ್ನು ಅತ್ಯಂತ ಭಕ್ತಿಯಿಂದಲೂ ಹಾಗೂ ಶ್ರದ್ಧೆಯಿಂದಲೂ ಪ್ರಾಮಾಣಿಕವಾಗಿ ಮಾಡುತ್ತಿರಬೇಕು.

**ಓ.ಸಂ. 126:** ದೇವಸ್ಥಾನದಲ್ಲಿ ಆಗಾಗ ಅಥವಾ ನೈಮಿತ್ತಿಕವಾಗಿ ಪುರಾಣ ಹಾಗೂ ಹರಿಕಥಾ ಶ್ರವಣಗಳನ್ನೂ, ಭಜನೆಗಳನ್ನೂ, ಗಾನ ಹಾಗೂ ನರ್ತನಗಳನ್ನು ಏರ್ಪಾಡಿಸಬೇಕು. ಯೋಗ್ಯ ಬ್ರಾಹ್ಮಣರನ್ನು ಕರೆಯಿಸಿ ಅವರಿಂದ ಮಂತ್ರಘೋಷವನ್ನು ಮಾಡಿಸಬೇಕು. ಅವರಿಗೆ ಸಾಕಷ್ಟು ದಕ್ಷಿಣೆಯನ್ನು ಕೊಡುವುದಲ್ಲದೇ ಭೋಜನವನ್ನೂ ಮಾಡಿಸಬೇಕು.

**ವಿವರಣೆ :** ಸಾರ್ವಜನಿಕರಿಗೆ ಆಕರ್ಷಣೆಯಾಗುವಂತೆ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ದೇವಸ್ಥಾನದಲ್ಲಿ ಇಟ್ಟುಕೊಳ್ಳಬೇಕು. ಧಾರ್ಮಿಕ ಕಾರ್ಯಕ್ರಮಗಳಾದ ಭಜನೆ, ಪುರಾಣ ಹಾಗೂ ಹರಿಕೀರ್ತನೆಗಳನ್ನು ಆಗಾಗ ನಡೆಸುತ್ತಿರಬೇಕು. ಭಜನಾ ಮಂಡಳಿಯು ಅದೇ ದೇವಸ್ಥಾನದ್ದೇ ಇದ್ದರೆ ಒಳ್ಳೆಯದು. ಹಾಗಿದ್ದರೆ ದಿನ ನಿತ್ಯ ಭಜನೆಯನ್ನು ನಿಗದಿತ ವೇಳೆಗೆ ಮಾಡಬಹುದು. ರಸವತ್ತಾಗಿ ಹೇಳುವ ಮತ್ತು ಧರ್ಮ ಹಾಗೂ ಅಧ್ಯಾತ್ಮ ಗ್ರಂಥಗಳನ್ನು ಓದಿ ತಿಳಿದುಕೊಂಡವರನ್ನೇ ಪುರಾಣ ಹೇಳಲು ಮತ್ತು ಹರಿ ಕೀರ್ತನೆಗಳನ್ನು ಮಾಡಲು, ಹಬ್ಬ-ಹರಿದಿನಗಳಲ್ಲಿ ನಿಯೋಜಿಸಬೇಕು. ಅಲ್ಲದೇ ಜನಸಾಮಾನ್ಯರಿಗೆ ಮನರಂಜನೆಯ ಮೂಲಕವಾಗಿ ಧಾರ್ಮಿಕ ಪ್ರಜ್ಞೆ ಹಾಗೂ ಭಕ್ತಿ ಭಾವಗಳನ್ನು ಸಂಸ್ಕಾರದಲ್ಲಿ ತರಲು ಭಕ್ತಿ ಗೀತೆಗಳನ್ನೂ, ಶಾಸ್ತ್ರೀಯ ಸಂಗೀತ ಕಾರ್ಯಕ್ರಮಗಳನ್ನೂ, ಯಕ್ಷಗಾನ ಮತ್ತು ಭರತನಾಟ್ಯ ಮುಂತಾದವುಗಳನ್ನೂ ಏರ್ಪಾಡಿಸಬೇಕು. ವಿಶೇಷದಿನಗಳಲ್ಲಿ ಯೋಗ್ಯ ಬ್ರಾಹ್ಮಣರಿಂದ ಮಂತ್ರಘೋಷವನ್ನು ಮಾಡಿಸಬೇಕು. ಅವರಿಗೆ ಸಾಕಷ್ಟು ದಕ್ಷಿಣೆಯನ್ನೂ ಕೊಟ್ಟು, ಒಳ್ಳೆಯ ಭೋಜನವನ್ನೂ ಮಾಡಿಸಬೇಕು. ಹೀಗೆ ಸಾಮಾನ್ಯರಿಗೆ ದೇವಸ್ಥಾನದಿಂದ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಸಂಸ್ಕಾರವು ಸಿಗುವಂತಾಗಬೇಕು.

**ಓ.ಸಂ.127:** ದೇವಸ್ಥಾನದ ಪಕ್ಕದಲ್ಲಿಯೇ ಧರ್ಮಶಾಲೆಯನ್ನು ಕಟ್ಟಿಸಬೇಕು. ಅಲ್ಲಿಗೆ ಬಂದ ಸತ್ಪುರುಷರನ್ನು ಆಹಾರ–ವಸ್ತ್ರಾದಿಗಳಿಂದ ಹಾಗೂ ದಾನಗಳಿಂದ ಸತ್ಕರಿಸುತ್ತಿರಬೇಕು.

**ವಿವರಣೆ :** ದೇವಸ್ಥಾನದ ಪಕ್ಕದಲ್ಲೇ ಅಥವಾ ಹತ್ತಿರದಲ್ಲೇ ಒಂದು ವಿಶಾಲವಾದ ಧರ್ಮಶಾಲೆಯನ್ನು ಕಟ್ಟಿಸಬೇಕು. ಅದು ಯಾತ್ರಾಸ್ಥಳವಾದಲ್ಲಿ ದಿನ ನಿತ್ಯವೂ ಅನೇಕ ಯಾತ್ರಾರ್ಥಿಗಳು ಬರುತ್ತಾರೆ. ಅವರಿಗೆ ಶುಲ್ಕವಿಲ್ಲದೇ ಊಟ–ವಸತಿ ಸೌಕರ್ಯಗಳನ್ನು ಒದಗಿಸಿಕೊಡಬೇಕು. ಈ ಧರ್ಮಶಾಲೆಯು ದೇವಸ್ಥಾನದ ಪಕ್ಕದಲ್ಲೇ ಇದ್ದರೆ ಅದು ಬಹಳ ಅನುಕೂಲವಾಗುವುದು. ಆಗ ದೇವಸ್ಥಾನದ ಅನೇಕ ಕಾರ್ಯಕ್ರಮಗಳಲ್ಲಿ ಯಾತ್ರಾರ್ಥಿಗಳೂ ಭಾಗವಹಿಸಬಹುದು. ಕೆಲವು ಸಲ ಧರ್ಮಶಾಲೆಗೆ ಸಾಧು–ಸಂತರೂ ಹಾಗೂ ಸನ್ಯಾಸಿಗಳೂ ಕೂಡ ಬರುತ್ತಾರೆ. ಆಗ ಅವರಿಗೆ ಸಕಲ ಗೌರವದೊಂದಿಗೆ ಊಟ–ವಸತಿಗಳ ಜೊತೆಗೆ ದಾನಧರ್ಮದೊಂದಿಗೆ ಅವರನ್ನು ಸನ್ಮಾನಿಸಿ ಬೀಳ್ಕೊಡಬೇಕು. ಇಂತಹ ಸತ್ಪುರುಷರಿಂದ ದೇವಸ್ಥಾನದಲ್ಲಿ ಪ್ರವಚನಗಳನ್ನು ಏರ್ಪಡಿಸಿದರೆ ಇನ್ನೂ ಉತ್ತಮವಾಗುವುದು. ಇಂತಹವರಿಂದ ಸಾಮಾನ್ಯ ಜನರಿಗೆ ಧಾರ್ಮಿಕ ಹಾಗೂ ಅಧ್ಯಾತ್ಮಿಕ ಬೋಧೆಯು ಕೊಡಲ್ಪಟ್ಟು ಒಳ್ಳೆಯ ಸಂಸ್ಕಾರವು ಉಂಟಾಗುವುದು.

**ಓ.ಸಂ. 128:** ದೇವಾಲಯದ ಆವರಣದಲ್ಲಿ ಸುಂದರವಾದ ಪುಷ್ಪದ ಉದ್ಯಾನವನವನ್ನು ನಿರ್ಮಿಸಬೇಕು. ಅದರ ಹೊರಗೆ ಒಂದು ಸುಂದರವಾದ ಪುಷ್ಕರಣಿಯನ್ನೂ ಕಟ್ಟಿಸಬೇಕು. ಉದ್ಯಾನವನದಲ್ಲಿ ಅನೇಕ ಹಣ್ಣಿನ ಗಿಡಗಳನ್ನು ಶ್ರಮದಿಂದ ಬೆಳೆಸಬೇಕು.

**ವಿವರಣೆ :** ದೇವಸ್ಥಾನಕ್ಕೆ ಬರುವ ಭಕ್ತರಿಗೆ ಮನೋಹರವಾಗಿ ಕಾಣುವಂತೆ ಒಂದು ಹೂವಿನ ತೋಟವನ್ನು ದೇವಸ್ಥಾನದ ಸುತ್ತಲೂ ನಿರ್ಮಿಸಬೇಕು. ಸುವಾಸನಾಯುಕ್ತ ಬಣ್ಣ–ಬಣ್ಣದ ಹೂವುಗಳು ಬರುವ ಭಕ್ತರನ್ನು ದಿವ್ಯವಾದ ಹಾಗೂ ಶಾಂತವಾದ ಮನಸ್ಥಿತಿಯನ್ನು ಹೊಂದುವಂತೆ ಮಾಡುವುದರಲ್ಲಿ ಸಂಶಯವಿಲ್ಲ. ಹಾಗೆಯೇ ಈ ಉದ್ಯಾನವನದ ಬದಿಯಲ್ಲೇ ಒಂದು ಸುಂದರವಾದ ಪವಿತ್ರವಾದ ಪುಷ್ಕರಣಿಯನ್ನು ಅಂದರೆ ಒಂದು ನೀರಿನ ಕೊಳವನ್ನು ನಿರ್ಮಿಸಬೇಕು. ಅದರಲ್ಲಿ ಭಕ್ತಾದಿಗಳು ಕಾಲನ್ನು ತೊಳೆದುಕೊಂಡರೆ ಹಾಗೂ ಪ್ರೋಕ್ಷಿಸಿಕೊಂಡರೆ ತಾವೂ ಪವಿತ್ರರಾಗುವ ಭಾವನೆಯನ್ನು ಹೊಂದುತ್ತಾರೆ. ಭಕ್ತರಿಗೆ ಭಕ್ತಿಯು ಉದ್ದೀಪನವಾಗಲು ಇವೆಲ್ಲವೂ ಅವಶ್ಯಕ. ಹಾಗೆಯೇ ದೇವಸ್ಥಾನದ ಆವರಣದಲ್ಲಿ ಒಳ್ಳೊಳ್ಳೆ ಹಣ್ಣುಗಳ ಮರಗಳನ್ನು ಬೆಳಸಬೇಕು. ಹೀಗೆ ಸಿಗುವ ಹೂ–ಹಣ್ಣುಗಳು ದೇವರ ಪೂಜೆಗೂ ಉಪಯೋಗಕ್ಕೆ ಬರುತ್ತವೆ. ಅಲ್ಲದೇ ಹಣ್ಣುಗಳು ದೇವಸ್ಥಾನದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಸಹಾಯಕವಾಗುತ್ತವೆ.

**ಓ.ಸಂ. 129:** ದೇವಸ್ಥಾನದ ಆವರಣದಲ್ಲಿಯೇ ಛತ್ರ-ಚಾಮರ, ಅಬ್ದಾಗಿರ, ಪಲ್ಲಕ್ಕಿ ಮುಂತಾದ ಉಪಯುಕ್ತ ವಸ್ತುಗಳನ್ನು ನಿರ್ಮಿಸಿ ಅವುಗಳನ್ನು ಮನಸ್ಸಿಗೆ ಸುಂದರವಾಗಿ ಕಾಣುವಂತೆ ಜೋಡಿಸಿಡಬೇಕು. ಬರುವ ಭಕ್ತರು ಅವುಗಳನ್ನು ನೋಡಿದಕೂಡಲೇ ಅವರ ಮನಸ್ಸು ಸ್ಥಿರಗೊಳ್ಳುವಂತಿರಬೇಕು.

**ವಿವರಣೆ :** ದೇವಸ್ಥಾನದಲ್ಲಿ ನಡೆಯುವ ಅನೇಕ ಉತ್ಸವಗಳಲ್ಲಿ ದೇವರನ್ನು ಪಲ್ಲಕ್ಕಿಯಲ್ಲಿ ವಿವಿಧ ವಾಹನಗಳ ಮೇಲೆ ಕೂಡಿಸಿಕೊಂಡು ದೇವರಿಗೆ ಚಾಮರ ಸೇವೆ ಮಾಡುತ್ತಾ ಕೆಲವು ನಿರ್ದಿಷ್ಟ ದಾರಿಯಲ್ಲಿ ಊರಿನಲ್ಲಿ ಮೆರವಣಿಗೆಯನ್ನು ಮಾಡಿದರೆ ತಮ್ಮ ಮನೆಗೆ ದೇವರು ಬಂದನೆಂಬ ತೃಪ್ತಿ ಜನರಲ್ಲಿ ಬರುತ್ತದೆ. ಇದಕ್ಕಾಗಿ ಸುಂದರವಾದ ಪಲ್ಲಕ್ಕಿ, ದೇವರಿಗೆ ಬೀಸಲು ಎರಡು ಚಾಮರಗಳು, ಅಬ್ದಾಗಿರ ಮತ್ತು ಹಿಡಿಯಲು ಶ್ವೇತಛತ್ರಿ ಹಾಗೂ ವಾಹನಕ್ಕಾಗಿ ಆನೆ, ಕುದುರೆ, ನವಿಲು ಮುಂತಾದ ಪ್ರಾಣಿಗಳು ಇತ್ಯಾದಿಗಳನ್ನು ಸುಂದರವಾಗಿ ಮಾಡಿಸಿ, ಅವುಗಳನ್ನು ಅಷ್ಟೇ ಸುಂದರವಾಗಿ ಜೋಡಿಸಿ ಇಡಬೇಕು. ಇದಕ್ಕಾಗಿ ದೇವಸ್ಥಾನದ ಆವರಣದಲ್ಲೇ ಒಂದು ಸುಂದರವಾದ ಪ್ರತ್ಯೇಕ ಕೊಠಡಿಯನ್ನು ಕಟ್ಟಬೇಕು. ಎಲ್ಲದಕ್ಕಿಂತ ಮುಖ್ಯವಾಗಿ ಪಲ್ಲಕ್ಕಿಯಲ್ಲಿ ಮೆರವಣಿಗೆ ಮಾಡಲು ಸುಂದರವಾದ ಲೋಹದ ಉತ್ಸವಮೂರ್ತಿಯನ್ನು ಮಾಡಿಸಬೇಕು. ದೇವಸ್ಥಾನದ ಆವರಣದ ಸುತ್ತಲೂ ಒಳ್ಳೆಯ ಹಿತೋಕ್ತಿಗಳನ್ನು ಹಾಗೂ ಮೆಚ್ಚುಗೆಯ ನುಡಿಗಳನ್ನು ( ಅಬ್ದಾಗಿರ ) ಬರೆಸಬೇಕು. ಇವೆಲ್ಲವೂ ಬರುವ ಭಕ್ತರ ಮೇಲೆ ಪ್ರಭಾವವನ್ನು ಬೀರಿ ಅವರ ಮನಸ್ಸು ಸ್ಥಿರಗೊಳ್ಳುವಂತೆ ಮಾಡುತ್ತವೆ.

**ಓ.ಸಂ. 130 :** ಹೀಗೆ ಯಾವುದನ್ನೂ ಮಾಡಲಾಗದಿದ್ದಲ್ಲಿ ಈ ಎಲ್ಲವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡು ಆ ಇಷ್ಟದೈವವನ್ನು ಹೃದಯ ಕಮಲದಲ್ಲಿ ಪ್ರತಿಷ್ಠಾಪಿಸಿ ಸಕಲ ಅರ್ಚನೆಯನ್ನೂ ಪ್ರೇಮದಿಂದ ಮಾಡಬೇಕು. ಇದರಿಂದ ಅವನ ಚಿತ್ತವು ಸ್ಥಿರವಾಗಿರುತ್ತದೆ.

**ವಿವರಣೆ :** ಹಿಂದೆ ಹೇಳಿದ ರೀತಿಯಲ್ಲಿ ಭವ್ಯವಾದ ದೇವಸ್ಥಾನವನ್ನು ಕಟ್ಟಿಸುವುದಾಗಲೀ ಹಾಗೂ ಅದರಲ್ಲಿ ಮೂರ್ತಿಯನ್ನು ಪ್ರತಿಷ್ಠಾಪಿಸುವುದಾಗಲೀ ಆರ್ಥಿಕವಾಗಿ ಎಲ್ಲರಿಗೂ ಅನುಕೂಲವಾಗುವುದಿಲ್ಲ. ಆದ್ದರಿಂದ ಅಂತಹವರಿಗಾಗಿ ಈ ಓವಿಯಲ್ಲಿ ಬೇರೆ ಸುಲಭವಾದ ಮಾರ್ಗವನ್ನು ತೋರಿಸಲಾಗಿದೆ. ಅಂತಹವರು ಹಿಂದೆ ಹೇಳಿದಂತೆ ದೇವಸ್ಥಾನವನ್ನು ನಿರ್ಮಿಸುವುದು, ಅದರಲ್ಲಿ ಭವ್ಯವಾದ ಮೂರ್ತಿಯನ್ನು ಪ್ರತಿಷ್ಠಾಪಿಸುವುದು ಇತ್ಯಾದಿಗಳನ್ನು ಮನಸ್ಸಿನಿಂದಲೇ ಕಲ್ಪಿಸಿಕೊಂಡು ಆ ಇಷ್ಟದೈವವನ್ನು ತಮ್ಮ ಹೃದಯ ಕಮಲದಲ್ಲಿ ಪ್ರತಿಷ್ಠಾಪಿಸಿಕೊಳ್ಳಬೇಕು. ಅರ್ಚನೆಯ ಆವಹನ ಮುಂತಾದ ಸಕಲ ಅಂಗಗಳನ್ನೂ ತಪ್ಪದೇ ಅವನಿಗೆ ಭಕ್ತಿಯಿಂದ ಅರ್ಪಿಸಬೇಕು. ಪರಮಾತ್ಮನು ಭಕ್ತಿಗೆ ಒಲಿಯುವನೇ ಹೊರತು ಆಡಂಬರಕ್ಕಲ್ಲವೆನ್ನುವುದನ್ನು ತಿಳಿದುಕೊಳ್ಳಬೇಕು. ಹೀಗೆ ತನ್ನಲ್ಲೇ ಪರಮಾತ್ಮನು ನೆಲೆಸಿರುವುದರಿಂದ ತನ್ನ ಮನಸ್ಸು ಸ್ಥಿರಬುದ್ಧಿಯನ್ನು ಪಡೆಯುತ್ತದೆ ಮತ್ತು ಅದರ ಚಾಂಚಲ್ಯವು ನಾಶವಾಗುತ್ತದೆ.

**ಓ.ಸಂ.131 :** ಈವರೆಗೆ ಜನ ಸಾಮಾನ್ಯರಿಗೆ ಹೇಳಿದ 'ಅರ್ಚನ ಭಕ್ತಿ' ಕ್ರಮದ ನಿತ್ಯ ಆಚರಣೆಯಿಂದ ಚಿತ್ತೈಕಾಗ್ರತೆಯು ಉಂಟಾಗುತ್ತದೆ. ಇದರಿಂದ ಸದ್ಗುರುವಿನ ಉಪದೇಶವನ್ನು ಕೇಳುವ ಆಸಕ್ತಿ ಹಾಗೂ ಅದನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವು ಅವರಿಗೆ ಬರುತ್ತದೆ. ಕಾಲಾನಂತರ ಸದ್ಗುರುವಿನ ಕೃಪೆಯಿಂದ ಅವರಿಗೆ ಬ್ರಹ್ಮಾತ್ಮೈಕ್ಯ ಜ್ಞಾನವು ಉಂಟಾಗುತ್ತದೆ.

**ವಿವರಣೆ :** ಈ ಸದ್ಗುರುಭಕ್ತದ್ವಯರಿಗೆ ಈವರೆಗೆ ಹೇಳಿದ ಅರ್ಚನಭಕ್ತಿ ಕ್ರಮವನ್ನು ತಪ್ಪದೆ ನಿತ್ಯ ಅನುಸರಿಸಿದರೆ ಕಾಲಾನುಕ್ರಮದಲ್ಲಿ ಅವರ ಚಿತ್ತವು ಸಮಾಧಾನವನ್ನೂ, ಶಾಂತಿಯನ್ನೂ ಹಾಗೂ ಚಿತ್ತದ ಏಕಾಗ್ರತೆಯನ್ನೂ ಪಡೆಯುತ್ತದೆ. ಇದು ತತ್‌ಕ್ಷಣವೇ ಅನಾದಿ ಅವಿದ್ಯೆಯನ್ನು ನಾಶಮಾಡಿ ತಾವು ದೇಹವಲ್ಲವೆಂಬ ಸತ್ಯವನ್ನು ತಿಳಿಸಿ ಭವರೋಗದಿಂದ ಮುಕ್ತಿಯನ್ನು ದಯಪಾಲಿಸುತ್ತದೆ. ಇದನ್ನು ಕೈವಲ್ಯ ಮುಕ್ತಿಯೆಂದು ಕರೆಯುತ್ತಾರೆ. ಇದು ಯಾರಿಗೆ ಲಭಿಸುವುದೋ ಅವರು ಜೀವನ್ಮುಕ್ತರಾಗುತ್ತಾರೆ.

**ಓ.ಸಂ. 132** ವೇದವ್ಯಾಸರು ಭಾಗವತ ಪುರಾಣದಲ್ಲಿ ತಿಳಿಸಿದಂತೆ ಪೃಥುರಾಜನು ಅರ್ಚನಭಕ್ತಿ ಮಾರ್ಗದಿಂದ ಈ ಸಂಸಾರ ಸಾಗರವನ್ನು ದಾಟಿದನು. ಆದ್ದರಿಂದ ಈ ಅರ್ಚನ ಭಕ್ತಿಯು ಒಂದು ಮುಖ್ಯವಾದ ಭಕ್ತಿಯ ರೂಪವಾಗಿದೆ.

**ವಿವರಣೆ :** ಈ ಓವೀಯು ಜನಸಾಮಾನ್ಯರಿಗೆ ಹೇಳಿರುವ 'ಅರ್ಚನಭಕ್ತಿ'ಯ ವಿವರಗಳನ್ನು ಕೊಡುವ ಓವೀಗಳಲ್ಲಿ ಕೊನೆಯದಾಗಿರುತ್ತದೆ. ಇದರಲ್ಲಿ ಭಗವಾನ್ ವೇದವ್ಯಾಸರು ಬರೆದ ಭಾಗವತ ಪುರಾಣದಲ್ಲಿ ಪ್ರಸ್ತಾಪವಾದ ಪೃಥುರಾಜನ ಉದಾಹರಣೆಯಿರುತ್ತದೆ. ಅವನು ಮಾನಸಿಕವಾದ ಅರ್ಚನಭಕ್ತಿಯಿಂದಲೇ ( ಓವೀ ಸಂ.130 ರಂತೆ ) ಮೋಕ್ಷವನ್ನು ಪಡೆದ ದೃಷ್ಟಾಂತವಿರುತ್ತದೆ. ರಾಜಾ ಪೃಥುವು ಧ್ರುವನ ವಂಶಸ್ಥನಾಗಿದ್ದನು. ಅತ್ಯಂತ ಶ್ರೇಷ್ಠ ಧರ್ಮಾತ್ಮನಾಗಿದ್ದ ಅವನು ಒಮ್ಮೆ ತನ್ನ ರಾಜ್ಯದಲ್ಲಿ ಭೀಕರ ಬರಗಾಲ ಬಂದಾಗ ಭೂಮಿ ತಾಯಿಯ ಆದೇಶದಂತೆ ತನ್ನ ಪ್ರಜೆಗಳನ್ನು ಕಷ್ಟಪಟ್ಟು ಭೂಮಿಯನ್ನು ಉತ್ತುವುದರಿಂದ ಹಸನ ಅಥವಾ ಹದ ಮಾಡಿದಾಗ ಪುನಃ ಸುಭಿಕ್ಷೆಯು ರಾಜ್ಯದಲ್ಲಿ ಬಂದ ಬಗ್ಗೆ ಹಾಗೂ ಇದರಿಂದ ಭೂಮಿತಾಯಿಗೆ 'ಪೃಥ್ವಿ' ಎಂಬ ಹೆಸರು ಬಂದ ಬಗ್ಗೆ ಉಲ್ಲೇಖವಿದೆ. ಪೃಥುವು ಮಾಡಿದ ಯಜ್ಞಕ್ಕೆ ಸಾಕ್ಷಾತ್ ವಿಷ್ಣುವೇ ಬಂದು ಅವನಿಗೆ ವೇದಾಂತವನ್ನು ಬೋಧಿಸಿದನು. ನಂತರ ಅವನ ಬಳಿಗೆ ನಾಲ್ಕು ಜನ ಸನತ್ಕುಮಾರರು ಬಂದು ಅವನಿಗೆ ಅರ್ಚನ ಭಕ್ತಿಯನ್ನು ಹೇಗೆ ಮಾನಸಿಕವಾಗಿ ಮಾಡಬಹುದೆಂದು ಉಪದೇಶಿಸಿದರು. ನಂತರ ಇವನು ತನ್ನ ರಾಜ್ಯವನ್ನು ಮಗನಿಗೆ ಒಪ್ಪಿಸಿ ಅರಣ್ಯದಲ್ಲಿ ಏಕಾಂತ ವಾಸದಲ್ಲಿದ್ದು ನಿರಂತರ ಪರಮಾತ್ಮನ ಧ್ಯಾನದಲ್ಲೇ ಕಾಲಕಳೆದು ಕೊನೆಗೆ ಅವನು ಅನಂತ ಬ್ರಹ್ಮನಲ್ಲಿ ಲೀನನಾಗುತ್ತಾನೆ.

**ಓ.ಸಂ. 133:** ಈಗ ನವವಿಧಭಕ್ತಿಗಳಲ್ಲಿ ಆರನೆಯದಾದ 'ನಮನ'ವೆಂಬ ಭಕ್ತಿ ರೂಪದ ವಿವೇಚನೆಯು ಪ್ರಾರಂಭವಾಗುತ್ತದೆ. ಏಕೈಕ ಪರಮಾತ್ಮನು ಸರ್ವವನ್ನೂ ವ್ಯಾಪಿಸಿದ್ದಾನೆಂದೂ ಹಾಗೂ ಬಾಹ್ಯದಲ್ಲಿ ಕಾಣುವ ಸಕಲ ಜಡಸ್ವರೂಪವೆಲ್ಲವೂ ಮಾಯಾ ಸ್ವರೂಪವೆಂದೂ ಅಂದರೆ ನಿಜವಾಗಿ ಇರದೇ ಕೇವಲ ತೋರಿಕೆಯೆಂದು ತಿಳಿಯಬೇಕು.

**ವಿವರಣೆ :** ಈ ನವವಿಧಭಕ್ತಿಯಲ್ಲಿ ಆರನೆಯದಾದ 'ನಮನ'ವೆಂಬ ಭಕ್ತಿರೂಪವನ್ನು ಇನ್ನು ಮೇಲೆ ವಿವರಿಸಲಾಗುವುದು. ಇಲ್ಲಿಯವರೆಗೆ ವಿವಿಧ ಶ್ರವಣಾದಿ ಭಕ್ತಿರೂಪಗಳನ್ನು ವಿವರಿಸಿದ್ದು ಮುಖ್ಯವಾಗಿ ಎರಡು ವಿಷಯಗಳು ಭಕ್ತನಿಗೆ ತಿಳಿದ ಮೇಲೆಯೇ ಅವನು 'ನಮನ' ಭಕ್ತಿಯನ್ನು ಆಚರಿಸುವ ಬಗೆಯನ್ನು ತಿಳಿದುಕೊಳ್ಳಬೇಕು. ಮೊದಲನೆಯದಾಗಿ ಏಕೈಕ ಪರಮಾತ್ಮನು ಸಕಲ ಜೀವ–ಜಗತ್ತುಗಳನ್ನು ಓತ–ಪ್ರೋತವಾಗಿ ಅಸ್ತಿ–ಭಾತಿ–ಪ್ರಿಯ ಸ್ವರೂಪಗಳಿಂದ ವ್ಯಾಪಿಸಿದ್ದಾನೆ. ಅಂದರೆ ಸತ್–ಚಿತ್–ಆನಂದ ಸ್ವರೂಪನಾದ ಪರಮಾತ್ಮನೇ ಅದ್ವಯನಾಗಿ ಎಲ್ಲ ಕಡೆಯೂ ಇರುತ್ತಾನೆ. ಎರಡನೆಯದಾಗಿ ಈಗ ನಾವು ತಿಳಿಯಲ್ಪಡುವ ಸಕಲ ಜಡವೂ (ಜೀವರುಗಳ ದೇಹಸಹಿತವಾದ ಸಕಲ ಪ್ರಪಂಚವೂ) ಕೇವಲ ತೋರಿಕೆಯಾಗಿ ಅಂದರೆ ನಾಮ-ರೂಪಾತ್ಮಕವಾಗಿ ಇರುತ್ತದೆಯೇ ಹೊರತು ನಿಜವಾಗಿಯೂ ಇರುವುದಿಲ್ಲ. ಮೊದಲು ವಾಸನಾರೂಪವಾಗಿ ನೆಲೆಸಿದ್ದ ಅದು ನಮ್ಮ ಭೋಗಕ್ಕಾಗಿ ಬಾಹ್ಯದಲ್ಲಿ ಪ್ರಾರಬ್ಧಕರ್ಮವು ಇರುವವರೆಗೆ ಕೇವಲ ತೋರಿಕೆಯಾಗಿ ಇರುತ್ತದೆಯೇ ಹೊರತು ಸತ್ಯತ್ವದಿಂದಲ್ಲ.

**ಓ.ಸಂ. 134 :** 'ನಮನ'ದಲ್ಲಿ ನಮ್ರತೆಯು ಇರುತ್ತದೆ. ನಮ್ರತೆಯಿಂದ ಅಹಂಭಾವವು ಸಂಪೂರ್ಣ ನಾಶವಾಗುವುದರಿಂದ ಜ್ಞೇಯವಾದ ಸರ್ವಸ್ವವೂ ಬ್ರಹ್ಮನಲ್ಲಿ ಲೀನವಾವಾಗುತ್ತದೆ.

**ವಿವರಣೆ :** ವ್ಯವಹಾರದಲ್ಲಿ 'ನಮನ'ವೆಂದರೆ ನಮಸ್ಕಾರವನ್ನು ಮಾಡುವುದು. ಈ ನಮಸ್ಕಾರದಲ್ಲಿ ನಮ್ರತಾಭಾವವು ಇರಲೇಬೇಕಾಗಿರುತ್ತದೆ. ಅಂದರೆ ಆಗ ಅಹಂಕಾರವನ್ನು ನಿರಾಕರಿಸಬೇಕಾಗುತ್ತದೆ. ಹೀಗೆ ಸಂಪೂರ್ಣವಾದ ನಿರಹಂಕಾರದ ಸ್ಥಿತಿಯೇ ನ 'ಮನ'ವಾಗಿರುತ್ತದೆ. ಇಲ್ಲಿ ನ'ಮನ'ವೆಂದರೆ ಮನೋವೃತ್ತಿಗಳು ( ಎಲ್ಲ ಅಂತಃಕರಣ ವೃತ್ತಿಗಳು ) ಇಲ್ಲದಿರುವುದು. ಆ ಸ್ಥಿತಿಯಲ್ಲಿ 'ನಾನು' ಎನ್ನುವ ಅಹಂಕಾರ ವೃತ್ತಿಯೂ, ಅಂದರೆ ತಿಳಿಯುವವನೂ ಕೂಡ ಇರುವುದಿಲ್ಲ. ತಿಳಿಯುವವನಿಗೆ ಸಾಪೇಕ್ಷವಾಗಿರುವುದೇ ತಿಳಿಯಲ್ಪಟ್ಟ ಈ ಜಡಜಗತ್ತು. ಅಂದರೆ ತಿಳಿಯುವವನು ಇಲ್ಲದಿದ್ದಲ್ಲಿ ತಿಳಿಯಲ್ಪಟ್ಟ ಈ ಜಡವೂ ಇರುವುದಿಲ್ಲ. ಹುಟ್ಟಾ ಕುರುಡನಿಗೆ ನೋಡುವವನಿಲ್ಲದೇ ನೋಡಲ್ಪಟ್ಟ 'ರೂಪ'ವು ಇರಲು ಸಾಧ್ಯವಿಲ್ಲ. ಹಾಗೆಯೇ ಐದು ಇಂದ್ರಿಯಗಳ ಸಹಿತ ಅಂತಃಕರಣವೂ ಇರದಿರುವ ಸುಷುಪ್ತಿಯಲ್ಲಿ ತಿಳಿಯುವವನಿಲ್ಲದೇ ಜಗತ್ತು ಇರುವಂತಿಲ್ಲ. ಅದೇ ರೀತಿಯಲ್ಲಿ 'ನಮನ'ದಲ್ಲಿ ವೃತ್ತಿರಹಿತಾವಸ್ಥೆಗೆ ಹೋಗುತ್ತೇವೆ. ಆದರೆ ಸುಷುಪ್ತಿಯಲ್ಲಿರುವಂತೆ 'ಪ್ರಜ್ಞಾ'ಹೀನ ಅವಸ್ಥೆಯು 'ನಮನ'ದಲ್ಲಿ ಇರುವುದಿಲ್ಲ.

**ಓ.ಸಂ. 135 :** ನಮ್ರತೆಯಲ್ಲಿ ತಾನು ದೇವನಿಗಿಂತ ಭಿನ್ನನಾಗಿ ಉಳಿಯಲಿಲ್ಲ ಅಂದರೆ ನಿಜವಾದ 'ನಮನ'ದಲ್ಲಿ ವೃತ್ತಿರಾಹಿತ್ಯವು ಉಂಟಾಗುವುದರಿಂದ ಅಲ್ಲಿ ಕೇವಲ ಶುದ್ಧ ಪ್ರಜ್ಞೆಯು ( ವೃತ್ತಿರಹಿತ ಜ್ಞಾನವು ) ಅಂದರೆ ಬ್ರಹ್ಮವು ಉಳಿಯುತ್ತದೆ. ಇಲ್ಲಿ 'ನಮನ' ಮಾಡುವವನಾಗಲೀ ಅಥವಾ ಅವನ ಅಖಂಡ ನಮನ ಕ್ರಿಯೆಯಾಗಲೀ ಸಾಧ್ಯವಿಲ್ಲವೆಂದು ತಿಳಿಯುವುದರಿಂದಲೇ ಅಖಂಡ ನಮನವು ಘಟಿಸುತ್ತದೆ.

**ವಿವರಣೆ :** ಹೀಗೆ 'ನಮನ'ದಲ್ಲಿ ಅಹಂಕಾರವು ಪೂರ್ಣವಾಗಿ ನಿರ್ಮೂಲನೆಯಾದಾಗ ದೇಹ ಸಹಿತ ಜಗತ್ತು ಉಳಿಯದೇ ವೃತ್ತಿರಹಿತಾವಸ್ಥೆಯು ಅನುಭವಕ್ಕೆ ಬರುತ್ತದೆ. ಅಲ್ಲಿ ನಮನ ಮಾಡುವ 'ನಾನು' ಪ್ರತ್ಯೇಕವಾಗಿ ಉಳಿಯದೇ ಶುದ್ಧಪ್ರಜ್ಞೆ ಅಥವಾ ಶುದ್ಧ ಜ್ಞಾನಾವಸ್ಥೆಯು ಮಾತ್ರ ಉಳಿದು ಎಲ್ಲವೂ ಅದರಲ್ಲೇ ಸೇರಿಹೋಗುತ್ತವೆ. ಅದೇ ಬ್ರಹ್ಮ ಅಥವಾ ಅದೇ ನಮ್ಮ ಇಷ್ಟದೇವತೆಯಾಗಿರುತ್ತದೆ. ಆದ್ದರಿಂದ 'ನಮನ'ಮಾಡಲು ಯಾವುದಾದರೊಂದು ವಿಗ್ರಹವನ್ನೋ ಇಲ್ಲವೇ ಪ್ರತೀಕವನ್ನು ತೆಗೆದುಕೊಂಡು ನಮನ ಕ್ರಿಯೆಯಲ್ಲಿ ಆ ಸಗುಣ ಪ್ರತೀಕವೇ ನಿರ್ಗುಣ, ನಿರಾಕಾರವಾಗಿ ಮಾರ್ಪಾಡಾಗುತ್ತದೆ. ಅಂದರೆ ಕೊನೆಗೆ ನಾನಾಗಲೀ ಮತ್ತು ನನ್ನ ನಮನ ಕ್ರಿಯೆಯಾಗಲೀ ಇರಲು ಸಾಧ್ಯವಾಗದೇ ಕೇವಲ ಅದ್ವಯ ಬ್ರಹ್ಮನು ಮಾತ್ರ ಉಳಿಯುವುದು ಸಾಧ್ಯವಾಗುತ್ತದೆ. ಇದು ಅತ್ಯಂತ ಹೆಚ್ಚಿನ ಯಥಾರ್ಥ ಜ್ಞಾನವಾಗಿರುತ್ತದೆ. ಈ ಅರ್ಥದಲ್ಲಿ 'ನಮನ' ಕ್ರಿಯೆಯಿಲ್ಲದೇ ತನಗೆ ತಾನೇ ಅಖಂಡ ನಮನವನ್ನು ಸಲ್ಲಿಸಿದಂತಾಗುತ್ತದೆ.

**ಓ.ಸಂ.136 :** ಈ ಪ್ರಕಾರದ ಸಂಪೂರ್ಣ ಅಹಂಕಾರ–ತ್ಯಾಗದ 'ನಮನ'ವು ಆಗದಿದ್ದರೆ ಆಗ 'ನಮನ ವೃತ್ತಿ'ಗೆ ಸಾಕ್ಷಿಯಾಗಿ ಇರುವುದನ್ನು ಅಭ್ಯಾಸಮಾಡಬೇಕು. ಆಗ ಮನಸ್ಸು ಈ ಸಾಕ್ಷಿಯಲ್ಲಿಯೇ ಕ್ರಮೇಣ ಲೀನವಾಗುತ್ತದೆ.

**ವಿವರಣೆ :** ಈವರೆಗೆ ಹೇಳಿದ ಸಂಪೂರ್ಣ ಅಹಂಕಾರ–ತ್ಯಾಗದ 'ನಮನ'ವು ಕೆಲವರಿಗೆ ಸಾಧ್ಯವಾಗಿವುದಿಲ್ಲ. ಏಕೆಂದರೆ ಅದು ಅಷ್ಟು ಸುಲಭವಾಗಿ ಆಗುವಂತಹುದಲ್ಲ. ಒಂದು ಕ್ಷಣದ ವೃತ್ತಿರಹಿತ ಸ್ಥಿತಿಯು ಬಂದಕೂಡಲೇ ಪುನಃ ಮನೋವೃತ್ತಿಯೂ ಮತ್ತು ಅದರ ಜೊತೆಗೆ ಅಹಂಕಾರವೃತ್ತಿಯೂ ಕಾಣಿಸಿಕೊಳ್ಳುತ್ತವೆ. ಆದ್ದರಿಂದ ಈ ವಿಧಾನವು ಆಳವಾದ ವಿಚಾರದ ಹಿನ್ನೆಲೆಯಿಲ್ಲದವರಿಗೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ಓವೀ ಮತ್ತು ಮುಂದಿನ ಓವೀಗಳು ಬೇರೊಂದು ವಿಧಾನವನ್ನು ತಿಳಿಸುತ್ತವೆ. ಇಲ್ಲಿ 'ನಮನವೃತಿ'ಯನ್ನೇ ಸಾಕ್ಷೀಭಾವದಿಂದ ಅವಲೋಕಿಸಲು ಅಭ್ಯಾಸಮಾಡಬೇಕು. ಅಂದರೆ ಯಾವುದೇ ಕ್ರಿಯೆಗೂ ಆಧಾರವಾಗಿ ಸಂಬಂಧಪಟ್ಟ ಮನೋವೃತ್ತಿಯು ಬರುವುದು ಸ್ವಾಭಾವಿಕ. ಹಾಗೆಯೇ ನಮನವನ್ನು ಮಾಡಬೇಕೆಂದು ಅನ್ನಿಸುವುದೇ ನಮನಕ್ರಿಯೆಗೆ ಬೇಕಾದ ಮನೋವೃತ್ತಿಯು. ಈ ಮನೋವೃತ್ತಿಯು ಇರುವುದೆಂದು ತಿಳಿಯುವುದೇ

ಸಾಕ್ಷಿಯಿಂದ. ಹೀಗೆ ಸಾಕ್ಷಿಯಿಂದ ಸಂಭವಿಸುವ 'ವೃತ್ತಿ ವೀಕ್ಷಣೆ'ಯನ್ನು ಪ್ರಾರಂಭಿಸಿದಾಗ ಆ ವೃತ್ತಿಯು ಸಂಪೂರ್ಣವಾಗಿ ಸಾಕ್ಷಿಯಲ್ಲಿಯೇ ಲೀನವಾಗಿ ಕೇವಲ ಸಾಕ್ಷಿಯೇ ಉಳಿಯುವುದು ಅನುಭವಕ್ಕೆ ಬರುವುದು.

**ಓ.ಸಂ. 137:** ಹೀಗೆ ಸಾಕ್ಷೀಭಾವದಿಂದುಂಟಾದ ವೃತ್ತಿರಾಹಿತ್ಯವೂ 'ನಮನ' ವೆಂದೆನಿಸಿಕೊಳ್ಳುತ್ತದೆ. ಇದರಿಂದಲೂ ಮೋಕ್ಷವನ್ನು ಪಡೆಯಬಹುದು. ಇದೂ ಆಗದಿದ್ದಲ್ಲಿ ಸರ್ವದರಲ್ಲಿಯೂ ಬ್ರಹ್ಮನೇ ಇರುವನೆಂದು ತಿಳಿಯಬೇಕು.

**ವಿವರಣೆ:** ಹಿಂದಿನ ಓವೀಯಲ್ಲಿ ವೃತ್ತಿಯ ಸಾಕ್ಷಿತ್ವದಿಂದ ಉಂಟಾಗುವ ವೃತ್ತಿರಾಹಿತ್ಯದಿಂದ ಅದ್ವಯ ಆತ್ಮನ ಸಾಕ್ಷಾತ್ಕಾರವಾಗುವುದೆಂದು ಹೇಳಲಾಗಿದೆ. ಈ ಓವೀಯಲ್ಲಿ ಈ ಬಗೆಯ ನಮನದಿಂದಲೂ ಮೋಕ್ಷವನ್ನು ಸಾಧಿಸಬಹುದೆಂದು ತಿಳಿಸಲಾಗಿದೆ. ಈ ವಿಧಾನದಿಂದಲೂ ಸಾಕ್ಷೀರೂಪದ ಅದ್ವಯಾತ್ಮನು ಸ್ವಯಂ ಪ್ರಕಾಶನಿರುವುದು ತಿಳಿಯುತ್ತದೆ. ಇದರಿಂದ ತಾನು ದೇಹವಲ್ಲವೆಂಬ ಜ್ಞಾನವಾಗಿ ಜೀವತ್ವವು ನಾಶವಾಗುವುದರಿಂದ ತತ್ಕ್ಷಣವೇ ಉಂಟಾಗುವ ಆತ್ಮಜ್ಞಾನದಿಂದ ಮೋಕ್ಷವು ಲಭಿಸುತ್ತದೆ. ಇದರಲ್ಲೂ ಹಿಂದಿನ ವಿಧಾನದಂತೆ ಅಖಂಡ ನಮನವು ಘಟಿಸುತ್ತದೆ. ಆದರೆ ಈ ವಿಧಾನವೂ ಕೆಲವರಿಗೆ ಕಷ್ಟವೆನಿಸಬಹುದು. ಏಕೆಂದರೆ ಈ ವಿಧಾನದಲ್ಲಿ ಭಕ್ತನು ಶ್ರವಣ-ಮನನಗಳಿಂದ 'ಸಾಕ್ಷಿ'ಎಂದರೇನೆಂಬುದನ್ನೂ ತಿಳಿದಿರಬೇಕಾಗುತ್ತದೆ. ಅಲ್ಲದೇ ವೃತ್ತಿಗೆ ಸಾಕ್ಷಿಯಾಗಿರುವುದನ್ನೂ ಅಭ್ಯಾಸದಿಂದ ಕಲಿಯಬೇಕಾಗಿರುತ್ತದೆ. ಈ ವಿಧಾನದಿಂದ ನಮನವು ಸಾಧ್ಯವಾಗದಿದ್ದರೆ ಆಗ ಸರ್ವದರಲ್ಲೂ ಬ್ರಹ್ಮನೇ ಇರುವ ಅಂಶವು ಮನದಟ್ಟಾಗಿರ ಬೇಕಾಗುತ್ತದೆ. ಇದರ ಬಗ್ಗೆ ಮುಂದಿನ ಓವೀಯು ವಿಶದಪಡಿಸುತ್ತದೆ.

**ಓ.ಸಂ. 138:** ಸರ್ವದರಲ್ಲೂ ಪರಮಾತ್ಮನಿರುವನೆಂದು ತಿಳಿದಾಗ ಪರಮಾತ್ಮನು ತನ್ನಲ್ಲೂ ಇರುವನೆಂದು ತಿಳಿದುಬರುತ್ತದೆ. ಆದರೆ ಇದು ಕೇವಲ ಪರೋಕ್ಷಜ್ಞಾನವಾಗುತ್ತದೆಯೇ ಹೊರತು ತಾನೇ ಸ್ವತಃ ಬ್ರಹ್ಮನಾಗಲಿಲ್ಲ.

**ವಿವರಣೆ:** ಜನ ಸಾಮಾನ್ಯರಿಗಾಗಿ ಈ ಓವೀಯಿಂದ ಹೇಗೆ ನಮನವನ್ನು ಮಾಡಬೇಕೆಂದು ಹೇಳಲಾಗಿದೆ. ಮೊದಲು ಪರಮಾತ್ಮನು ಸರ್ವವ್ಯಾಪಕನಿದ್ದಾನೆಂದು ತಿಳಿದುಕೊಳ್ಳಬೇಕು. ಹೀಗೆ ತಿಳಿದುಕೊಳ್ಳುವುದರಿಂದ ಪರಮಾತ್ಮನು ತನ್ನನ್ನೂ ಕೂಡ ವ್ಯಾಪಿಸಿದ್ದಾನೆಂದು ತಿಳಿದು ಬರುತ್ತದೆ. ಅಂದರೆ ಸ್ವರೂಪತಃ ತಾನು ನಿಜವಾಗಿ ಬ್ರಹ್ಮನೇ ಇದ್ದು ತಾನು ದೇಹವಲ್ಲವೆಂದು ತಿಳಿದು ಬರುತ್ತದೆ. ಆದರೆ ಈ ಜ್ಞಾನವು ಇತರರಿಂದ ಅಥವಾ ಶಾಸ್ತ್ರಗಳಿಂದ ತಿಳಿದು ಬಂದಿರುವುದರಿಂದ ಇದು ಕೇವಲ ಪರೋಕ್ಷಜ್ಞಾನವಾಗಿರುತ್ತದೆ ಅಂದರೆ ಇದು ಕೇವಲ

ಶಬ್ದಜ್ಞಾನವಾಗಿರುತ್ತದೆ. ಆದರೆ ಈ ಪರೋಕ್ಷಜ್ಞಾನವು ಅಪರೋಕ್ಷಜ್ಞಾನವಾಗದ ಹೊರತು ಭಕ್ತನಿಗೆ ಮುಕ್ತಿಯು ಲಭಿಸುವುದಿಲ್ಲ. ಅಂದರೆ ಅವನು ಬ್ರಹ್ಮನಾಗುವುದು ಈ ಪರಿಸ್ಥಿತಿಯಲ್ಲಿ ಸಾಧ್ಯವಾಗುವುದಿಲ್ಲ.

ಓ.ಸಂ.139 : ಕೇವಲ ಪರೋಕ್ಷಜ್ಞಾನವನ್ನು ಹೊಂದಿದ ಭಕ್ತನು ಸರ್ವಭೂತಗಳಲ್ಲಿಯೂ ಪರಮಾತ್ಮನಿರುವುದರಿಂದ ದೇವ ಭಾವವನ್ನು ಹೊಂದಿದವನಾಗಿ ಸಕಲ ಪ್ರಾಣಿಗಳಿಗೂ ವಂದಿಸಬೇಕು. ಆದರೆ ಚೇಳು, ಹಾವು, ಮುಂತಾದ ದುಷ್ಟಪ್ರಾಣಿಗಳಿಗೆ ದೂರದಿಂದಲೇ ನಮಸ್ಕರಿಸಬೇಕು.

ವಿವರಣೆ: ಪರೋಕ್ಷಜ್ಞಾನವನ್ನು ಪಡೆದವರಿಗೆ ಸರ್ವಾತ್ಮೈಕ್ಯಾನುಭವದಿಂದ ಅವರ ಜ್ಞಾನವು ಅಪರೋಕ್ಷವಾಗಲು ಅನುಸರಿಸಬೇಕಾದ ವಿಧಾನವನ್ನು ಈ ಓವೀಯಲ್ಲಿ ತಿಳಿಸಲಾಗಿದೆ. ಸರ್ವಭೂತಗಳಲ್ಲಿಯೂ, ಪರಮಾತ್ಮನು ವ್ಯಾಪಕನಾಗಿರುವುದರಿಂದ ಸಕಲರನ್ನೂ ಹಾಗೂ ಸರ್ವಪ್ರಾಣಿಗಳನ್ನೂ ವಂದಿಸಲು ಪ್ರಾರಂಭಿಸಬೇಕು. ವೈಯಕ್ತಿಕವಾಗಿ, 'ಅವರಲ್ಲಿ ದೇವತ್ವವು ಇರುವುದು' ಅವರಿಗೆ ತಿಳಿದಿರುವುದಿಲ್ಲವೆಂಬುದು ನಿಜವಾದರೂ ಸಾಧಕನಾದ ಈ ಭಕ್ತನು ಎಲ್ಲರಲ್ಲೂ ದೇವತ್ವವಿರುವುದನ್ನು ತಿಳಿದು ಅವರಿಗೆ ವಂದಿಸಬೇಕು. ಹಸುಗಳನ್ನು, ಹಾವುಗಳನ್ನು ಹಾಗೂ ತುಳಸಿ, ಬಿಲ್ವಪತ್ರೆ ಮುಂತಾದ ಸಸ್ಯಗಳನ್ನು ಪೂಜ್ಯಭಾವನೆಯಿಂದ ನೋಡಬೇಕು. ಚೇಳು, ಸರ್ಪ, ಮುಂತಾದ ದುಷ್ಟಪ್ರಾಣಿಗಳನ್ನು ಮುಟ್ಟದೇ ದೂರದಿಂದಲೇ ಅವುಗಳಿಗೆ ವಂದಿಸಬೇಕು. ಅವುಗಳನ್ನು ಮುಟ್ಟಲು ಹೋದರೆ ಅವುಗಳಿಂದ ಅಪಾಯವು ಆಗಬಹುದು.

ಓ.ಸಂ. 140: ಸರ್ವವ್ಯಾಪಕನಾದ ಪರಮಾತ್ಮನು ಚೇಳು-ಹಾವುಗಳಲ್ಲಿಯೂ ಕೂಡ ಇದ್ದರೂ ಅವುಗಳ ಮೂಲಕ ಅವನು ಕಚ್ಚುವುದಾದರೂ ಯಾರನ್ನು? ಆದುದರಿಂದ ಕಚ್ಚುವುದಕ್ಕೆ ಅವನು ಜವಾಬ್ದಾರಿಯಾಗಲಾರ. ಅವುಗಳ ಕಚ್ಚುವಿಕೆಗೆ ಅವುಗಳ ಸ್ವಭಾವವೇ ಕಾರಣವಾಗುತ್ತದೆ.

ವಿವರಣೆ: ಒಬ್ಬನೇ ಪರಮಾತ್ಮನು ಸರ್ವಪ್ರಾಣಿಗಳಲ್ಲೂ ವ್ಯಾಪಿಸಿದಾಗ ಹಿಂಸಾತ್ಮಕವಾಗಿರುವ ಚೇಳು, ಹಾವು ಮುಂತಾದವುಗಳ ದುಷ್ಟ ಸ್ವಭಾವಕ್ಕೆ ಅವನು ಜವಾಬ್ದಾರನಾಗುವುದಿಲ್ಲ. ಏಕೆಂದರೆ ಪರಮಾತ್ಮನು ಸಕಲದರಲ್ಲೂ ವ್ಯಾಪಕನಾಗಿರುವುದರಿಂದ ಯಾರನ್ನು ಕಚ್ಚಲು ಸಾಧ್ಯವಾದೀತು? ಹಾಗೆಯೇ ಒಳ್ಳೆಯವರ ಮತ್ತು ಸಾಧು ಪ್ರಾಣಿಗಳ ಒಳ್ಳೆಯ ಸ್ವಭಾವಕ್ಕೂ ದೇವರು ಕಾರಣನಾಗುವುದಿಲ್ಲ. ಅವನು ಕೇವಲ ಪ್ರಚೋದಕನಷ್ಟೆ. ಆಯಸ್ಕಾಂತವು ಏನೂ ಮಾಡದೇ ಕಬ್ಬಿಣದ ರಜಗಳ (ಕಣಗಳ) ಚಲನೆಗೆ ಕಾರಣವಾಗುವಂತೆ ಪರಮಾತ್ಮನು ನಮ್ಮ ವರ್ತನೆಗಳಿಗೆ ಕಾರಣನಾಗುತ್ತಾನೆ. ಅಂತರ್ ಬಾಹ್ಯಗಳಲ್ಲಿ ತೋರುವುದೆಲ್ಲವೂ ಮೊದಲು ವಾಸನಾ ರೂಪದಲ್ಲಿ ಅಸತ್-ಜಡ-ದುಃಖ ಸ್ವರೂಪವಾಗಿತ್ತದೆ. ಇದೆಲ್ಲ ಮೊದಲು ಸುಪ್ತವಾಗಿರುವುದಕ್ಕೂ ನಂತರ ಅಸ್ತಿ-

ಪ್ರಕಟವಾಗುವುದಕ್ಕೂ ಪರಮಾತ್ಮನ ಕೇವಲ ಭಾತಿ-ಪ್ರಿಯ ಸ್ವರೂಪದಿಂದ ನಾಮ-ರೂಪಗಳನ್ನು ಧರಿಸಿ ಸನ್ನಿಧಿಯೇ ಕಾರಣವಾಗುತ್ತದೆ. ಆದುದರಿಂದ ದುಷ್ಟಪ್ರಾಣಿಗಳಾದ ಚೇಳು, ಹಾವು ಮುಂತಾದ ಪ್ರಾಣಿಗಳು ಅವುಗಳ ದುಷ್ಟ ಸ್ವಭಾವಕ್ಕೆ ಅನುಗುಣವಾದ ಹಿಂಸಾತ್ಮಕ ವರ್ತನೆಯನ್ನು ತೋರಿಸುತ್ತವೆ.

**ಓ.ಸಂ. 141:** ಚೇಳು-ಸರ್ಪಗಳು ದುಷ್ಟಪ್ರಾಣಿಗಳೆಂದು ಸಂಪೂರ್ಣವಾಗಿ ತಿಳಿಯಲ್ಪಡುತ್ತವೆ. ಇಂತಹ ಪ್ರಾಣಿಗಳ ಸಹವಾಸದಿಂದ ಭಯಾನಕ ( ದಾರುಣ ) ವಾದ ದುಃಖವು ಪ್ರಾಪ್ತಿಯಾಗುತ್ತದೆ.

**ವಿವರಣೆ :** ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿರುವ ಅದರಲ್ಲೂ ಚೆನ್ನಾಗಿ ತಿಳಿದಿರುವ ಪ್ರಾಣಿಗಳೆಂದರೆ ಚೇಳು ಮತ್ತು ಸರ್ಪಗಳು. ಇವುಗಳು ದುಷ್ಟ ಸ್ವಭಾವದವು ಎಂಬುದು ಎಲ್ಲರಿಗೂ ನಿಸ್ಸಂಶಯವಾಗಿ ತಿಳಿದಿರುತ್ತದೆ. ಇಂತಹ ದುಷ್ಟ ಪ್ರಾಣಿಗಳನ್ನು ಯಾರೂ ಸಾಕುವುದಿಲ್ಲ. ಅಂದರೆ ಅವುಗಳ ಸಹವಾಸವನ್ನು ಯಾರೂ ಅಪೇಕ್ಷಿಪಡುವುದಿಲ್ಲ. ಆದರೆ ಕೆಲವರು ಅಂದರೆ ಹಾವಾಡಿಗರು ಎಲ್ಲ ತರಹದ ಹಾವುಗಳನ್ನು ಹಿಡಿಯುವುದನ್ನೇ ಉದ್ಯೋಗವನ್ನಾಗಿ ಮಾಡಿಕೊಂಡಿರುತ್ತಾರೆ. ಅವರಿಗೆ ಹಾವುಗಳ ಸಹವಾಸವು ತಪ್ಪಿದ್ದಲ್ಲ. ಆದರೆ ಇಂತಹವರಿಗೂ ಕೂಡ ಅಪಾಯವು ಇದ್ದೇ ಇರುತ್ತದೆ. ಅವರು ಮೊದಲು ಸರ್ಪದ ಹಲ್ಲುಗಳನ್ನು ಎಚ್ಚರಿಕೆಯಿಂದ ಕಿತ್ತಮೇಲೆಯೇ ಅದನ್ನು ಅವರ ವಶಕ್ಕೆ ತೆಗೆದುಕೊಳ್ಳುತ್ತಾರೆ. ಅವರು ಆ ವೇಳೆಯಲ್ಲಿ ಸ್ವಲ್ಪ ಎಚ್ಚರ ತಪ್ಪಿದರೂ ಕೂಡ ಅನಾಹುತವು ಸಂಭವಿಸಿದ ಉದಾಹರಣೆಗಳಿವೆ.

**ಓ.ಸಂ.142 :** ಪರಮಾತ್ಮನು ಎಲ್ಲ ಕಡೆಯೂ ವ್ಯಾಪಿಸಿದಂತೆ ಮನುಷ್ಯನ ದೇಹವನ್ನೂ ವ್ಯಾಪಿಸಿದ್ದಾನೆ. ಅಂದರೆ ಅವನು ಕೈ-ಕಾಲುಗಳಲ್ಲೂ ತುಂಬಿದ್ದಾನೆ. ಎಂದಾಕ್ಷಣ ಕೈಗಳಿಂದ ನಡೆಯುವುದಾಗಲೀ, ಕಾಲುಗಳಿಂದ ದಾನವನ್ನು ಕೊಡುವುದಾಗಲೀ ಸಾಧ್ಯವಿಲ್ಲ.

**ವಿವರಣೆ:** ಅನಂತನಾದ ಪರಮಾತ್ಮನು ಸಕಲ ವಸ್ತುಗಳಲ್ಲೂ ತುಂಬಿಕೊಂಡು ಓತ-ಪ್ರೋತವಾಗಿ ವ್ಯಾಪಿಸಿದ್ದಾನೆ. ಅವನು ವ್ಯಾಪಿಸದೇ ಇರುವ ಯಾವ ಪ್ರಾಣಿಯೂ ಇರುವುದಿಲ್ಲ. ಮನುಷ್ಯನಲ್ಲೂ ಸಕಲ ಅವಯವಗಳಲ್ಲೂ ಅವನೇ ನೆಲಸಿದ್ದಾನೆ. ಕೈ-ಕಾಲುಗಳಲ್ಲೂ ಅವನ ಇರುವಿಕೆಯಿಂದಲೇ ಅವುಗಳು ತಮ್ಮ ಕೆಲಸ ಕಾರ್ಯಗಳನ್ನು ನಡೆಸಿಕೊಂಡು ಹೋಗುವ ಸಾಮರ್ಥ್ಯವು ಅವುಗಳಿಗೆ ಬಂದಿರುತ್ತದೆ. ಆದರೆ ಹೀಗೆ ಸಕಲಕ್ಕೂ ಅವನೇ ಕಾರಣಕರ್ತನಾದರೂ ಕೈಗಳ ಕೆಲಸವನ್ನು ಅಂದರೆ ದಾನ ಮುಂತಾದ ಕೊಡುವ ಕೆಲಸವನ್ನು ಕಾಲುಗಳು ಮಾಡಲು ಆಗುವುದಿಲ್ಲ. ಹಾಗೆಯೇ ನಡೆದಾಡುವ ಕಾಲುಗಳ ಕೆಲಸವನ್ನು ಕೈಗಳಿಂದ ಮಾಡಲೂ ಆಗುವುದಿಲ್ಲ. ಆದರೆ ಪ್ರತಿಯೊಂದಕ್ಕೂ ಪರಮಾತ್ಮನೇ ಕಾರಣನಾದರೂ ಆಯಾ ಜಡ ಉಪಾಧಿಗಳ ಸಂಪರ್ಕದಿಂದ ಆಯಾ ಜಡ ಉಪಾಧಿಗಳ ನಿಮಿತ್ತ ಆಯಾ ಕೆಲಸಕಾರ್ಯಗಳು ಆಯಾ ಉಪಾಧಿಗಳ ಹೆಸರಿನಲ್ಲಿಯೇ ನಡೆಯುತ್ತವೆ.

ಓ.ಸಂ. 143 : ಇದೇ ರೀತಿ ಸಜ್ಜನರಲ್ಲೂ ಹಾಗೂ ದುರ್ಜನರಲ್ಲೂ ಒಬ್ಬನೇ ಅನಂತನಾದ ಪರಮಾತ್ಮನು ವ್ಯಾಪಿಸಿದ್ದಾನೆ. ಆದರೆ ಸಜ್ಜನ ಸಂಗದಿಂದ ನಮಗೆ ಸುಖವೂ ಮತ್ತು ದುರ್ಜನ ಸಂಗದಿಂದ ದುಃಖವೂ ಪ್ರಾಪ್ತವಾಗುತ್ತದೆ.

ವಿವರಣೆ: ಹಿಂದೆ ಹೇಳಿದಂತೆ ಆತ್ಮನು ಸೋಪಾಧಿಕನಾದಾಗ ಅಂದರೆ ಅನಾದಿಯಾದ ಅಜ್ಞಾನದಿಂದ ಆತ್ಮನು ತನ್ನನ್ನು ತಾನೇ ಮರೆತು ಜಡ ಉಪಾಧಿಯೆಂದು ತನ್ನನ್ನು ತಿಳಿದಾಗ, ಆ ಉಪಾಧಿಯ ಕಾರ್ಯವೈಖರಿಯನ್ನೇ ತನ್ನದೆಂದು ತಪ್ಪಾಗಿ ನಿರ್ಣಯಿಸುತ್ತಾನೆ. ಸ್ಥೂಲದೇಹ ಮತ್ತು ಅಂತಃಕರಣೋಪಾಧಿಯನ್ನು ಹೊಂದಿರುವ ಆತ್ಮನು ತಾನೇ ಜೀವಭಾವದಿಂದ 'ನಾನು' ಎಂದು ವ್ಯವಹರಿಸುತ್ತಾನೆ. ಸಜ್ಜನರಲ್ಲೂ ಹಾಗೂ ದುರ್ಜನರಲ್ಲೂ ಒಬ್ಬನೇ ಆತ್ಮನು ವ್ಯಾಪಕನಿದ್ದರೂ ಆಯಾ ಉಪಾಧಿಭೇದದಿಂದ ವಿವಿಧ 'ಜೀವ'ರಾಗಿ ಒಬ್ಬನೇ ಆತ್ಮನು ವ್ಯವಹರಿಸುತ್ತಿದ್ದಾನೆ. ಅಂದರೆ ಸಜ್ಜನರ ಅಂತಃಕರಣವು ಒಳ್ಳೆಯ ವಾಸನೆಗಳಿಂದ ತುಂಬಿರುವುದರಿಂದ ಅವರ ನಡವಳಿಕೆಯು ತಮಗೂ ಹಾಗೂ ಇತರರಿಗೂ ಒಳ್ಳೆಯದನ್ನೇ ಅಂದರೆ ಸುಖವನ್ನೇ ತರುತ್ತದೆ. ಸಜ್ಜನ ಸಂಗವು ನಮಗೆ ಒಳ್ಳೆಯದನ್ನೇ ಮಾಡುವುದನ್ನು ಕಂಡಿದ್ದೇವೆ. ಹಾಗೆಯೇ ದುರ್ಜನರ ಅಂತಃಕರಣವು ದುಷ್ಟವಾಸನೆಗಳಿಂದ ತುಂಬಿರುವುದರಿಂದ ಅವರ ನಡವಳಿಕೆಯೂ ಕೆಟ್ಟದ್ದಾಗಿರುತ್ತದೆ. ಅದು ತಮಗೂ ಹಾಗೂ ಇತರರಿಗೂ ಕೆಟ್ಟದ್ದನ್ನೇ ಮಾಡುತ್ತದೆ. ಆದ್ದರಿಂದ ದುಷ್ಟರ ಸಹವಾಸವು ಸದಾ ನಮಗೆ ದುಃಖವನ್ನೇ ತರುತ್ತದೆ.

ಓ.ಸಂ. 144 : ಆದುದರಿಂದ ಸರ್ವರಲ್ಲೂ ದೇವರು ಇರುವುದು ನಿಜವಾದರೂ, ಸಜ್ಜನರಿಗೆ ಹತ್ತಿರ ಹೋಗಿ ನಮನ ಮಾಡಬೇಕು. ಆದರೆ ದುರ್ಜನರಿಗೆ ಮಾತ್ರ ದೂರದಿಂದಲೇ ನಮನವನ್ನು ಮಾಡಬೇಕಾಗುತ್ತದೆ.

ವಿವರಣೆ: ಇಲ್ಲಿಯವರೆಗೆ ದುಷ್ಟಪ್ರಾಣಿಗಳ ಹಾಗೂ ಮನುಷ್ಯನ ಕೈಕಾಲುಗಳ ಉದಾಹರಣೆಗಳ ಮೂಲಕ ಆತ್ಮನು ನಿಶ್ಚಲತತ್ತ್ವವಾಗಿದ್ದರೂ ಅವನ ಸನ್ನಿಧಿ ಮಾತ್ರದಿಂದ ಅವನ ಜಡ ಉಪಾಧಿಗಳ ವೈಶಿಷ್ಟ್ಯಕ್ಕೆ ಅನುಗುಣವಾಗಿ ಕಾರ್ಯವೈಖರಿಗಳು ನಡೆಯುತ್ತವೆ ಎಂಬ ಸತ್ಯವನ್ನು ತಿಳಿಸಲಾಗಿದೆ. ಆದುದರಿಂದ ಪರೋಕ್ಷಜ್ಞಾನವಾಗಿರುವ ಭಕ್ತರು ಅಪರೋಕ್ಷಜ್ಞಾನವನ್ನು ಪಡೆಯಲು ಸರ್ವರಿಗೂ ನಮಸ್ಕರಿಸಬೇಕೆಂದು ಹೇಳಲಾಗಿದೆ. ಆದರೆ ಎಲ್ಲರಲ್ಲೂ ಸಮನಾಗಿ ಪರಮಾತ್ಮನಿದ್ದರೂ ಸಜ್ಜನರ ಸಹವಾಸವನ್ನು ಮಾಡಬೇಕೇ ಹೊರತು ದುರ್ಜನರದ್ದಲ್ಲ ಎಂದು ತಿಳಿಸಲಾಗಿದೆ. ಅಂದರೆ ಸಜ್ಜನರಿಗೆ ಸಮೀಪ ಹೋಗಿ ನಮಿಸಬಹುದಾದರೆ ದುರ್ಜನರಿಗೆ ಮಾತ್ರ ದೂರದಿಂದಲೇ ನಮಿಸಬೇಕು ಎನ್ನುವುದನ್ನು ಕಾರಣ ಸಹಿತ ಸ್ಪಷ್ಟಪಡಿಸಲಾಗಿದೆ. ಹೀಗೆ ಸರ್ವರಿಗೂ ಮಾಡುವ ವಂದನೆಯ ಪರಿಣಾಮವನ್ನು ಮುಂದಿನ ಓವೀಯು ತಿಳಿಸುತ್ತದೆ.

ಓ.ಸಂ.145 : ಹೀಗೆ ಸರ್ವರಿಗೂ ನಮನ ಮಾಡುವುದರಿಂದ ರಾಗ-ದ್ವೇಷಗಳು ನಿ:ಶೇಷವಾಗಿ ನಾಶವಾಗಿ ಚಿತ್ತಶುದ್ಧಿಯು ಉಂಟಾಗುತ್ತದೆ. ನಂತರ ಕಾಲಕ್ರಮದಲ್ಲಿ ಗುರುವಿನ ಕೃಪೆಯಿಂದ ಆಗುವ ಉಪದೇಶದಿಂದ ಅವರಿಗೆ ಅಪರೋಕ್ಷ ಜ್ಞಾನವೂ ಲಭಿಸುತ್ತದೆ.

**ವಿವರಣೆ:** ನಿಜ ಅರ್ಥದಲ್ಲಿ 'ನಮನ' ಮಾಡುವುದು ಅಂದರೆ ವೃತ್ತಿರಹಿತವಾಗುವುದು. ಕಷ್ಟವಾಗಿರುವಂತಹ ಸಾಮಾನ್ಯ ಭಕ್ತರಿಗೆ ಸರ್ವರಲ್ಲೂ ಪರಮಾತ್ಮನಿದ್ದಾನೆ ಎಂಬ ಪರೋಕ್ಷ ಜ್ಞಾನವು ಮಾತ್ರ ಆಗಿರುತ್ತದೆ. ಇಂತಹವರಿಗೆ ಚಿತ್ತಶುದ್ಧಿಯ ಕೊರತೆಯಿರುವುದರಿಂದ ಅಪರೋಕ್ಷಜ್ಞಾನವು ಆಗಿರುವುದಿಲ್ಲ. ಅಂತಹವರಿಗಾಗಿ ಸರ್ವದಕ್ಕೂ ಹಾಗೂ ಸರ್ವರಿಗೂ ವಂದಿಸುವುದರಿಂದ ತಾನು ಪಡೆದ ಚಿತ್ತಶುದ್ಧಿಯಿಂದ ಗುರುಕೃಪೆಯಾಗಿ ಪರಮಾತ್ಮನು ಸರ್ವಾಂತರ್ಯಾಮಿಯಾಗಿದ್ದು ಅವನು ತನ್ನಲ್ಲೂ ಇದ್ದಾನೆಂದು ಸಾಕ್ಷಾತ್ಕರಿಸಿಕೊಂಡು ಅಪರೋಕ್ಷಜ್ಞಾನವನ್ನು ಪಡೆಯುವ ಬಗೆಯನ್ನು ಹೇಳಲಾಗಿದೆ. ಯಾವ ಭೇದವಿಲ್ಲದೇ ಸರ್ವರಿಗೂ ವಂದಿಸುವುದರಿಂದ ಅವರ ಬಗ್ಗೆ ಇರಬಹುದಾದ ರಾಗ-ದ್ವೇಷಗಳು ನಾಶವಾಗಿ ಚಿತ್ತಶುದ್ಧಿಯು ಉಂಟಾಗುತ್ತದೆ. ಇಂತಹವರಿಗೆ ಅತೀ ಶೀಘ್ರದಲ್ಲಿ ಗುರು ಕೃಪೆಯಿಂದ ವೇದಾಂತದ ಉಪದೇಶವಾಗಿ ಅಪರೋಕ್ಷಾನುಭವವೂ ಹಾಗೂ ಅಪರೋಕ್ಷಜ್ಞಾನವೂ ಲಭಿಸುವುದು.

**ಓ.ಸಂ. 146 :** ಈ ಅಪರೋಕ್ಷಜ್ಞಾನವನ್ನೇ ಮುಕ್ತಿಯೆನ್ನುವರು. ಹೀಗೆ ಸಕಲರಿಗೆ ನಮನವನ್ನು ಮಾಡಲು ಆಗದಿದ್ದವರು ದೇವತಾ ಮೂರ್ತಿಗಳಿಗೆ ಹಾಗೂ ಸಂತರಿಗೆ ಮತ್ತು ಸಂತರ ಮೂರ್ತಿಗಳಿಗೆ ವಿಶ್ವಾಸದಿಂದ ಸಾಷ್ಟಾಂಗ ನಮಸ್ಕಾರ ಮಾಡಬೇಕು.

**ವಿವರಣೆ:** ಹೀಗೆ ಎರಡನೆಯ ವರ್ಗದ ಸಾಮಾನ್ಯ ಜನಗಳಿಗೆ ಸರ್ವರಲ್ಲೂ ದೇವನನ್ನು ನೋಡಿ ಅವರಿಗೆಲ್ಲ ವಂದಿಸುವ ಅಭ್ಯಾಸಮಾಡಿಕೊಂಡರೆ ಅವರಿಗೆ ರಾಗ-ದ್ವೇಷಗಳೆಲ್ಲ ಮಾಯವಾಗಿ ಚಿತ್ತಶುದ್ಧಿ ಉಂಟಾಗುತ್ತದೆ. ನಂತರ ಗುರುಕೃಪೆಯಿಂದಲೂ ಹಾಗೂ ಗುರೂಪದೇಶದಿಂದಲೂ ಬ್ರಹ್ಮಾತ್ಮೈಕ್ಯದ ಅಪರೋಕ್ಷಜ್ಞಾನವು ಲಭಿಸುತ್ತದೆ. ಇಂತಹ ಜ್ಞಾನವನ್ನೇ ಮುಕ್ತಿಯೆಂದು ಕರೆಯುತ್ತಾರೆ. ಕೆಲವರಿಗೆ ರಾಗ-ದ್ವೇಷಗಳು ಸುಲಭವಾಗಿ ಬಿಟ್ಟು ಹೋಗುವಂತಿರುವುದಿಲ್ಲ. ಅಂತಹ ಮೂರನೆಯ ವರ್ಗದ ಜನರು ಶತೃಗಳಾದಿಯಾಗಿ ಸಕಲರಿಗೂ ವಂದಿಸುವುದೂ ಕಷ್ಟವಾಗುತ್ತದೆ. ಅಂತಹವರಿಗಾಗಿ ದೇವಸ್ಥಾನಗಳಲ್ಲಿ ಹಾಗೂ ಮನೆಗಳಲ್ಲಿರುವ ದೇವತಾ ಮೂರ್ತಿಗಳಿಗೂ, ಸಂತರ ಮೂರ್ತಿಗಳಿಗೂ ಹಾಗೂ ಆಗಾಗ ಭೇಟಿಯಾಗುವ ಸಾಧು-ಸಂತರಿಗೂ ಸಾಷ್ಟಾಂಗ ನಮಸ್ಕಾರವನ್ನು ಮಾಡುವ ಅಭ್ಯಾಸವನ್ನು ಮಾಡಿಕೊಳ್ಳಬೇಕು.

**ಓ.ಸಂ. 147 :** 'ವಂದನ' ( ನಮನ ) ಭಕ್ತಿಯನ್ನು ತೋರಿಸುವುದರಿಂದಲೇ ಅಕ್ರೂರನು ಮುಕ್ತಿಯನ್ನು ಪಡೆದನೆಂದು ವೇದವ್ಯಾಸರು ತಮ್ಮ ಭಾಗವತ ಪುರಾಣದಲ್ಲಿ ತಿಳಿಸಿದ್ದಾರೆ.

ವಿವರಣೆ : ವೇದವ್ಯಾಸರು ರಚಿಸಿದ ಭಾಗವತ ಪುರಾಣದಲ್ಲಿ ಅಕ್ರೂರನ ಪ್ರಸ್ತಾಪವು ಬರುತ್ತದೆ. ಇಲ್ಲಿ ಅಕ್ರೂರನಿಗೆ ಹೇಗೆ ವಂದನಾ ಭಕ್ತಿಯಿಂದ ಮೋಕ್ಷ ಉಂಟಾಯಿತೆಂದು ತಿಳಿಸಲಾಗಿದೆ. ನಾರದರು ಕಂಸನಿಗೆ ದೇವಕೀ ಪುತ್ರನಾದ ಶ್ರೀಕೃಷ್ಣನು ವ್ರಜೆಯ ( ಮಧುರೆಯ ಹತ್ತಿರದ ಪ್ರದೇಶದ ) ನಂದಗೋಪನ ಮಗನಾಗಿ ಬಲರಾಮನ ಜೊತೆ ಬೆಳೆಯುತ್ತಿದ್ದು ಅವನಿಂದಲೇ ಕಂಸನಿಗೆ ಕಂಟಕವಿರುವುದಾಗಿ ಹೇಳಿದರು. ಆ ಕೂಡಲೇ ಕಂಸನು ಯಾದವ ಶ್ರೇಷ್ಠನಾದ ಅಕ್ರೂರನನ್ನು ಕರೆಯಿಸಿ ಬಲರಾಮ–ಕೃಷ್ಣರನ್ನು ಕರೆತರಲು ನಿಯೋಜಿಸಿದನು. ಹಾಗೆಯೇ ಅಕ್ರೂರನು ತನ್ನ ರಥದಲ್ಲಿ ಅವತಾರೀ ಪುರುಷರಾದ ಬಲರಾಮ–ಕೃಷ್ಣರನ್ನು ಕರೆತರುವಾಗ ಅತ್ಯಂತ ಭಕ್ತಿಭಾವದಿಂದ ಅವರಿಗೆ ಪುನಃ–ಪುನಃ ವಂದಿಸುತ್ತಾ ಇದ್ದನು. ಮಧ್ಯದಲ್ಲಿ ಸಿಕ್ಕ ಸರೋವರ ಒಂದರಲ್ಲಿ ಸ್ನಾನ–ಸಂಧ್ಯೆಗಳನ್ನು ಮುಗಿಸಲು ಇಳಿದನು. ಆಗ ಜ್ಞಾನಿಯಾದ ಅಕ್ರೂರನಿಗೆ ನೀರಿನಲ್ಲೇ ಭಗವಂತನ ಸಾಕ್ಷಾತ್ಕಾರವಾಯಿತು. ಹಾಗೆಯೇ ಕಂಸನ ವಧೆಯ ನಂತರ ತನ್ನ ಸೋದರತ್ತೆಯಾದ ಕುಂತಿಯ ಮಕ್ಕಳಾದ ಪಾಂಡವರ ಯೋಗ–ಕ್ಷೇಮವನ್ನು ವಿಚಾರಿಸಲು ಶ್ರೀಕೃಷ್ಣನೇ ಭಗವದ್ ಭಕ್ತನಾದ ಅಕ್ರೂರನನ್ನು ಹಸ್ತಿನಾವತಿಗೆ ಕಳಿಸಿದನು. ಹಸ್ತಿನಾವತಿಯಲ್ಲಿ ಪಾಂಡವರಿಗೆ ಕೌರವರಿಂದ ಅನೇಕ ರೀತಿಯಲ್ಲಿ ಪ್ರಾಣಭಯವಿರುವುದನ್ನು ಕಂಡು ಧೃತರಾಷ್ಟ್ರನಿಗೆ ನಿಷ್ಪಕ್ಷಪಾತದಿಂದಿದ್ದು ಪಾಂಡವರ ರಕ್ಷಣೆಯನ್ನು ಮಾಡಬೇಕೆಂದು ಕೇಳಿಕೊಳ್ಳುತ್ತಾನೆ.

ಓ.ಸಂ.148 : ಈ ವಂದನ ( ನಮನ ) ಭಕ್ತಿಯಿಂದ ಕಾಲಕ್ರಮದಲ್ಲಿ ಚಿತ್ತಶುದ್ಧಿಯಾಗಿ ಗುರುಕೃಪೆಯಿಂದ ಜ್ಞಾನವು ಪ್ರಾಪ್ತವಾಗಿ, ಜ್ಞಾನದಿಂದ ಸಹಜವಾಗಿ ಮೋಕ್ಷವು ಪ್ರಾಪ್ತವಾಗುತ್ತದೆ.

ವಿವರಣೆ : ಈ ಓವೀಯ ಕೊನೆಯ ಚರಣವನ್ನು ಮುಂದಿನ ಓವೀಯಲ್ಲಿ ವಿವರಿಸಲಾಗಿದೆ. ಹಿಂದೆ ತಿಳಿಸಿದಂತೆ (ಓವೀ ಸಂ.145) ನಮನ ಭಕ್ತಿಯಿಂದ ಭಕ್ತನ ಅಹಂಕಾರ ನಾಶವಾಗುತ್ತದೆ. ಅಂದರೆ ಅವನ ರಾಗ–ದ್ವೇಷಗಳು ನಾಶವಾಗಿ ಚಿತ್ತಶುದ್ಧಿ ಹಾಗೂ ಚಿತ್ತದ ಏಕಾಗ್ರತೆಯು ಉಂಟಾಗುತ್ತದೆ. ಅಂದರೆ ಅವನಿಗೆ ವಿವೇಕ–ವೈರಾಗ್ಯಾದಿ ಸಾಧನ ಚತುಷ್ಟಯಗಳು ಅವಗತವಾಗುತ್ತದೆ. ಇಂತಹವರಿಗೆ ಮುಮುಕ್ಷು ಭಾವವು ತೀವ್ರವಾಗಿರುವುದರಿಂದ ಅಂತಹವರು ಸದ್ಗುರುವಿನ ಆಶ್ರಯಕ್ಕಾಗಿ ಪ್ರಯತ್ನಿಸುತ್ತಿರುತ್ತಾರೆ, ಇಂತಹವರಿಗೆ ಸದ್ಗುರುವಿನ ಸನ್ನಿಧಿಯು ಲಭಿಸಿ ಅವರಿಂದ ಬ್ರಹ್ಮಾತ್ಮೈಕ್ಯ ಜ್ಞಾನವೂ ಬೋಧಿಸಲ್ಪಡುತ್ತದೆ. ಅತ್ಯಂತ ಶ್ರದ್ಧಾಳುವಾಗಿರುವ ಇಂತಹ ಭಕ್ತರಿಗೆ ಪರೋಕ್ಷಜ್ಞಾನವು ಅಪರೋಕ್ಷಜ್ಞಾನವಾಗಲು ಹೆಚ್ಚು ಕಾಲವು ಬೇಕಾಗಿರುವುದಿಲ್ಲ. ಹೀಗೆ ಅಪರೋಕ್ಷ ಜ್ಞಾನವಾಗುವುದೇ ಸಹಜವಾಗಿ ಮೋಕ್ಷಪ್ರಾಪ್ತಿಯಾಗಿರುತ್ತದೆ. ನಮನ ಭಕ್ತಿ ನಿರೂಪಣೆಯಲ್ಲಿ ಈ ಓವೀಯು ಕೊನೆಯದಾಗಿದ್ದು ಇದರಲ್ಲಿ ಒಟ್ಟು 15 ಓವೀಗಳಿವೆ. (ಓ.ಸಂ. 133 ರಿಂದ 148 ರ ವರೆಗೆ ).

**ಓ.ಸಂ. 149 :** ಇನ್ನು 'ದಾಸ್ಯ ಭಕ್ತಿ' ಯ ನಿರೂಪಣೆಯು ಪ್ರಾರಂಭವಾಗುತ್ತದೆ. ಯಾರ ದಾಸ್ಯವನ್ನು ಮಾಡಬೇಕಾಗಿದೆಯೋ ಅವರು ಯಾರು ಎಂಬ ಜ್ಞಾನವು ಮೊಟ್ಟ ಮೊದಲಿಗೆ ಅವಶ್ಯವಾಗಿರುತ್ತದೆ. ಏಕೆಂದರೆ ಗುರುತಿಲ್ಲದ ಧಣಿಗಳ ದಾಸ್ಯ ಮಾಡುವುದು ವ್ಯರ್ಥವಾಗುವುದು.

**ವಿವರಣೆ :** ಈ ಓವೀಯಿಂದ 'ದಾಸ್ಯಭಕ್ತಿ'ಯ ನಿರೂಪಣೆಯನ್ನು ಮಾಡಲಾಗುವುದು. ಯಾರ ದಾಸನಾಗಿರಬೇಕೆಂದು ಅಪೇಕ್ಷೆಯಿದೆಯೋ ಅವರ ಗುರುತು–ಪರಿಚಯವಿಲ್ಲದೇ ಅವರ ಬಳಿ ದಾಸ್ಯಮಾಡುವುದು ವ್ಯರ್ಥವೂ ಹಾಗೂ ಅಪಾಯಕಾರಿಯೂ ಆಗಿರುವುದು. ಅದು ವ್ಯರ್ಥವಾಗಬಹುದು; ಏಕೆಂದರೆ ಯಾವ ಉದ್ದೇಶದಿಂದ ಅಲ್ಲಿ ದಾಸ್ಯವು ಪ್ರಾರಂಭವಾಗಿದೆಯೋ ಆ ಉದ್ದೇಶವು ಈಡೇರಲಿಕ್ಕಿಲ್ಲ. ಯಜಮಾನನು ಜಿಪುಣನಾಗಿದ್ದು ಕಡಿಮೆ ಸಂಬಳವನ್ನು ಸಂದಾಯ ಮಾಡಬಹುದು. ಅಲ್ಲದೇ ಸುಮ್ಮ ಸುಮ್ಮನೆ ಕಿರುಕುಳವನ್ನು ಕೊಡಬಹುದು. ಮಾಡಿಸಬಾರದ ಕೆಲಸಗಳನ್ನು ಅಂದರೆ ಕಾನೂನುಬಾಹಿರವಾದ ಕೆಲಸಗಳನ್ನು ದಾಸನಲ್ಲಿ ಮಾಡಿಸಿ ಅವನನ್ನು ಅಪರಾಧಿಯನ್ನಾಗಿ ಮಾಡಿಬಿಡಬಹುದು. ಆದುದರಿಂದ ಯಜಮಾನನ ಬಗ್ಗೆ ಸಾಕಷ್ಟು ಜ್ಞಾನವಿಲ್ಲದೇ ಅವನ ದಾಸ್ಯವನ್ನು ಮಾಡಬಾರದು.

**ಓ.ಸಂ.150 :** ಹೀಗೆ ಗುರುತಿಲ್ಲದೇ ಮಾಡುವ ಕೆಲಸವೆಲ್ಲವೂ ಸಂಪೂರ್ಣವಾಗಿ ವ್ಯರ್ಥವೇ ಆಗುತ್ತದೆ. ಹಾಗೂ ಸಂಶಯಾತ್ಮಕವಾಗಿ ತಿಳಿದುಕೊಂಡು ಅಂದರೆ ಸರಿಯಾಗಿ ತಿಳಿದುಕೊಳ್ಳದೇ ಅರ್ಧಂಬರ್ಧ ತಿಳಿದುಕೊಂಡು ಯಾವುದೇ ಕೆಲಸವನ್ನು ಮಾಡಿದರೂ ಅದು ವ್ಯರ್ಥವಾಗುತ್ತದೆ.

**ವಿವರಣೆ :** ಹಿಂದಿನ ಓವೀಯಲ್ಲಿ ಯಾರ ದಾಸ್ಯವನ್ನು ಬಯಸುತ್ತೇವೆಯೋ ಅವರು ಎಂತಹವರು ಎಂಬ ಪೂರ್ಣಜ್ಞಾನವಾಗದೇ ಇದ್ದರೆ, ಆಗ ಮಾಡುವ ಕೆಲಸವೆಲ್ಲವೂ ವ್ಯರ್ಥವಾಗುವುದೆಂದು ಹೇಳಲಾಗಿದೆ. ಈ ಓವೀಯಲ್ಲಿ ಅದೇ ರೀತಿ ಮಾಡುವ ಕೆಲಸದ ಬಗ್ಗೆಯೂ ಪೂರ್ಣವಾದ ಮಾಹಿತಿಯು ಅಂದರೆ ಅದರ ಉದ್ದೇಶ ಇತ್ಯಾದಿಗಳು ತಿಳಿದಿರಬೇಕಾಗಿರುತ್ತದೆ. ಆ ಕೆಲಸದ ಬಗ್ಗೆ ಪೂರ್ಣ ತಿಳಿಯದಿದ್ದರೂ ಅಥವಾ ಸಂಶಯಾತ್ಮಕವಾಗಿ ಅರ್ಧಂಬರ್ಧ ತಿಳಿದಿದ್ದರೂ ಮಾಡುವ ಕೆಲಸವು ಸಂಪೂರ್ಣವಾಗಿ ವ್ಯರ್ಥವಾಗಬಹುದು. ಯಾರ ದಾಸ್ಯವನ್ನು ಮಾಡಲಾಗುತ್ತಿದೆಯೋ ಆ ಯಜಮಾನನು ದುಷ್ಟನಾಗಿದ್ದರೆ ಆಗ ಅವನ ಕೆಲಸಕಾರ್ಯಗಳೂ ಕೂಡ ಅಧರ್ಮಯುಕ್ತವೂ ಕಾನೂನುಬಾಹಿರವೂ ಆಗಿದ್ದು ಅಂತಹ ಕೆಲಸಗಳನ್ನು ಮಾಡುವುದರಿಂದ ಯಜಮಾನನಿಗೆ ಲಾಭವಾಗಬಹುದೇ ಹೊರತು ಮಾಡುವವನಿಗಲ್ಲ. ಯಜಮಾನನು ಸತ್ಪುರುಷನಿದ್ದರೆ ಮಾತ್ರ ಅವನ ನಡವಳಿಕೆಗಳ ಸಹಿತ ಅವನ ವ್ಯಕ್ತಿತ್ವವೂ ಕೂಡ ಪಾರದರ್ಶಕವಾಗಿರುತ್ತದೆ. ಅಂತಹವನು ಯಾರೆಂದು ಹಾಗೂ ಅವನ ಕೆಲಸಗಳು ಯಾವುವೆಂದು ಗುರುತಿಸಬಹುದು.

ಓ.ಸಂ.151 : ಆದುದರಿಂದ ಪ್ರಯತ್ನಪೂರ್ವಕವಾಗಿ 'ದೇವ'ನು ಅವನಿದ್ದಂತೆಯೇ ಮೊದಲು ಅವನನ್ನು ತಿಳಿದುಕೊಳ್ಳಬೇಕು. ವಿಚಾರದಿಂದ ದೇವನು ಎಂದೂ ಜಡದೃಶ್ಯವಲ್ಲವೆಂಬುದು ನಿಶ್ಚಯವಾಗುತ್ತದೆ.

ವಿವರಣೆ : ಈವರೆಗೆ ಯಾವುದೇ ರೀತಿಯ ಹಾಗೂ ಯಾರದೇ ದಾಸ್ಯದ ಬಗ್ಗೆ ಸಾಮಾನ್ಯವಾಗಿ ನಿರೂಪಿಸಿದ ವಿಷಯವನ್ನೇ ಈ ಓವೀ ಹಾಗೂ ಮುಂದಿನ ಓವೀಗಳಲ್ಲಿ ವಿಶೇಷವಾಗಿ ಪರಮಾತ್ಮನ ದಾಸ್ಯದ ಬಗ್ಗೆ ತಿಳಿಸಲಾಗಿದೆ. ಪರಮಾತ್ಮನ ದಾಸ್ಯದಲ್ಲಿದ್ದುಕೊಂಡು ಭಕ್ತಿಯನ್ನು ತೋರಿಸಲು ಇಚ್ಛಿಸುವವರು ಮೊದಲು ಪರಮಾತ್ಮನ ನಿಜವಾದ ಸ್ವರೂಪವೇನು ಎನ್ನುವುದನ್ನು ತಿಳಿದುಕೊಳ್ಳಲೇಬೇಕಾಗುತ್ತದೆ. ಅಂದರೆ ಅವನು ಜಡವಾಗಿರುತ್ತಾನೆಯೇ ಅಥವಾ ಚೈತನ್ಯ ಸ್ವರೂಪದವನೋ ಎಂಬುದನ್ನು ಮೊದಲು ನಿರ್ಧರಿಸಬೇಕು. ದೇವನ ಬಗ್ಗೆ ವಿಚಾರ ಮಾಡಿದಾಗ ಉಳಿದ ಜಡವಸ್ತುಗಳಂತೆ ಅವನನ್ನು ಯಾವುದೇ ಪ್ರಮಾಣಗಳಿಂದ ತಿಳಿಯಲಾಗುವುದಿಲ್ಲವೆಂಬ ಅಂಶವು ಬಹಳ ಸ್ಪಷ್ಟವಾಗಿ ತಿಳಿದುಹೋಗುತ್ತದೆ. ಒಂದು ವೇಳೆ ದೇವನು ಉಳಿದ ದೃಶ್ಯವಾಗಿರುವ ಜಡವಸ್ತುಗಳಂತೆ ಜಡವಾಗಿದ್ದಿದ್ದಲ್ಲಿ ಅವನು ಎಲ್ಲ ಜಡದಂತೆ ಅವನೂ ನಾಶವಾಗಬೇಕಿತ್ತು. ಇಂತಹ ನಾಶವಾಗುವ ದೇವನು ದೇವನಲ್ಲವೆಂಬುದು ಎಲ್ಲರಿಗೂ ವಿದಿತವಾಗಿರುತ್ತದೆ.

ಓ. ಸಂ.152 : ಪ್ರಾಣಿಗಳಲ್ಲಿ ಅನೇಕ ಲೋಹಾಂಶಗಳು ಇದ್ದು ಅವುಗಳನ್ನು ನಾವು ಕೊಂದಮೇಲೆಯೇ ಅವುಗಳೆಲ್ಲವೂ ಮಣ್ಣು-ಕಲ್ಲುಗಳಲ್ಲಿ ಸೇರಿಹೋಗುತ್ತವೆ. ಹೀಗೆ ಮಣ್ಣುಕಲ್ಲುಗಳಲ್ಲಿ ಸೇರಿಹೋದ ಲೋಹಾಂಶಗಳಿಂದ ಕೂಡಿದ ಲೋಹ-ಶಿಲೆಗಳಿಂದ ದೇವತಾವಿಗ್ರಹಗಳನ್ನು ನಿರ್ಮಿಸುತ್ತೇವೆ. ಈ ವಿಗ್ರಹಗಳು ಪ್ರೇತಾಂಶಗಳೆಂದು ತಿಳಿಯದೇ ಅವುಗಳನ್ನು ಪೂಜಿಸುತ್ತೇವೆ.

ವಿವರಣೆ : ಈ ಓವೀಯಲ್ಲಿ ನಾವು ಪೂಜಿಸುವ ದೇವತಾವಿಗ್ರಹಗಳಲ್ಲಿ ಹಿಂದೆ ಸತ್ತ ಪ್ರಾಣಿಗಳ ಅಂಶವು ಇರುವುದರಿಂದ ಈ ವಿಗ್ರಹಗಳು ಪ್ರೇತಗಳಾಗಿವೆ ಎಂದು ತಿಳಿಸಲಾಗಿದೆ. ಸಕಲ ಪ್ರಾಣಿಗಳಲ್ಲಿ ಕಬ್ಬಿಣಾದಿ ಅನೇಕ ಲೋಹಗಳ ಅಂಶವು ಇರುವುದು ನಮಗೆ ತಿಳಿದೇ ಇರುತ್ತದೆ. ಬಹಳ ಹಿಂದಿನ ಕಾಲದಿಂದ ಈ ಪ್ರಾಣಿಗಳನ್ನು ಮನುಷ್ಯರು ಅಥವಾ ಅನ್ಯ ಪ್ರಾಣಿಗಳು ಕೊಂದಾಗ ಇಲ್ಲವೇ ತಾವೇ ಸಹಜವಾಗಿ ಸತ್ತಾಗ ಅವುಗಳ ದೇಹಗಳಲ್ಲಿರುವ ಲೋಹದ ಅಂಶವು ಮಣ್ಣಿನಲ್ಲಿ ಸೇರುತ್ತದೆ. ನಂತರ ಲಕ್ಷಾಂತರ ವರ್ಷಗಳಲ್ಲಿ ಇದೇ ಮಣ್ಣು ರೂಪಾಂತರಗೊಂಡು ಕಲ್ಲಿನ ಬಂಡೆಗಳಾಗಿ ರೂಪಾಂತರಗೊಳ್ಳುತ್ತದೆ. ಗಣಿಗಳಲ್ಲಿ ಇಂತಹದೇ ಕಲ್ಲುಗಳಿಂದ ಅನೇಕ ಲೋಹಗಳನ್ನು ಹೊರತೆಗೆಯುತ್ತಾರೆ. ಈ ಲೋಹಗಳಿಂದ ಹಾಗೂ ಕಲ್ಲುಗಳಿಂದ ಬಹಳಷ್ಟು ದೇವತಾ ವಿಗ್ರಹಗಳನ್ನು ತಯಾರಿಸುವುದರಿಂದ ಈ ವಿಗ್ರಹಗಳಲ್ಲಿ ಬಹಳ ಹಿಂದೆ ಸತ್ತ ಪ್ರಾಣಿಗಳ ಅಂಶವು ಇರುತ್ತದೆ. ಈ ಕಾರಣದಿಂದ ನಾವು ಪೂಜಿಸುವ ದೇವತಾ ವಿಗ್ರಹಗಳೂ ಪ್ರೇತಾಂಶಗಳಿಂದ ಕೂಡಿವೆ ಎಂದು ಹೇಳಲಾಗಿದೆ.

**ಓ.ಸಂ.153 :** ಯಾವುದೇ ಜಡವು ಒಡೆಯುತ್ತದೆ, ತುಂಡಾಗುತ್ತದೆ ಅಥವಾ ಮುರಿಯುತ್ತದೆ. ಆದುದರಿಂದ ದೇವನು ಜಡನಲ್ಲ. ಪೃಥ್ವಿಯೂ ಕೂಡ ಜಡವಾಗಿದ್ದು ಅದು ಸ್ಪಷ್ಟವಾಗಿ ದೇವನಾಗಿರುವುದಿಲ್ಲ.

**ವಿವರಣೆ :** ಹಿಂದಿನ ಎರಡು ಓವೀಗಳಿಂದ ಪರಮಾತ್ಮನ ಸ್ವರೂಪವನ್ನು ಸ್ಪಷ್ಟವಾಗಿ ತಿಳಿದುಕೊಳ್ಳಲು ವಿಚಾರವು ಪ್ರಾರಂಭವಾಗಿದೆ. ಈ ಓವೀಯಿಂದ ದೇವನು ಜಡಸ್ವರೂಪದ ಪಂಚಭೂತಗಳಲ್ಲ ಎಂಬುದನ್ನು ನಿಶ್ಚಯಿಸಲಾಗಿದೆ. ಯಾವುದೇ ಸ್ಥೂಲಜಡವು ಬಿಸಿಲು, ಮಳೆ, ಗಾಳಿಗೆ ಸಿಕ್ಕು ಬಿರುಕು ಬಿಡುತ್ತದೆ. ಅಥವಾ ಒಡೆದುಹೋಗುತ್ತದೆ. ಶಿಲಾವಿಗ್ರಹವು ಬಿರುಕು ಬಿಡುತ್ತದೆ ಹಾಗೂ ಒಡೆಯುತ್ತದೆ. ಇಲ್ಲವೇ ಯಾವುದೇ ಸ್ಥೂಲಸ್ವರೂಪದ ಜಡವಸ್ತುವನ್ನು ಪ್ರಯತ್ನಪೂರ್ವಕವಾಗಿ ಮುರಿಯಬಹುದು ಅಥವಾ ತುಂಡುಮಾಡಬಹುದು ಅಂದರೆ ಚೂರು-ಚೂರು ಮಾಡಬಹುದು; ಇಲ್ಲವೇ ಸುಡುವುದು ಮುಂತಾದವುಗಳಿಂದ ಧ್ವಂಸ ಮಾಡಬಹುದು. ಪೃಥ್ವಿಯೂ ಕೂಡ ಸ್ಥೂಲವಾದ ಮತ್ತು ಬೃಹತ್ತಾದ ಜಡವಸ್ತುವಾಗಿರುತ್ತದೆ. ಭೂಮಿಯು ಬಿರುಕುಬಿಡುವುದು ಸಹಜವಾಗಿರುತ್ತದೆ. ಅದಕ್ಕೆ ಇನ್ನೊಂದು ಘನವಸ್ತುವು ಘರ್ಷಿಸಿದಾಗ ಭೂಭಾಗವು ತುಂಡಾಗುತ್ತದೆ. ಮನೆ ಕಟ್ಟುವಾಗ ಭೂಮಿಯನ್ನು ಅಗೆದು ತೆಗೆಯುತ್ತೇವೆ. ದೇವನು ಇಂತಹ ಜಡ ಸ್ವರೂಪದವನಾಗಲಾರ. ಆಗಿದ್ದಿದ್ದರೆ ಅವನೂ ಕೂಡ ಈ ರೀತಿ ವಿಕಾರವಾಗಿ ನಾಶವಾಗುತ್ತಿದ್ದ. ಆದ್ದರಿಂದ ಪೃಥ್ವಿಯು ದೇವನಲ್ಲ.

**ಓ.ಸಂ.154 :** ಜಲವು ನೇತ್ರಗಳಿಂದ ನೋಡಲ್ಪಡುತ್ತದೆ. ಅದಕ್ಕೆ ಜ್ಞಾನ ಬರುವುದಾದರೂ ಹೇಗೆ ? ಅಂದರೆ ಅದು ತನ್ನನ್ನು ತಾನು ತಿಳಿಯುವುದಿಲ್ಲ. ಅದೇ ರೀತಿ ತೇಜವೂ ಕೂಡ ಕಣ್ಣುಗಳಿಂದ ತಿಳಿಯಲ್ಪಡುತ್ತದೆ. ಅಂದರೆ ಅದಕ್ಕೆ 'ನಾನು ಇದ್ದೇನೆ' ಎಂಬ ಜ್ಞಾನವಿರುವುದಿಲ್ಲ. ಆದ್ದರಿಂದ ಇವೆರಡೂ, ಅಂದರೆ ಜಲ ಮತ್ತು ತೇಜಗಳು ಜಡವಿರುತ್ತವೆ; ಆದ್ದರಿಂದ ಅವುಗಳು ದೇವರಲ್ಲ.

**ವಿವರಣೆ :** ಈ ಓವೀಯಲ್ಲಿ ಜಲ ಮತ್ತು ತೇಜ ( ಅಗ್ನಿ ) ಮಹಾಭೂತವನ್ನು ಜಡವೆಂದು ತೋರಿಸಲಾಗಿದೆ. ಯಾವುದು ತಿಳಿಯಲ್ಪಡುತ್ತದೋ ಅದೆಲ್ಲವೂ ಜಡವಾಗಿರುತ್ತದೆ ಮತ್ತು ಚೈತನ್ಯರಹಿತವಾಗಿರುತ್ತದೆ ಎಂಬ ಸಾಮಾನ್ಯ ನಿಯಮವನ್ನು ಇಲ್ಲಿ ಅನ್ವಯಿಸಲಾಗಿದೆ. ಇಲ್ಲಿ ನಮಗೆ ಬರುವ ಪಂಚಭೂತಗಳೆಲ್ಲವೂ ಪಂಚೀಕರಣಗೊಂಡಿರುವುದರಿಂದ ಒಂದೊಂದರಲ್ಲೂ ಐದು ಭೂತಗಳ ಅಂಶವು ಇರುವುದರಿಂದ ತೇಜ, ಜಲ ಹಾಗೂ ಪೃಥ್ವಿಗಳನ್ನು ಮುಖ್ಯವಾಗಿ ನೇತ್ರಗಳಿಂದ ಅವುಗಳ ರೂಪವನ್ನೂ, ಮುಟ್ಟುವುದರಿಂದ ಅವುಗಳ ಸ್ಪರ್ಶವನ್ನೂ ತಿಳಿಯಬಹುದು ಮತ್ತು ಅವುಗಳು ಜಡವಿರುತ್ತವೆ ಎಂದು ಸಿದ್ಧ ಮಾಡಬಹುದು. ಹೀಗೆ ಸಿದ್ಧ ಮಾಡುವುದರಿಂದ ಅವುಗಳಲ್ಲಿ ಚೈತನ್ಯವಿರುವುದಿಲ್ಲವೆಂದೂ ಅಂದರೆ ಅವುಗಳಿಗೆ ತಮ್ಮನ್ನ ತಾವು ಇದ್ದೇವೆ

ಎಂದೂ, ಹಾಗೆಯೇ ಬೇರೆ ಜಡವನ್ನು ತಿಳಿಯುವ ಶಕ್ತಿಯು ಇಲ್ಲವೆಂದೂ ತಿಳಿದುಕೊಳ್ಳಬಹುದು. ಇದರಿಂದ ಪೃಥ್ವಿ ಮತ್ತು ಜಲಗಳು ಚೈತನ್ಯಘನನಾದ ಪರಮಾತ್ಮ ( ದೇವ ) ನಲ್ಲ ಎಂದು ತಿಳಿಯುತ್ತದೆ.

**ಓ.ಸಂ.155 :** ವಾಯುವು ಸ್ಪರ್ಶೇಂದ್ರಿಯಕ್ಕೆ ವಿಷಯವಾಗಿದೆ. ಸ್ವಭಾವತಃ ಚಲನಶೀಲವಾಗಿದ್ದು ಜ್ಞಾನಾಧೀನವಾಗಿ ವರ್ತಿಸುತ್ತಿರುವ ಅದಕ್ಕೆ ಅಣುಮಾತ್ರವೂ ಜ್ಞಾನವಿರುವುದಿಲ್ಲ.

**ವಿವರಣೆ :** ಈ ಓವೀಯಲ್ಲಿ ಭೂಮಿಯು ಮತ್ತು ಜಲವು ಹೇಗೆ ಜಡವೋ ಹಾಗೆಯೇ ವಾಯುವೂ ಕೂಡ ಜಡವೆಂದೂ ಮತ್ತು ಆ ಕಾರಣದಿಂದ ಅವುಗಳನ್ನು ದೇವರೆಂದೂ ಹೇಳಲು ಬರುವುದಿಲ್ಲ. ಜಲದ 'ರಸ'ವೆಂಬ ಗುಣದಿಂದ ಅದು ಜಿಹ್ವೇಂದ್ರಿಯಕ್ಕೆ ವಿಷಯವಾಗಿರುತ್ತದೆ. ಇದೇ ರೀತಿ ತೇಜವು ತನ್ನ 'ರೂಪ' ವೆಂಬ ಗುಣದಿಂದ ನೇತ್ರೇಂದ್ರಿಯಗಳಿಗೆ ವಿಷಯವಾಗಿದೆ. ಈ ಕಾರಣಗಳಿಂದ ಜಲ ಮತ್ತು ತೇಜಗಳನ್ನು ಜಡವೆಂದು ತಿಳಿದು ಅವುಗಳು ದೇವನಲ್ಲವೆಂದು ಹೇಳಬಹುದು. ಹೀಗೆಯೇ ವಾಯುವೂ ತನ್ನ ಸ್ಪರ್ಶಗುಣದಿಂದ ತ್ವಗಿಂದ್ರಿಯಕ್ಕೆ ಅಂದರೆ ಚರ್ಮೇಂದ್ರಿಯಕ್ಕೆ ವಿಷಯವಾಗಿದೆ. ಇದು ಸದಾ ಚಲನಶೀಲವಾಗಿದ್ದು ವಿಕಾರವಾಗುತ್ತಿರುತ್ತದೆ. ಹೀಗೆ ಜಲ, ತೇಜ ಮತ್ತು ವಾಯುಗಳು ಇಂದ್ರಿಯಗಳಿಂದ ತಿಳಿಯಲ್ಪಡುವ ಜಡವಾದ್ದರಿಂದ ಅವುಗಳಿಗೆ ಜ್ಞಾನವಿಲ್ಲ ಮತ್ತು ಅವುಗಳು ದೇವನಾಗಿರಲು ಸಾಧ್ಯವಿಲ್ಲ.

**ಓ.ಸಂ.156:** ಆಕಾಶವನ್ನು ಟೊಳ್ಳು ಪ್ರದೇಶವೆಂದು ಕರೆಯುತ್ತಾರೆ. ಇದರ ಗುಣವಾದ ಶಬ್ದದ ಮೂಲಕವಾಗಿ ಇದು ತಿಳಿಯಲ್ಪಡುತ್ತದೆ. ಆದ್ದರಿಂದ ಇದೂ ಕೂಡ ಜಡವಾಗಿರುತ್ತದೆ. ಜಡವಾಗಿರುವುದರಿಂದ ಇದು ಪ್ರಕಾಶ ( ಜ್ಞಾನ ) ಸ್ವರೂಪವಾದ ದೇವನಲ್ಲ.

**ವಿವರಣೆ :** ಆಕಾಶವು ಏನೂ ಇರದ ಟೊಳ್ಳು ಪ್ರದೇಶವಾಗಿದೆ. ಅದು ಉಳಿದ ನಾಲ್ಕು ಮಹಾಭೂತಗಳಾದ ಭೂಮಿ, ಜಲ, ತೇಜ ಮತ್ತು ವಾಯುಗಳಿಗೆ ಇರಲು ಅವಕಾಶ ಕಲ್ಪಿಸಿರುವುದರಿಂದಲೇ ಆಕಾಶವೆಂಬ ಹೆಸರು ಬಂದಿರುತ್ತದೆ. ನಾವು ನೋಡುತ್ತಿರುವ ಪಂಚೀಕೃತ ಆಕಾಶದ ಮಧ್ಯೆ ವಾಯು ತುಂಬಿದ್ದರೂ ಕೂಡಾ ಆಕಾಶ–ಭೂಮಿಯ ಮಧ್ಯೆ ವಿಸ್ತಾರವಾಗಿ ಕಾಣುವ, ಎಲ್ಲಾ ವಸ್ತುಗಳ ಒಳ–ಹೊರಗುಗಳನ್ನೂ ವ್ಯಾಪಿಸಿರುವ, ಆಕಾಶಕಾಯಗಳೂ ಸೇರಿದಂತೆ ಎಲ್ಲವೂ ಇದರಲ್ಲಿ ತೇಲುವಂತೆ ಕಾಣುವುದೇ ಈ ಆಕಾಶವಾಗಿರುತ್ತದೆ. ಇದಕ್ಕೆ ಆದಿ–ಅಂತ್ಯಗಳಿಲ್ಲದಿರುವುದರಿಂದ ಇದು ಅನಂತವಾಗಿದೆ. ಇದಕ್ಕೆ ಕೇವಲ ಶಬ್ದಗುಣವಿದ್ದು ಅದರ ಮೂಲಕವೂ ಇದು ತಿಳಿಯಲ್ಪಡುತ್ತದೆ. ಹೀಗೆ ತಿಳಿಯಲ್ಪಡುವ ಆಕಾಶವು ಜಡವಿರಲೇಬೇಕಾಗುತ್ತದೆ. ಅಂದರೆ ಹಿಂದೆ ತಿಳಿಸಿದಂತೆ ತಾನು ಇದ್ದೇನೆ ಎಂಬ ಜ್ಞಾನವೂ ಅದಕ್ಕಿರುವುದಿಲ್ಲ ಹೀಗೆ ಚೈತನ್ಯ ವಿಹೀನವಾದ ಆಕಾಶವನ್ನು ದೇವನೆನ್ನಲು ಸಾಧ್ಯವಿಲ್ಲ. ಏಕೆಂದರೆ ಪರಮಾತ್ಮನಲ್ಲಿ ಯಾವ ಕೊರತೆಯೂ ಇರದು. ಅವನು ಅನಂತಗುಣ ಪರಿಪೂರ್ಣನು ಮತ್ತು ಸಚ್ಚಿದಾನಂದ ಸ್ವರೂಪನು.

**ಓ.ಸಂ.157:** ದೇಹವು ಕಟ್ಟಿಗೆ ಮುಂತಾದ ಜಡದಂತೆ ಕಾಣಿಸುತ್ತಿದೆಯಾದ್ದರಿಂದ ಅದು ಜಡವೇ ಆಗಿರುತ್ತದೆ. ದೇಹವು ಮಲಿನವಾಗುತ್ತದೆ. ಅದು ಕಟ್ಟಿಗೆಯಂತೆ ಉರಿಯುತ್ತದೆ. ಹೀಗಾಗಿ ಇದು ಪರತಂತ್ರವಾಗಿದೆ.

**ವಿವರಣೆ:** ನಮ್ಮಿಂದ ತಿಳಿಯಲ್ಪಡುವುದೆಲ್ಲವೂ ಜಡವೇ ಆಗಿರುತ್ತದೆ. ಎದುರುಗಿನ ಯಾವುದೇ ಸ್ಥೂಲವಸ್ತುವನ್ನು ನಮ್ಮ ಇಂದ್ರಿಯಗಳ ಸಂಪರ್ಕದಿಂದ ಅದರ ಇರುವು ಅಂದರೆ ಅಸ್ತಿತ್ವವು ತಿಳಿದುಬರುತ್ತದೆ. ಹಾಗೆಯೇ ಅದರ ಉಳಿದ ಸ್ವರೂಪವನ್ನು ನಮ್ಮ ಅಂತಃಕರಣದಿಂದಲೂ ತಿಳಿಯಬಹುದು. ಅದೇ ರೀತಿ ನಮ್ಮ ದೇಹದ ಬಣ್ಣವನ್ನು ಅಥವಾ ರೂಪವನ್ನು ನಾವು ನೋಡಬಹುದು. ಹಾಗೂ ದೇಹವನ್ನು ಮುಟ್ಟಬಹುದು. ಆದ್ದರಿಂದ ಅದರ ಇರುವಿಕೆಯನ್ನು ಉಳಿದ ಜಡದಂತೆಯೇ ತಿಳಿಯಬಹುದು. ಮತ್ತು ಇಂದ್ರಿಯಗಳಿಗೆ ಕಾಣದ ಹಸಿವು, ನೀರಡಿಕೆ, ಸುಖ-ದುಃಖ ಮೊದಲಾದ ವೃತ್ತಿಗಳನ್ನೂ ಕೂಡ ಅಂತಃಕರಣದಿಂದಲೇ ತಿಳಿಯಬಹುದು. ಹೀಗೆ ತಿಳಿಯಲ್ಪಡುವ ನಮ್ಮ ದೇಹವು ನಿಶ್ಚಯವಾಗಿ ಜಡವೇ ಆಗಿರುತ್ತದೆ. ಅಲ್ಲದೇ ಈ ದೇಹವು ಮಲ-ಮೂತ್ರಾದಿಗಳಿಂದ ನಿತ್ಯ ಮಲಿನವಾಗುತ್ತಿರುತ್ತದೆ. ಇದು ರೋಗ ರುಜಿನಗಳಿಂದ ವಿಕಾರವಾಗಿ ನಾಶವಾಗುವಂತಹದು. ಇದನ್ನು ಕಟ್ಟಿಗೆಯಂತೆ ಸುಡಬಹುದು. ಇದು ಜೀವಂತವಾಗಿರಲು ಗಾಳಿ, ನೀರು, ಮುಂತಾದವುಗಳ ಅವಶ್ಯಕತೆ ಇರುವುದರಿಂದ ಇದು ಪರತಂತ್ರವಾಗಿರುತ್ತದೆ. ಇಂತಹ ದೇಹವು ದೇವನಾಗಿರಲು ಸಾಧ್ಯವಿಲ್ಲ.

**ಓ.ಸಂ.158:** ಇಂದ್ರಿಯಗಳಿಗೆ ತಮ್ಮದೇ ಆದ ಪ್ರಕಾಶತ್ವವಿಲ್ಲ ಅಂದರೆ ಚೈತನ್ಯವಿಲ್ಲ. ಏಕೆಂದರೆ ಬೇರೆ ಕಡೆ ಆಲೋಚಿಸುತ್ತಿರುವ ಮನಸ್ಸು ಇದ್ದಾಗ ಯಾವುದೇ ಇಂದ್ರಿಯವೂ ಏನನ್ನೂ ತಿಳಿಯಲಾರದು.

**ವಿವರಣೆ:** ಈಗ ಇಂದ್ರಿಯಗಳೂ ಕೂಡ ದೇವನಾಗಿರಲಾರವು ಎಂಬುದನ್ನು ಈ ಓವೀಯಲ್ಲಿ ತಿಳಿಸಲಾಗಿದೆ. ಇಂದ್ರಿಯಗಳೂ ಕೂಡ ಪರತಂತ್ರವಾಗಿವೆ. ಏಕೆಂದರೆ ಮನಸ್ಸಿಲ್ಲದೇ ಈ ಇಂದ್ರಿಯಗಳು ಯಾವುದೇ ವಿಷಯವನ್ನು ಗ್ರಹಿಸಲಾರವು. ಯಾವುದೋ ವಿಚಾರವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಏನು ನೋಡಿದರೂ ಅಥವಾ ಏನು ಕೇಳಿದರೂ ಅದು ವ್ಯರ್ಥವಾಗುವುದು. ಅಂದರೆ ಏನನ್ನು ನೋಡಿದೆವು ಎಂದು ತಿಳಿಯುವುದಿಲ್ಲ. ಅದೇ ರೀತಿ ಏನನ್ನು ಕೇಳಿದೆವು ಎಂಬುದೂ ತಿಳಿಯುವುದಿಲ್ಲ. ಆದ್ದರಿಂದ ಇಂದ್ರಿಯಗಳು ಸ್ವತಂತ್ರವಾಗಿ ಚೈತನ್ಯ ಹೊಂದಿರಲಾರವು. ಅವು ಪರತಂತ್ರವನ್ನು ಅನುಭವಿಸುತ್ತವೆ. ಈ ಕಾರಣದಿಂದ ಈ ಇಂದ್ರಿಯಗಳನ್ನು ಪರಮಾತ್ಮನೆನ್ನಲು ಬರುವುದಿಲ್ಲ.

**ಓ.ಸಂ.159 :** ಅಲ್ಲದೇ ಈ ಇಂದ್ರಿಯಗಳ ಅಧಿದೇವತೆಗಳು ಇಂದ್ರಿಯಗಳಿಗೆ ಸಹಾಯ ಮಾಡದಿದ್ದರೂ ಇವು ತಮ್ಮ ವಿಷಯಗಳನ್ನು ತಿಳಿಯಲಾರವು. ಆಗ ಅವು ಜಡವಾಗಿಯೇ ಕಾಣುತ್ತವೆ.

**ವಿವರಣೆ :** ಹಿಂದಿನ ಓವೀಯಲ್ಲಿ ಮನೋದೇವತೆಯ ಅಂದರೆ ಚಂದ್ರನ ಸಹಾಯವಿಲ್ಲದಿದ್ದರೆ ಇಂದ್ರಿಯಗಳು ತಮ್ಮ ವಿಷಯವನ್ನು ಗ್ರಹಿಸಲಾರವು ಎಂಬುದನ್ನು ತಿಳಿಸಲಾಗಿದೆ. ಈ ಓವೀಯಲ್ಲಿ ಆಯಾ ಇಂದ್ರಿಯಗಳಿಗೂ ಪ್ರತ್ಯೇಕವಾಗಿ ಅಧಿದೇವತೆಗಳಿದ್ದು ಅವರ ಸಹಕಾರವಿಲ್ಲದಿದ್ದರೂ ಕೂಡ ಆಯಾ ಇಂದ್ರಿಯಗಳು ತಮ್ಮ-ತಮ್ಮ ವಿಷಯಗಳನ್ನು ಗ್ರಹಿಸಲಾರವು ಎಂಬುದನ್ನು ತಿಳಿಸಲಾಗಿದೆ. ಉದಾಹರಣೆಗೆ, ತೇಜದ ಅಥವಾ ಅಗ್ನಿಯ ಅಭಿಮಾನಿದೇವತೆಯಾದ ಸೂರ್ಯದೇವನು ಅವನ ಬೆಳಕನ್ನು ( ವಸ್ತುಗಳ ರೂಪವನ್ನು ) ಗ್ರಹಿಸಲು ಸಾಮರ್ಥ್ಯವನ್ನು ಹೊಂದಿರುವ ನಮ್ಮ ನಯನೇಂದ್ರಿಯಗಳಿಗೆ ಅಧಿದೇವತೆಯೂ ಆಗಿರುತ್ತಾನೆ. ವ್ಯಕ್ತಿಯಿಂದ ಸಾಕಷ್ಟು ಪಾಪಗಳು ಘಟಿಸಿದಾಗ ಅದರ ಫಲವಾಗಿ ಈ ಅಧಿದೇವತೆಗಳು ಆಯಾ ಇಂದ್ರಿಯಗಳ ಶಕ್ತಿ-ಸಾಮರ್ಥ್ಯವನ್ನು ನಾಶಮಾಡುತ್ತಾರೆ. ಅಕಾಲದಲ್ಲಿ ಕಣ್ಣುಗಳನ್ನು ಕಳೆದುಕೊಳ್ಳುವುದು, ಸರಿಯಾಗಿ ಕಾಣದೇ ಇರುವುದು, ಮುಂತಾದವುಗಳು, ಸೂರ್ಯದೇವನ ಸಹಕಾರವಿಲ್ಲವೆಂಬುದನ್ನು ತಿಳಿಸುತ್ತವೆ. ಹಾಗೆ ಕಣ್ಣುಗಳನ್ನು ಕಳೆದುಕೊಂಡವರ ಹೊರ ಕಣ್ಣುಗಳು ನೋಡಲು ಸರಿಯಾಗಿಯೇ ಇದ್ದರೂ ಒಳಕಣ್ಣುಗಳು ಸಾಮರ್ಥ್ಯವನ್ನು ಕಳೆದುಕೊಂಡು ನೋಡುವ ಚೈತನ್ಯವಿಲ್ಲದೇ ಜಡವಾಗಿ ಬಿಡುತ್ತವೆ.

**ಓ.ಸಂ.160 :** ಹೀಗೆ ಆಯಾ ಅಧಿದೇವತೆಯ ಹಾಗೂ ಮನೋ ಅಧಿದೇವತೆಯ ಅನುಗ್ರಹಗಳು ಒಂದುವೇಳೆ ಇದ್ದಾಗ್ಯೂ ಇಂದ್ರಿಯಗಳಿಗೆ ತಮ್ಮದೇ ಆದ ಚೈತನ್ಯವಿದೆ ಎಂದು ತಪ್ಪು ತಿಳಿಯಬಾರದು. ಅಂದರೆ ಅವುಗಳು ಸ್ವರೂಪತಃ ಜಡವೇ ಇರುತ್ತವೆ.

**ವಿವರಣೆ :** ಹೀಗೆ ಮನಸ್ಸಿನ ಹಾಗೂ ಇಂದ್ರಿಯಗಳ ಅಧಿದೇವತೆಗಳ ಅನುಗ್ರಹವು ಇದ್ದರೂ ಕೂಡ ಇಂದ್ರಿಯಗಳು ಸ್ವರೂಪತಃ ಚೈತನ್ಯರಹಿತವಾಗಿರುತ್ತವೆ ಅಂದರೆ ಜಡವಾಗಿರುತ್ತವೆ ಎಂದು ಈ ಓವೀ ಹಾಗೂ ಮುಂದಿನ ಓವೀಗಳಲ್ಲಿ ಸಿದ್ಧಮಾಡಲಾಗಿದೆ. ಈ ಓವೀಯಲ್ಲಿ ಒಂದು ವೇಳೆ ಇಂದ್ರಿಯಗಳಿಗೆ ಅಧಿಷ್ಠಾನವಾದ ಮನಸ್ಸಿನ ಅಧಿದೇವತೆಯ ಜೊತೆಗೆ ಆಯಾ ಇಂದ್ರಿಯಗಳ ಅಧಿದೇವತೆಗಳೂ ಸಹಕರಿಸಿದಾಗ್ಯೂ ಆ ಇಂದ್ರಿಯಗಳಿಗೆ ಯಾವುದೇ ತಮ್ಮದೇ ಆದ ಚೈತನ್ಯವಿರದೇ ಅವು ಸ್ವರೂಪತಃ ಜಡವೇ ಇರುತ್ತವೆ ಎಂಬುದನ್ನು ನಿರೂಪಿಸಲಾಗಿದೆ. ಇದೇ ನಿರೂಪಣೆಯನ್ನು ಮುಂದಿನ ಓವೀಯಲ್ಲಿ ಸಿದ್ಧಮಾಡಲಾಗಿದೆ. ಈ ಓವೀಯನ್ನು ಒಂದು ದೃಷ್ಟಾಂತದ ಸಹಾಯದಿಂದ ತಿಳಿಯಬಹುದು. ಒಬ್ಬ ವ್ಯಕ್ತಿಯ ಕಣ್ಣುಗಳು ಸರಿಯಾಗಿ ಕಾಣುತ್ತಿದ್ದರೆ ಆಗ ತೇಜದ ಅಭಿಮಾನಿಯಾದ ಸೂರ್ಯದೇವನು ಆ ವ್ಯಕ್ತಿಯ ಕಣ್ಣುಗಳ ಅಧಿದೇವತೆಯಾಗಿದ್ದು ಅವನ ಸಹಕಾರವಿದೆಯೆಂದೂ ಮತ್ತು ಮನಸ್ಸಿನ ಅಧಿದೇವತೆಯಾದ ಚಂದ್ರನು ಆ ವ್ಯಕ್ತಿಯ ಮನಸ್ಸಿನ ಸ್ವಾಮಿಯೂ ಅಂದರೆ ಅಧಿದೇವತೆಯೂ ಆಗಿದ್ದು ಅವನ ಸಹಕಾರವೂ ಇದೆ ಎಂದು ಅರ್ಥವಾದರೂ ಆ ಕಣ್ಣುಗಳಿಗೆ ಸ್ವತಂತ್ರವಾದ ಚೈತನ್ಯವಿರುವುದಿಲ್ಲ.

**ಓ.ಸಂ.161 :** ಒಂದು ವೇಳೆ ಇಂದ್ರಿಯಗಳಿಗೆ ತಮ್ಮದೇ ಆದ ಚೈತನ್ಯವು ಇರುತ್ತಿದ್ದರೆ ಆಗ ಯಾವುದೇ ಒಂದು ಇಂದ್ರಿಯವು ಉಳಿದ ಎಲ್ಲ ಇಂದ್ರಿಯಗಳ ಕಾರ್ಯವನ್ನು ತಿಳಿಯಬಹುದಿತ್ತು. ಆದರೆ ಒಂದು ಇಂದ್ರಿಯವು ಇನ್ನೊಂದಕ್ಕಿಂತ ಭಿನ್ನವಿದ್ದು ಅದರ ಬಗ್ಗೆ ಏನನ್ನೂ ತಿಳಿಯುವುದಿಲ್ಲ.

**ವಿವರಣೆ :** ಹಿಂದಿನ ಓವೀಯಲ್ಲಿ ಇಂದ್ರಿಯಗಳಿಗೆ ತಮ್ಮದೇ ಆದ ಚೈತನ್ಯವಿರುವುದಿಲ್ಲವೆಂದು ತಿಳಿಸಲಾಗಿದೆ. ಇದೇ ವಿಷಯವನ್ನು ಈ ಓವೀಯಲ್ಲಿ ನಕಾರಾತ್ಮಕವಾಗಿ ಸಿದ್ಧಮಾಡಲಾಗಿದೆ. ಒಂದುವೇಳೆ ಒಂದೊಂದು ಇಂದ್ರಿಯವೂ ತನ್ನದೇ ಆದ ಚೈತನ್ಯವನ್ನು ಹೊಂದಿದ್ದರೆ ಆಗ ಪ್ರತಿಯೊಂದು ಇಂದ್ರಿಯವು ಬೇರೆ ಇನ್ನೊಂದರ ( ಉಳಿದ ಇಂದ್ರಿಯಗಳ ) ಕಾರ್ಯವೈಖರಿಯನ್ನು ತಿಳಿಯಬಹುದಿತ್ತು. ಆದರೆ ಹೀಗಾಗುತ್ತಿಲ್ಲ. ಅಂದರೆ ಯಾವುದೇ ಒಂದು ಇಂದ್ರಿಯವು ಉಳಿದವುಗಳ ಕಾರ್ಯವೈಖರಿಯನ್ನು ವಾಸ್ತವವಾಗಿ ತಿಳಿಯುವ ಯಾವ ಸಾಮರ್ಥ್ಯವೂ ಇರುವುದಿಲ್ಲ. ಉದಾಹರಣೆಗೆ, ನಯನವು ಕೇವಲ ದೃಶ್ಯಗಳನ್ನು ನೋಡುತ್ತದೆಯೇ ಹೊರತು ಅದಕ್ಕೆ ಉಳಿದ ಇಂದ್ರಿಯಗಳ ಕೆಲಸಗಳಾದ ಕೇಳುವುದಾಗಲೀ, ಸ್ಪರ್ಶಿಸುವುದಾಗಲೀ, ರುಚಿನೋಡುವುದಾಗಲೀ ಮೂಸಿಸುವುದಾಗಲೀ ಸಾಧ್ಯವಿಲ್ಲ. ಹಾಗೆಯೇ ಕಿವಿಗೆ ಕೇಳುವುದನ್ನು ಬಿಟ್ಟು ನೋಡುವುದು ಹಾಗೂ ಮುಂತಾದವುಗಳು ಸಾಧ್ಯವಿಲ್ಲ.

**ಓ.ಸಂ.162 :** ಆದರೆ ಎಲ್ಲ ಇಂದ್ರಿಯಗಳ ಕಾರ್ಯಗಳನ್ನು ತಿಳಿದುಕೊಳ್ಳುವ ಯಾವ ಒಬ್ಬನು ಅಂದರೆ ಆತ್ಮನು ಇರುವನೋ ಅವನು ಚೈತನ್ಯಪೂರ್ಣನೂ ಹಾಗೂ ಇಂದ್ರಿಯಗಳಿಗಿಂತ ಭಿನ್ನನೂ ಇರಲೇಬೇಕು.

**ವಿವರಣೆ :** ಆದರೆ ಒಬ್ಬನೇ ಆತ್ಮನು ಈ ಎಲ್ಲ ಇಂದ್ರಿಯಗಳ ಕಾರ್ಯವೈಖರಿಯನ್ನು ತಿಳಿಯುತ್ತಿದ್ದಾನೆ. ನೋಡುವವನೂ ತಾನೇ, ಕೇಳುವವನೂ ತಾನೇ, ಇತ್ಯಾದಿ ಭಾವವು ಎಲ್ಲರಿಗೂ ಇರುವುದು ಅನುಭವದಲ್ಲಿದೆ. ಅಲ್ಲದೇ ಹೀಗೆ ಒಬ್ಬ ಆತ್ಮನು ಎಲ್ಲ ಇಂದ್ರಿಯಗಳ ಕಾರ್ಯಗಳನ್ನು ತಿಳಿಯಲು ಸಮರ್ಥನಿರುವುದರಿಂದ ಅವುಗಳಲ್ಲಿ ಹೊಂದಾಣಿಕೆಯೂ ಸಾಧ್ಯವಾಗಿದ್ದು, ಯಾವುದೇ ಒಂದು ಗುರಿ ಸಾಧಿಸುವ ಉದ್ದೇಶವು ಈಡೇರಬಹುದಾಗಿರುತ್ತದೆ. ಇದರಿಂದ ತಿಳಿದುಬರುವ ಅಂಶವೇನೆಂದರೆ ಆತ್ಮನು ಚೈತನ್ಯಪೂರ್ಣನೂ ಹಾಗೂ ಇಂದ್ರಿಯಗಳಿಗಿಂತ ಭಿನ್ನನೂ ಇರಲೇಬೇಕಾಗುತ್ತದೆ. "ಯದ್ರಷ್ಟಾಃ ತದ್ಭಿನ್ನಃ" ಎಂಬ ನುಡಿಯಂತೆ ಇಂದ್ರಿಯಗಳನ್ನು ತಿಳಿಯುವವನು ಅವುಗಳಿಗಿಂತ ಭಿನ್ನನಿರಲೇಬೇಕಾಗುತ್ತದೆ. ಹಾಗೆಯೇ ಅವುಗಳನ್ನು ತಿಳಿಯುವವನು ಚೈತನ್ಯಪೂರ್ಣನೂ ಇರಲೇಬೇಕಾಗುತ್ತದೆ.

**ಓ.ಸಂ.163 :** ಹೀಗೆ ಇಂದ್ರಿಯಗಳು ಜಡವಿರುವುದರಿಂದ ಅವುಗಳಿಗೆ ದೇವತ್ವವು ಇರುವ ಸಂಭವವಿರುವುದಿಲ್ಲ. ಇನ್ನು ಪ್ರಾಣವು ದೇಹಕ್ಕೆ ಜೀವವನ್ನು ಕೊಡುವುದರಿಂದ ಅದು ದೇವನಿರಬಹುದು ಎನ್ನುವ ಬಗ್ಗೆ ವಿಚಾರವನ್ನು ಪ್ರಾರಂಭಿಸಲಾಗಿದೆ.

**ವಿವರಣೆ :** ಈ ಓವೀಯಲ್ಲಿ ಈವರೆಗೆ ಇಂದ್ರಿಯಗಳ ಬಗ್ಗೆ ನಡೆದ ಚರ್ಚೆಯ ನಿರ್ಣಯವನ್ನು ತಿಳಿಸಲಾಗಿದೆ. ಇಂದ್ರಿಯಗಳು ಪರಸ್ಪರ ಒಂದನ್ನೊಂದು ತಿಳಿಯಲಾರವು ಮತ್ತು ಅವುಗಳನ್ನು ತಿಳಿಯುವ ಆತ್ಮನೊಬ್ಬನಿದ್ದಾನೆ ಎನ್ನುವ ಸಂಗತಿಯಿಂದ ಆತ್ಮನು ಚೈತನ್ಯಪೂರ್ಣನು ಎನ್ನುವುದು ಮಾತ್ರವಲ್ಲದೇ ಇಂದ್ರಿಯಗಳೂ ಜಡ ಸ್ವರೂಪದ ಅನಾತ್ಮವಿರುವುವು ಎಂಬ ವಿಷಯವೂ ಕೂಡ ತಿಳಿದುಬರುತ್ತದೆ.

ಇನ್ನು ಪ್ರಾಣವು ಪರಮಾತ್ಮನೋ ಅಥವಾ ಅಲ್ಲವೋ ಎನ್ನುವ ಬಗ್ಗೆ ಚರ್ಚೆ ಪ್ರಾರಂಭಿಸಲಾಗಿದೆ. ಜಡ ದೇಹಕ್ಕೆ ಜೀವತುಂಬುವುದೇ ಈ ಪ್ರಾಣವು. ಪ್ರಾಣವು ಹೋದ ಕೂಡಲೇ ಅದೇ ಜೀವಂತ ದೇಹವು ಜಡ ಶವವಾಗಿ ಬೀಳುತ್ತದೆ. ಆದ್ದರಿಂದ ಪ್ರಾಣವು ಪರಮಾತ್ಮನೇ ಇರಬಹುದು ಎನ್ನಿಸಿದರೂ ಅದೊಂದು ಜಡಶಕ್ತಿಯೇ ಹೊರತು ದೇವನಲ್ಲ ಎನ್ನುವುದನ್ನು ಮುಂದಿನ ಓವೀಗಳಲ್ಲಿ ತೋರಿಸಲಾಗಿದೆ.

**ಓ.ಸಂ.164 :** ಪ್ರಾಣವೇ ದೇಹಕ್ಕೆ ಜೀವತ್ವವನ್ನು ನೀಡುವುದು ಎನ್ನುವುದಾದರೆ ಪ್ರಾಣವನ್ನು ನಿರೋಧಿಸಬಹುದಾಗಿದೆ. ಹಾಗೂ ಪ್ರಾಣವನ್ನು ನಾನು ತಿಳಿಯುವವನಾಗಿದ್ದೇನೆ. ಒಂದು ವೇಳೆ ಪ್ರಾಣವು ತನ್ನನ್ನು ತಾನು ತಿಳಿಯುತ್ತದೆ ಎನ್ನುವುದಾದರೆ ಸ್ವಾತ್ಮಾಶ್ರಯ–ದೋಷವು ಉಂಟಾಗುತ್ತದೆ.

**ವಿವರಣೆ :** ಹಸಿವು, ನೀರಡಿಕೆ ಹಾಗೂ ಸಕಲ ದೈಹಿಕ ಕ್ರಿಯೆಗಳು ಪ್ರಾಣದ ಪರಿಣಾಮವೇ ಆಗಿರುತ್ತವೆ. ಆದರೆ ಈ ಕ್ರಿಯೆಗಳನ್ನು ನಾವು ಬೇಕಾದಾಗ ನಿಯಂತ್ರಿಸುವುದು ನಮ್ಮ ಅನುಭವದಲ್ಲಿರುತ್ತದೆ. ಆದುದರಿಂದ ಪ್ರಾಣವನ್ನು ನಾನು ನಿರೋಧಿಸಲು ಶಕ್ಯನಾಗಿದ್ದೇನೆ. ಅಲ್ಲದೇ, ಈ ಎಲ್ಲ ಕ್ರಿಯೆಗಳನ್ನು ನಾನು ತಿಳಿಯಬಲ್ಲವನಾದ್ದರಿಂದ ಪ್ರಾಣವನ್ನು ಜಡವೆಂದು ತಿಳಿಯಬಹುದು. ಒಂದು ವೇಳೆ ಪ್ರಾಣವೇ ಪ್ರಾಣವನ್ನು ಅರಿಯುತ್ತಿದೆಯೇ ಹೊರತು ನಾನಲ್ಲ ಎನ್ನುವುದಾದರೆ, ಆಗ ಪ್ರಾಣವೇ ಜ್ಞಾತೃವೂ ಹಾಗೂ ಜ್ಞೇಯವೂ ಎರಡೂ ಆಗಿ ವಿರೋಧಾಭಾಸವಾಗುತ್ತದೆ. ಇದನ್ನು ಸ್ವಾತ್ಮಾಶ್ರಯ–ದೋಷವೆನ್ನುವರು. ಈ ದೋಷದಲ್ಲಿ ಯಾವ ವಸ್ತುವನ್ನು ಸಿದ್ಧಮಾಡಬೇಕಾಗಿದೆಯೋ ಅದೇ ವಸ್ತುವನ್ನು ಅದೇ ವಾದದಲ್ಲಿ ಆಧಾರ ವಾಕ್ಯವಾಗಿ ತೆಗೆದುಕೊಳ್ಳಲಾಗಿರುತ್ತದೆ.

**ಓ.ಸಂ.165 :** ಆದುದರಿಂದ ಈ ಜಡ ಪ್ರಾಣವನ್ನು ದೇವರೆನ್ನಲು ಬರುವುದಿಲ್ಲ. ಇನ್ನು ಮೇಲೆ ಮನ, ಬುದ್ಧಿ, ಚಿತ್ತ ಮತ್ತು ಅಹಂಕಾರಗಳನ್ನು ದೇವರೆನ್ನಬಹುದೇ ಎನ್ನುವ ಬಗ್ಗೆ ವಿಚಾರವನ್ನು ಪ್ರಾರಂಭಿಸಲಾಗಿದೆ.

**ವಿವರಣೆ :** ಇಲ್ಲಿಯವರೆಗೆ ಪ್ರಾಣವು ನಿಯಂತ್ರಿಸಲ್ಪಡುತ್ತದೆ ಮತ್ತೂ ತಿಳಿಯಲ್ಪಡುತ್ತದೆ ಎನ್ನುವ ಕಾರಣದಿಂದ ಅದು ಜಡ ಸ್ವರೂಪವನ್ನು ಹೊಂದಿದೆ ಮತ್ತು ಈ ಕಾರಣದಿಂದ ಪ್ರಾಣವನ್ನು ದೇವನೆನ್ನಲು ಬರುವುದಿಲ್ಲ. ಎಂದು ಈ ಓವೀಯಲ್ಲಿ ನಿರ್ಣಯಿಸಲಾಗಿದೆ.

ಇನ್ನು ಅಂತಃಕರಣದ ಅಂಗಗಳಾದ ಮನ, ಬುದ್ಧಿ, ಚಿತ್ತ ಮತ್ತು ಅಹಂಕಾರಗಳು ದೇವರಲ್ಲವೆಂಬುದರ ಬಗ್ಗೆ ವಿಚಾರವನ್ನು ಪ್ರಾರಂಭಿಸಲಾಗಿದೆ. ಈ ಮನ, ಬುದ್ಧಿ, ಚಿತ್ತ ಮತ್ತು ಅಹಂಕಾರಗಳು ವೃತ್ತಿರೂಪವಾಗಿರುತ್ತವೆ. ಇವು ಯಾವುದೇ ತಿಳಿಯುವ ಕ್ರಿಯೆಯಲ್ಲಿ ಒಂದಕ್ಕೊಂದು ಜೊತೆಯಾಗಿಯೇ ವರ್ತಿಸುವವು. ಮನಸ್ಸು ಇಂದ್ರಿಯಗಳ ಸಹಯೋಗದಿಂದ ಚಿತ್ತದ ಜೊತೆಗೆ ಸೇರಿಕೊಂಡು ಒಂದು ವಸ್ತುವು ಹೀಗಿರಬಹುದು ಎಂದು ತಿಳಿಸುತ್ತದೆ. ಬುದ್ಧಿಯು ಅದನ್ನು ನಿಶ್ಚಯಿಸುತ್ತದೆ. 'ನಾನು' ಎಂಬ ಅಹಂಕಾರವು ಜ್ಞಾತೃವಾಗಿ ಅದನ್ನು ಅರಿಯುತ್ತದೆ. ಹೀಗೆ ತಿಳಿಯುವ ಪ್ರಕ್ರಿಯೆಯು ಸಂಪೂರ್ಣವಾಗಿ ಅಂತಃಕರಣವನ್ನು ಅವಲಂಬಿಸಿರುವುದರಿಂದ ಅಂತಃಕರಣವು ದೇವರಿರಬಹುದು ಎಂಬ ಸಂಶಯವು ಬರುವುದು

**ಓ.ಸಂ.166 :** ಆದರೆ ಮನ–ಬುದ್ಧಿ–ಚಿತ್ತ–ಅಹಂಕಾರಗಳು ಸುಷುಪ್ತಿಯಲ್ಲಿ ತೋರುವುದಿಲ್ಲ. ಅಲ್ಲದೇ ಅವು ಕ್ಷಣ–ಕ್ಷಣಕ್ಕೆ ಉತ್ಪತ್ತಿ–ನಾಶಗಳನ್ನು ಹೊಂದುತ್ತಿರುತ್ತವೆ.

**ವಿವರಣೆ :** ಮನೋ, ಬುದ್ಧಿ, ಚಿತ್ತ ಮತ್ತು ಅಹಂಕಾರಗಳು ನಮ್ಮ ಸಕಲ ಜ್ಞಾನಕ್ರಿಯೆಗಳಿಗೆ ಆಧಾರವಾಗಿರುವುದರಿಂದ ಸಂಯುಕ್ತವಾಗಿ ಅವುಗಳನ್ನು ದೇವನೆಂದು ಕರೆಯಬಹುದೇನೋ ಎಂಬ ಸಂಶಯವನ್ನು ಹಿಂದಿನ ಓವೀಯಲ್ಲಿ ವ್ಯಕ್ತಮಾಡಲಾಗಿತ್ತು. ಈ ಓವೀಯಲ್ಲಿ ಹಾಗೆ ಮಾಡಲಾಗುವುದಿಲ್ಲವೆಂದು ಸಕಾರಣಗಳನ್ನು ತಿಳಿಸಿದೆ. ಒಂದನೆಯದಾಗಿ, ಇಡೀ ಅಂತಃಕರಣವು ಸುಷುಪ್ತಿಯಲ್ಲಿ ತೋರುವುದಿಲ್ಲ. ಅದು ಒಂದು ವೇಳೆ ಪರಮಾತ್ಮನೇ ಆಗಿದ್ದ ಪಕ್ಷದಲ್ಲಿ ಈ ಅಂತಃಕರಣವು ಸುಷುಪ್ತಿಯಲ್ಲಿ ನಾಶವಾಗುತ್ತಿರಲಿಲ್ಲ. ಸತ್ಯ ಸ್ವರೂಪವು ಸದಾ ಇರಲೇಬೇಕಾಗುತ್ತದೆ. ಅದಕ್ಕೆ ಉತ್ಪತ್ತಿ–ನಾಶಗಳಿರುವುದಿಲ್ಲ. ಎರಡನೆಯದಾಗಿ, ಮನೋಬುದ್ಧ್ಯಾದಿಗಳು ವೃತ್ತಿರೂಪವಾಗಿದ್ದು, ಈ ವೃತ್ತಿಗಳು ಸ್ಥಿರವಾಗಿರದೇ ಕ್ಷಣ–ಕ್ಷಣಕ್ಕೆ ಉತ್ಪತ್ತಿ–ನಾಶಗಳನ್ನು ಪಡೆಯುತ್ತಿರುತ್ತವೆ. ಹೀಗೆ ಇವು ಪರಮಾತ್ಮನಾದರೆ ಪರಮಾತ್ಮನೂ ಹುಟ್ಟು–ಸಾವನ್ನು ಅನುಭವಿಸಬೇಕಾಗುತ್ತದೆ. ಆದ್ದರಿಂದ ಇವು ಪರಮಾತ್ಮನಾಗಲು ಸಾಧ್ಯವಿಲ್ಲ.

**ಓ.ಸಂ.167 :** ವೃತ್ತಿಗಳ ಉತ್ಪತ್ತಿ–ನಾಶಗಳನ್ನು ನಿರಂತರ ನೋಡುತ್ತಿರುವ ಸಾಕ್ಷಿಯು ಈ ವೃತ್ತಿಗಳಿಗಿಂತ ಭಿನ್ನವಾಗಿರುವುದಲ್ಲದೇ ಈ ವೃತ್ತಿಗಳು ಸಾಕ್ಷಿಗೆ ದೃಶ್ಯವಾಗಿರುತ್ತವೆ. ದೃಶ್ಯವಾಗಿರುವುದು ಜಡದ ಲಕ್ಷಣವಾಗಿರುತ್ತದೆ ಮತ್ತು ಈ ಸೂಕ್ಷ್ಮಜಡವೂ ದೇವನಾಗಿರಲು ಸಾಧ್ಯವಿಲ್ಲ.

**ವಿವರಣೆ :** ಅಂತಃಕರಣ ವೃತ್ತಿಗಳ ಉತ್ಪತ್ತಿ–ನಾಶಗಳು ಯಾರಿಗೆ ತಿಳಿದು ಬರುತ್ತವೋ ಅವನನ್ನು ಸಾಕ್ಷಿ ಎಂದು ಕರೆದಿದ್ದಾರೆ. ಈ ಸಾಕ್ಷಿಯು ಅನವರತವೂ ವೃತ್ತಿರೂಪವಾಗಿರುವ ಜಾಗ್ರತಾದಿ ಮೂರು ಅವಸ್ಥೆಗಳನ್ನು ಅನವರತವೂ ನೋಡುತ್ತಲೇ ಇರುತ್ತಾನೆ. ಈ ಕಾರಣದಿಂದಲೇ ಮೂರು ಅವಸ್ಥೆಗಳು ನಮಗೆ ಇರುವುದು ತಿಳಿದು ಬರುತ್ತದೆ. ಹೀಗೆ ನಿರಂತರ ತಿಳಿಯುತ್ತಿರುವ ಸಾಕ್ಷಿಯು ವೃತ್ತಿಗಳಿಗಿಂತ ಭಿನ್ನವಾಗಿದ್ದು ಸಾಕ್ಷಿಗೆ ವೃತ್ತಿಗಳು ದೃಶ್ಯವಾಗಿವೆ. ಅಂದರೆ ಅವು ಸಾಕ್ಷಿಗೆ ( ಯಾವುದೇ ಜೀವಿಗೆ ) ತಿಳಿಯಲ್ಪಡುವ ಜಡವಾಗಿದೆ. ಯಾವುದೇ

ರೂಪದ ಜ್ಞಾನವು, ಅಂದರೆ ಶಬ್ದ–ಸ್ಪರ್ಶಾದಿಗಳಿಂದ ತಿಳಿಯಲ್ಪಡುವ ಜ್ಞಾನವೆಲ್ಲವೂ ವೃತ್ತಿರೂಪವೇ ಆಗಿರುತ್ತದೆ. ಕಾಮ–ಕ್ರೋಧ–ಹಸಿವು–ಬಾಯಾರಿಕೆ ಮುಂತಾದ ವೃತ್ತಿಗಳು ಆಂತರಿಕವಾಗಿ ಆಯಾ ವ್ಯಕ್ತಿಗಳಿಗೇ ತಿಳಿಯಲ್ಪಡುವಂತಹವು ಆಗಿರುತ್ತದೆ. ಆದರೆ ಇವು ಸೂಕ್ಷ್ಮ ರೂಪದ ಜಡವಾಗಿರುತ್ತವೆ. ಬಾಹ್ಯವಸ್ತುಗಳು ಸ್ಥೂಲ ರೂಪದಲ್ಲಿ ಕಂಡರೂ ಅವೂ ಕೂಡ ಇಂದ್ರಿಯ ವೃತ್ತಿಗಳೇ ಆಗಿದ್ದು ಸೂಕ್ಷ್ಮರೂಪವೇ ಆಗಿರುತ್ತವೆ. ಆದ್ದರಿಂದ ಈ ಸೂಕ್ಷ್ಮರೂಪದ ಜಡ ಅಂತಃಕರಣ ವೃತ್ತಿಗಳನ್ನು ದೇವರೆನ್ನಲು ಬರುವುದಿಲ್ಲ. ಒಂದುವೇಳೆ ಹಾಗಿದ್ದರೆ ದೇವನೂ ಜಡದಂತೆ ನಾಶವಾಗಬೇಕಾಗುತ್ತದೆ.

ಓ.ಸಂ.168 : ಸುಷುಪ್ತಿಯಲ್ಲಿ ಈ ಅಂತಃಕರಣ ವೃತ್ತಿಗಳು ಲಯವಾಗಿರುತ್ತವೆ. ಆ ಸ್ಥಿತಿಯಲ್ಲಿ ಏನೂ ತಿಳಿಯದಿರುವ ಅಜ್ಞಾನವು ಇದ್ದು ಈ ಅವಸ್ಥೆಯಲ್ಲಿ ಆಯಾಸವೆಲ್ಲವೂ ಪರಿಹಾರವಾಗುತ್ತವೆ. ಸುಖವು ಅನುಭವಕ್ಕೆ ಬರುತ್ತದೆ. ಆದ್ದರಿಂದ ಈ ಜೀವ ಸೃಷ್ಟಿಗೆ ಕಾರಣವಾದ ಅಜ್ಞಾನವು ದೇವನಾಗಿರಲು ಸಾಧ್ಯವಿಲ್ಲ.

ವಿವರಣೆ : ಈ ಓವೀಯಲ್ಲಿ ಅಜ್ಞಾನವೂ ಕೂಡ ದೇವನಲ್ಲವೆಂದು ತೋರಿಸಲಾಗಿದೆ. ಸುಷುಪ್ತಿಯಲ್ಲಿ ವೃತ್ತಿರೂಪವಾಗಿರುವ ಹಾಗೂ ವ್ಯಕ್ತವಾಗಿ ಕಾಣುವ ಇಡೀ ಈ ಜಗತ್ತೆಲ್ಲವೂ ಲಯವಾಗಿರುತ್ತದೆ. ಎಚ್ಚರಗೊಂಡಾಗ ಈ ಎಲ್ಲ ವ್ಯಕ್ತವಾದ ವಿಶ್ವವು ಪುನಃ ಸುಷುಪ್ತಿಯಿಂದ ಉದ್ಭವವಾಗುತ್ತದೆ. ಅಂದರೆ, ಸ್ವಪ್ನ–ಜಾಗ್ರತಾಗಳಿಗೆ ಸುಷುಪ್ತಿಯೇ ಕಾರಣಿಭೂತವಾಗಿರುತ್ತದೆ. ಸುಷುಪ್ತಿಯಲ್ಲಿ 'ನನಗೆ ಏನೂ ತಿಳಿಯಲಿಲ್ಲ' ಎಂಬ ಅನುಭವವು ಪ್ರತಿಯೊಬ್ಬರಿಗೂ ಆಗುತ್ತದೆ. ಅಂದರೆ ಈ ಅಜ್ಞಾನವೇ ಈ ಸಮಸ್ತ ಸೂಕ್ಷ್ಮ–ಸ್ಥೂಲ ಜೀವ ಸೃಷ್ಟಿಗೆ ಕಾರಣವಾಗಿರುತ್ತದೆ. ಅವಸ್ಥಾತ್ರಯಗಳಿಗೆ ಸಾಕ್ಷಿಯಾಗಿರುವವನೇ ಈ ಅಜ್ಞಾನವನ್ನೂ ನಿತ್ಯ ನೋಡುತ್ತಿರುವವನು. ಆದ್ದರಿಂದ ಜಡವಾಗಿರುವ ಹಾಗೂ ದೃಶ್ಯವಾಗಿರುವ ಈ ಅಜ್ಞಾನವು ದೇವನಾಗಿರಲು ಸಾಧ್ಯವಿಲ್ಲ. ಸುಷುಪ್ತಿಯಲ್ಲಿ ಈ ಅಜ್ಞಾನದ ಜೊತೆಗೆ ಸುಖವನ್ನೂ ಅನುಭವಿಸುತ್ತೇವೆ. ಈ ಸುಖವು ಸ್ವಪ್ನ–ಜಾಗ್ರತಗಳಲ್ಲಿರುವ ವೃತ್ತಿಗಳಿಂದಾಗುವ, ದುಃಖ–ಆಯಾಸಗಳು ಇಲ್ಲದಿರುವುದರಿಂದ ಉಂಟಾಗುವ ಹಾಗೂ ದುಃಖರಾಹಿತ್ಯದ ಅವಸ್ಥೆಯನ್ನು ಆ ರೂಪದಲ್ಲಿ ತೋರುವ ಅನುಭವವಾಗಿರುತ್ತದೆ.

ಓ.ಸಂ.169 : ಈಗ ಅಜ್ಞಾನಕ್ಕೂ ಸಾಕ್ಷಿಯಾಗಿರುವವನು ಸಕಲವನ್ನೂ ಉದಾಸೀನನಾಗಿ ನಿತ್ಯವೂ ಅವಲೋಕಿಸುತ್ತಿರುತ್ತಾನೆ. ಈ ಸಾಕ್ಷಿಯನ್ನು ಬಿಟ್ಟು ಬೇರೆ ಯಾರೂ ಅಂದರೆ ಬೇರೆ ಚೈತನ್ಯಗಳು, ಈ ಸಕಲ ವಿಶ್ವವನ್ನೂ ತಿಳಿಯಲಾರರು.

ವಿವರಣೆ : 'ನಾನು', 'ನನ್ನದು' ಎನ್ನುವ ಮಮಕಾರವಿರುವ ಜೀವರಿಗೆ ಮಾತ್ರ ರಾಗ–ದ್ವೇಷಗಳು ಉಂಟಾಗಲು ಸಾಧ್ಯವಾಗಿರುತ್ತದೆ. ಈ ಅಹಂಕಾರ–ಮಮಕಾರಗಳನ್ನೇ ನಿತ್ಯ ತಿಳಿಯುತ್ತಿರುವ ಸಾಕ್ಷಿಗೆ ಈ ಅಹಂಕಾರ–ಮಮಕಾರಗಳು ಇರಲು ಸಾಧ್ಯವಿಲ್ಲ. ಆದುದರಿಂದ ಸಾಕ್ಷಿಯು ಸಕಲವನ್ನೂ ಉದಾಸೀನನಾಗಿಯೇ ನಿತ್ಯ ನೋಡುತ್ತಿರುತ್ತಾನೆ. ಇವನು ಹೀಗೆ ನಿತ್ಯ ವೀಕ್ಷಿಸುತ್ತಿರುವ ಏಕೈಕ ಚೈತನ್ಯವಾಗಿರುತ್ತಾನೆ. ಅವನ ಸಾಕ್ಷಿತ್ವವೂ

ಕೂಡ ಆರೋಪವಾಗಿರುವುದೆಂದೂ ಹಾಗೂ ಬೇರೆ ಚೈತನ್ಯಗಳು ಇರುವುದಿಲ್ಲವೆಂದೂ ಮುಂದಿನ ಓವೀಯಲ್ಲಿ ತಿಳಿಸಲಾಗಿರುತ್ತದೆ. ಆದುದರಿಂದ ತನ್ನ ಸಾಕ್ಷಿತ್ವವನ್ನೂ ಸೇರಿಕೊಂಡು ಸಕಲ ವಿಶ್ವವನ್ನೂ ತಿಳಿಯುತ್ತಿರುವವನು ಸಾಕ್ಷಿಯೊಬ್ಬನೇ ಆಗಿರುತ್ತಾನೆ. ಅಲ್ಲದೇ ತಿಳಿಯಲ್ಪಟ್ಟ ಉಳಿದ ಸಕಲ ಜಡವೂ ತಾವು ಸಾಕ್ಷಿಯಿಂದ ತಿಳಿಯಲ್ಪಡುವುದರಿಂದಲೇ ತಮ್ಮ ಅಸ್ತಿತ್ವವು ಸಿದ್ಧವಾಗುತ್ತದೆ. ಸಾಕ್ಷಿಯ ಸತ್ತ್ವರೂಪವು ಅವುಗಳ ಕ್ಷಣಿಕವಾದ ಅಸ್ತಿತ್ವವು ತೋರುವಂತೆ ಮಾಡಿರುತ್ತದೆ.

**ಓ.ಸಂ.170 :** ಸಾಕ್ಷಿತ್ವವನ್ನು ಸಾಕ್ಷಿಯ ಮೇಲೆ ಆರೋಪಿಸಲಾಗಿದೆ. ಈ ಆರೋಪವು ಅನಾದಿಯಾಗಿದ್ದು ಮಾಯಾ ಕಾರ್ಯವಾಗಿದೆ. ಅಜ್ಞಾನವು ಸಾಕ್ಷಿಗೆ ಎಂದೂ ಯಾವಾಗಲೂ ಇರುವುದೇ ಇಲ್ಲ. ಚೈತನ್ಯವು ಅದ್ವಯವಾಗಿದ್ದು ಎರಡು ಚೈತನ್ಯಗಳಿರುವುದು ಸಾಧ್ಯವಿಲ್ಲ.

**ವಿವರಣೆ :** ಸಾಕ್ಷಿಯು ಶುದ್ಧ ಆತ್ಮನೇ ಅಥವಾ ಪರಬ್ರಹ್ಮನೇ ಆಗಿದ್ದು ಅವನ ಸ್ವರೂಪವು ಆಗಿರದ ಶುದ್ಧ ಸಾತ್ವಿಕಬುದ್ಧಿ ವೃತ್ತಿಯನ್ನು ಅವನ ಜಡ ಉಪಾಧಿಯಾಗಿ ಅವನ ಮೇಲೆ ಆರೋಪಿಸಿದಾಗ ಶುದ್ಧ ಆತ್ಮನು ಸಾಕ್ಷಿಯಾಗಿಯೂ (ವ್ಯಷ್ಟಿ), ಪರಬ್ರಹ್ಮನು ಈಶ್ವರನಾಗಿಯೂ (ಸಮಷ್ಟಿ) ಬದಲಾದರು. ಈಶ್ವರನ ಈ ಜಡಉಪಾಧಿಯನ್ನೇ ಮಾಯೆ ಎನ್ನುವರು. ಇದು ಅನಾದಿಯಾಗಿದ್ದುಕೊಂಡು ಜೀವ-ಜಗತ್ತುಗಳ ಸೃಷ್ಟಿ-ಸ್ಥಿತಿ-ಲಯ ಕಾರ್ಯಗಳನ್ನು ನಡೆಸಲು ಈಶ್ವರನನ್ನು ಸಗುಣ ಬ್ರಹ್ಮನನ್ನಾಗಿಯೂ ಹಾಗೂ ಸರ್ವಜ್ಞಾದಿ ಅನಂತಗುಣಗಳುಳ್ಳವನಾಗಿಯೂ ಮಾಡಿರುತ್ತದೆ. ಹಾಗೆಯೇ ಮಾಯೆಯದೆಸೆಯಿಂದಲೇ ಜೀವಗಳ ಸೃಷ್ಟಿಗಾಗಿ ಅವರವರ ಅನಾದಿ ಹಾಗೂ ಅಸಂಖ್ಯಾತ ವಾಸನೆಗಳಿಗನುಗುಣವಾಗಿ ಆಯಾ ಅಂತಃಕರಣಗಳನ್ನು ಸೃಷ್ಟಿಸಿ ಅವಗಳೊಳಗೆ ಪ್ರವೇಶಮಾಡಿ, ಅವುಗಳಿಗೆ ಅನುಗುಣವಾದ ಸ್ಥೂಲ-ಸೂಕ್ಷ್ಮರೂಪದ ಜಡದೇಹಗಳನ್ನು ಪಡೆದು ಈಶ್ವರನೇ ಅನೇಕ ಜೀವರುಗಳ ಭಾವವನ್ನು ಪಡೆಯುತ್ತಾನೆ. ("ತತ್‌ಸೃಷ್ಟ್ವಾ ತದೇವಾನುಪ್ರಾವಿಷತ್", "ಸಚ್ಚತ್ಯಚ್ಚಾಭವತು" – ಐತರೇಯೋಪನಿಷತ್ ? ). ಹೀಗೆ, ಮಾಯೆಯು ಈ ಎಲ್ಲ ಕಾರ್ಯಗಳಿಗೆ ಕಾರಣವಾಗಿರುವುದಲ್ಲದೇ ಈಶ್ವರನಿಗೆ ಜೀವ (ವ್ಯಷ್ಟಿ) ಮತ್ತು ಜಗತ್ತುಗಳ (ಸಮಷ್ಟಿ) ಸಾಕ್ಷಿಯಾಗಿರುವಂತೆ ಸಾಕ್ಷಿತ್ವವನ್ನು ಅದ್ವಯ ಪರಬ್ರಹ್ಮನ ಮೇಲೆ ಆರೋಪಿಸಲಾಗಿದೆ. ಇಲ್ಲಿ ಮಾಯಾ ಎಂದರೆ ಅಜ್ಞಾನ ಸ್ವರೂಪದ್ದಾಗಿದ್ದು ಯಾವುದು ನಿಜವಾಗಿ ಇರುವುದಿಲ್ಲವೋ ಅದನ್ನೇ ಮಾಯೆ ಎಂದು ಕರೆಯಲಾಗಿದೆ (ಮಾಯಾ). ಆದುದರಿಂದ ಜ್ಞಾನದಿಂದ ನಾಶವಾಗುವ ಈ ಮಾಯೆಯು ಅದರ ಕಾರ್ಯವು (ಜೀವ-ಜಗತ್ತುಗಳು ಹಾಗೂ ಅವುಗಳ ಸಾಕ್ಷಿಯು) ಇರುವಾಗ ಕೇವಲ ಇರುವಂತೆ ತೋರುತ್ತದೆ. ಈ ಸಾಕ್ಷಿಯು ಜೀವನ ಅವಸ್ಥಾತ್ರಯಗಳಿಗೆ ಸಾಕ್ಷಿಯಾಗಿರುವುದರಿಂದ ಸುಷುಪ್ತಿಯಲ್ಲಿ ತೋರುವ ಅಜ್ಞಾನಕ್ಕೂ ಸಾಕ್ಷಿಯಾಗಿರುತ್ತದೆ. ಅಂದರೆ ವ್ಯವಹಾರ ದೃಷ್ಟಿಯಿಂದ ಅವನು ಅಜ್ಞಾನವನ್ನು ತಿಳಿಯುವವನಾಗಿರುವುದರಿಂದ ಅವನಲ್ಲಿ ಜೀವತ್ವಕ್ಕೆ ಕಾರಣವಾದ ಅಜ್ಞಾನವಿಲ್ಲ. ಸಾಕ್ಷಿಯು ನಿತ್ಯಸಾಕ್ಷಿಯಾಗಿರುವುದರಿಂದ ಅಜ್ಞಾನವು ಅವನಿಗೆ ಎಂದೂ ಇರುವುದಿಲ್ಲ. ಅಲ್ಲದೇ ಸಾಕ್ಷೀ-ಚೈತನ್ಯವು ಅನೇಕವೂ ಇರುವುದಿಲ್ಲ. ದೇಶ-ಕಾಲಗಳಿಗೆ ಸೀಮಿತವಾಗಿರುವ ಜಡ

ಉಪಾಧಿಗಳಿಗೆ (ದೇಹ) ಮಾತ್ರ ಅನೇಕತ್ವವು ಅನ್ವಯಿಸುತ್ತದೆ. ಅವುಗಳಿಗೆ ಉಪಾಧಿಯಾಗಿರುವ ಒಂದೇ ಚೈತನ್ಯವು ಅನೇಕವಿದ್ದಂತೆ ತೋರುತ್ತದೆ. ನಿಜದಲ್ಲಿ ಅನೇಕ ಜೀವವಿರುವುದಾಗಲೀ, ಈಶ್ವರ ಹಾಗೂ ಜಗತ್ತಾಗಲೀ ಇರುವಂತೆ ತೋರುವುದು ಕೇವಲ ಭ್ರಮೆಯೇ ಆಗಿರುತ್ತದೆ.

**ಶ್ಲೋ.ಸಂ.171 :** ಆದುದರಿಂದ ಅಜ್ಞಾನವಾಗಲೀ ಅಥವಾ ಅದರ ಕಾರ್ಯವಾದ ಜೀವ-ಜಗತ್ತುಗಳಾಗಲೀ ನಿಜವಾಗಿಯೂ ಇರದೇ ಗಗನ ಪುಷ್ಪದಂತೆ ತೋರುವುವು. ಇದರಿಂದ ಸಾಕ್ಷಿಯ ಸಾಕ್ಷಿತ್ವವೂ ಮಿಥ್ಯೆಯೇ ಆಗಿ ತೋರುವುದು.

**ವಿವರಣೆ :** ವ್ಯಾವಹಾರಿಕವಾಗಿ ಸಾಕ್ಷಿಯು ಸುಷುಪ್ತಿಗೂ ( ಅಜ್ಞಾನಕ್ಕೂ ) ಸಾಕ್ಷಿಯಾಗಿರುವುದರಿಂದ ಸಾಕ್ಷಿಗೆ ಅಜ್ಞಾನವಿಲ್ಲವೆಂದು ಸಿದ್ಧವಾಗುತ್ತದೆ. ಈ ಸುಷುಪ್ತಿಯ ಅವಸ್ಥೆಯಲ್ಲಿ ಕಾರ್ಯರೂಪದ ಜೀವನೇ ಇಲ್ಲದಿರುವುದರಿಂದ ಅಜ್ಞಾನವೆಂಬುದು ಯಾರಿಗೂ ಇಲ್ಲವೆಂದೂ ಹಾಗೂ ವ್ಯವಹಾರದಲ್ಲಿ ಮಾತ್ರ ಜೀವರಿಗೆ ಇದ್ದಂತೆ ತೋರುವುದು ಎಂದೂ ತಿಳಿಯುವುದು. ಅಲ್ಲದೇ ಸಾಪೇಕ್ಷವಾಗಿರುವ ಸಾಕ್ಷಿಯ ಸಾಕ್ಷಿತ್ವವಾದರೂ ಈ ಅಜ್ಞಾನದಿಂದಲೇ ಸೃಷ್ಟಿಯಾಗಿರುವುದು. ಇದು ಅಪರೋಕ್ಷಜ್ಞಾನ ಪಡೆದ ಜೀವನಿಗೆ ತಾನೇ ಬ್ರಹ್ಮವೆಂಬ ಸತ್ಯವು ಗೋಚರವಾದ ಕೂಡಲೇ ತಿಳಿಯುವುದು. ಸಕಲಕ್ಕೂ ಕಾರಣವಾದ ಅಜ್ಞಾನವೇ ಇಲ್ಲವೆಂದ ಮೇಲೆ ಅದರ ಕಾರ್ಯವಾದ ಸಕಲ ಜಗತ್ತು ಸತ್ಯವಾಗಿರಲು ಸಾಧ್ಯವಿಲ್ಲ. ಕ್ಷಣಿಕವಾದ ಅಂತಃಕರಣ ವೃತ್ತಿಗಳಿಂದಲೇ ಹೊರಗಿನ ಪ್ರಪಂಚವು ಇದ್ದಂತೆ ತೋರುವುದು ಎನ್ನುವುದೂ ಕೂಡ ಸತ್ಯವೇ ಆಗಿರುತ್ತದೆ. ಹೀಗೆ ಜೀವ-ಜಗತ್ತುಗಳೇ ನಿಜವಾಗಿ ಇಲ್ಲದಿರುವಾಗ ಅವುಗಳ ಸಾಕ್ಷಿಯ ಸಾಕ್ಷಿತ್ವವೂ ಮಿಥ್ಯೆಯೇ ಆಗಿರುತ್ತದೆ, ಅಂದರೆ ವ್ಯವಹಾರ ದೃಷ್ಟಿಯಿಂದ ಅದು ಕೇವಲ ತೋರುತ್ತದೆ.

**ಶ್ಲೋ.ಸಂ.172 :** ಹೀಗೆ ಸಾಕ್ಷಿತ್ವವಿಲ್ಲದೇ ಸಾಕ್ಷಿಯಾಗಿರುವ ಚಿನ್ಮಾತ್ರವು ಭೇದಕ್ಕೂ ಹಾಗೂ ಅಭೇದಕ್ಕೂ ಅತೀತವಾಗಿ ತಾನೊಂದೇ ಉಳಿಯುವುದು. ಅದರ ನಾಶವನ್ನು ಯಾರಿಂದಲೂ ಮಾಡಲಾಗುವಂತಿಲ್ಲ.

**ವಿವರಣೆ :** ಸಾಕ್ಷಿತ್ವ ರಹಿತವಾದ ಸಾಕ್ಷಿಯು ಚಿನ್ಮಾತ್ರ ರೂಪದಿಂದ ಉಳಿಯುವುದು. ಅಂದರೆ ಸಾಕ್ಷಿಗೆ ಮೊದಲಿದ್ದ 'ಸಕಲವನ್ನೂ ತಿಳಿಯುತ್ತಾನೆ' ಎನ್ನುವ ಆರೋಪವು ಹೋಗಿ ಕೇವಲ ಪ್ರಕಾಶದಂತೆ ಶುದ್ಧ ಜ್ಞಾನ ಸ್ವರೂಪವಾಗಿ ಉಳಿಯುವುದು. ಇದು ಸ್ವಪ್ನ-ಜಾಗ್ರತಗಳಲ್ಲಿ ತೋರುವ ದ್ವೈತ ಹಾಗೂ ಭೇದ ಪ್ರಪಂಚವನ್ನೂ ಮತ್ತು ಸುಷುಪ್ತಿ-ಪ್ರಳಯಗಳಲ್ಲಿ ತೋರುವ ಅಭೇದವನ್ನೂ ಮೀರಿ, ಅಂದರೆ ಅವುಗಳಿಗೆ ಅತೀತವಾಗಿ, ಅದ್ವಯವಾಗಿ ತಾನೇ ತಾನಾಗಿ ಉಳಿಯುವುದು. ಈ ಚೈತನ್ಯದ ಆಧಾರದ ಮೇಲೆಯೇ ಜೀವರ ತಿಳಿಯುವ ಹಾಗೂ ತಿಳಿಯಲ್ಪಡುವ ಕ್ರಿಯೆಗಳು ನಡೆಯುವುದಾದರೂ ಇದಕ್ಕೆ ಯಾವುದರ ಸಂಬಂಧವೂ ಇರದಂತೆ ತಾನೇ ತಾನಾಗಿ ಉಳಿಯುವುದು. ಅದ್ವಯ ತತ್ತ್ವವಾಗಿರುವ ಈ ಚೈತನ್ಯದ ದೃಷ್ಟಿಯಿಂದ ಬೇರೆ ಯಾವುದೊಂದೂ ಇರುವುದಿಲ್ಲ.

ಆದುದರಿಂದ ಇದನ್ನು ಯಾರೂ ನಾಶ ಮಾಡಲಾರರು. ಹಾಗಾಗಿ ಇದರ ನಾಶವನ್ನು ಕಲ್ಪನೆಗೂ ಊಹಿಸಲು ಸಾಧ್ಯವಿಲ್ಲ.

**ಓ.ಸಂ.173 :** ಈ ಅವಿನಾಶಿಯಾದ ಚೈತನ್ಯವೇ ದೇವರಾಗಿದ್ದಾನೆ. ಇವನಿಲ್ಲದೇ ಉಳಿದೆಲ್ಲವೂ ವ್ಯರ್ಥವಾಗಿರುತ್ತದೆ. ಇದರ ಮೇಲೆ ಈಶ-ಜೀವರು ಕಲ್ಪಿತವಾಗಿ ತೋರುತ್ತಿದ್ದು ಅದು ನಿಶ್ಚಯವಾಗಿ ಮಾಯಾ ಕಾರ್ಯವಾಗಿದೆ.

**ವಿವರಣೆ :** ಈವರೆಗೆ ದೇವನಾರು ಎಂಬ ಜಿಜ್ಞಾಸೆಯು ನಡೆದಿತ್ತು. ಪರೀಕ್ಷೆ ಮಾಡಿದ ಪ್ರತಿಯೊಂದೂ ಕೂಡ ನಾಶವಾಗುವ ತತ್ತ್ವಗಳೇ ಆಗಿದ್ದರಿಂದ ಅವುಗಳನ್ನು ದೇವರೆನ್ನಲು ಬರುವಂತಿರಲಿಲ್ಲ. ಈಗ ನಾಶವಾಗದೇ ಉಳಿದಿರುವ ಅದ್ವಯವೂ ಹಾಗೂ ಅವಿನಾಶಿಯೂ ಆದ ಚೈತನ್ಯವೇ ದೇವರೆಂದು ತಿಳಿಯಲು ಶಕ್ಯವಾಗಿರುತ್ತದೆ. ಇದಲ್ಲದೇ ಉಳಿದೆಲ್ಲವನ್ನೂ ಕಲ್ಪನೆ ಮಾಡಲಿಕ್ಕೂ ಆಗುವುದಿಲ್ಲ. ಈ ಚೈತನ್ಯವಿಲ್ಲದೇ ಜೀವತ್ವವಾಗಲೀ ಈಶತ್ವವಾಗಲೀ ಇರಲು ಸಾಧ್ಯವಿಲ್ಲ. ಹಾಗೆಯೇ ಜೀವ-ಈಶರು ಪಡೆಯುವ ವೃತ್ತಿಗಳಿಂದಲೇ ಯಾವುದೇ ಜಡದ ಅಸ್ತಿತ್ವವು ಸಿದ್ಧವಾಗುವುದು. ಆದುದರಿಂದ ಮಾಯೆಯು (ಅಜ್ಞಾನ) ಇರುವುದರಿಂದಲೇ ಈ ಪರಮಾತ್ಮನ ಅಧಿಷ್ಠಾನದಲ್ಲಿ ಅಸಂಖ್ಯಾತ ಜೀವರು, ಅವರ ಪ್ರಪಂಚ ಮತ್ತು ಅವುಗಳನ್ನು ನಿಯಂತ್ರಿಸುವ ಈಶ್ವರರು ತಾತ್ಕಾಲಿಕವಾಗಿ ತಾವಿರುವಂತೆಯೇ ತೋರುತ್ತಿರುತ್ತಾರೆ.

**ಓ.ಸಂ.174 :** ಹೀಗೆ ಸಾಕ್ಷೀಭಾವದಿಂದಿರುವ ನಾನೇ ದೇವರೆಂದು ತಿಳಿದ ಮೇಲೆ ಯಾರ ದಾಸ್ಯವನ್ನು ಹೇಗೆ ಮಾಡಬೇಕೆಂಬುದು ತಿಳಿಯಬಹುದು. ಹೀಗೆ ದೇವರನ್ನು ಹುಡುಕದೇ ಮತ್ತು ಅವನಾರೆಂದು ತಿಳಿಯದೇ ಸುಮ್ಮನೇ ಶ್ರಮಿಸಿದರೆ ಅದೆಲ್ಲಾ ವ್ಯರ್ಥವಾಗುವುದು.

**ವಿವರಣೆ :** ಅವಸ್ಥಾತ್ರಯಗಳಿಗೆ ಸಾಕ್ಷಿಯಾಗಿರುವವನು ನಾನೇ ಹೊರತು ಬೇರೆ ಅಲ್ಲ. ಏಕೆಂದರೆ ನನಗೇ ಅವುಗಳ ಸ್ಮರಣೆಯು ಸಾಧ್ಯವಾಗಿರುತ್ತದೆಯೇ ಹೊರತು ಒಂದೊಂದೇ ಅವಸ್ಥೆಗೆ ಕಟ್ಟುಬಿದ್ದಿರುವ ವಿಶ್ವ-ತೈಜಸ-ಪ್ರಾಜ್ಞರಲ್ಲ. ಆದರೆ ಸುಷುಪ್ತಿಯಲ್ಲಿ ಅಜ್ಞಾನದ ಹಾಗೂ ಸುಖದ ಅನುಭವವು ಸಾಕ್ಷಿಗೆ ಮಾತ್ರ ಆದಂತಿರುತ್ತದೆ. ಏಕೆಂದರೆ ಪ್ರಾಜ್ಞನು ಇವುಗಳನ್ನು ತಿಳಿಯಲು ಪ್ರಕಟವಾಗಿಲ್ಲ ಮತ್ತು ಅವನೇ ಅಜ್ಞಾನದ ಸ್ವರೂಪವೇ ಆಗಿರುತ್ತಾನೆ. ಆ ಅವಸ್ಥೆಯಲ್ಲಿ ಅಂತಃಕರಣದ ಯಾವ ಅವಯವಗಳೂ ಪ್ರಕಟವಾಗಿಲ್ಲದಾಗಿರುವುದರಿಂದ 'ನಾನು' ಎಂದಾಗಲೀ ಅಥವಾ ಉಳಿದ ಯಾವುದೇ ಅನುಭವದ ಸ್ಮರಣೆಯಾಗಲೀ ಆ ಅವಸ್ಥೆಯಲ್ಲಿ ಸಾಧ್ಯವಾಗಿರುವುದಿಲ್ಲ. ಸುಷುಪ್ತಿಯಲ್ಲಿ ಸಾಕ್ಷಿಯು ತಿಳಿಯಲ್ಪಟ್ಟ ಅಜ್ಞಾನ ಹಾಗೂ ಸುಖದ ಅನುಭವವು ಜಾಗ್ರತಾವಸ್ಥೆಯು ಬಂದ ಮೇಲೆಯೇ 'ವಿಶ್ವ'ನಿಗೆ ಸ್ಮರಣದ ರೂಪದಲ್ಲಿ ಅನುವಾದ ಮಾಡಲ್ಪಡುತ್ತದೆ. ಇದು ಸ್ವಪ್ನದಲ್ಲಿ ಸಾಕ್ಷಿಯ ಅನುಭವವು ತೈಜಸನ ಅನುಭವದಂತೆ ಹೇಗೆ ಜಾಗ್ರತದಲ್ಲಿ ಸ್ಮರಣರೂಪದಲ್ಲಿ ವಿಶ್ವನಿಗೆ

ಅನುವಾದ ಮಾಡಲ್ಪಡುತ್ತದೋ ಹಾಗೆಯೇ ಇರುತ್ತದೆ. ಅಲ್ಲದೇ ಇದೇ ರೀತಿ ನಮ್ಮ ಪ್ರತಿಕ್ಷಣದ ತಿಳುವಳಿಕೆಯೂ ಜ್ಞಾನ ಸ್ವರೂಪನಾದ ಸಾಕ್ಷಿಯದೇ ಆಗಿದ್ದರೂ ಅದೆಲ್ಲವೂ ವಿಶ್ವ-ತೈಜಸರು ತಿಳಿದಂತೆ ಅನುವಾದವಾಗುತ್ತಿರುತ್ತದೆ. ಏಕೆಂದರೆ ವಿಶ್ವ-ತೈಜಸರು ವ್ಯಕ್ತವಾದ ಅಂತಃಕರಣರೂಪವೇ ಆಗಿದ್ದರೂ ಅದು ಸೂಕ್ಷ್ಮವಾದ ಸಾತ್ವಿಕ ಪ್ರಧಾನವಾದ ಜಡವೇ ಆಗಿರುತ್ತದೆ. ಇದು ಹೇಗೆ ಬಣ್ಣ-ಬಣ್ಣದ ಜಡ ಕನ್ನಡಿಗಳು ಆಯಾ ಬಣ್ಣವನ್ನು ಪ್ರತಿಫಲಿಸಿದರೂ ಯಾವ ಬಣ್ಣವನ್ನು ಪ್ರತಿಫಲಿಸಿದ್ದಾವೆ ಎಂಬ ತಿಳುವಳಿಕೆಯು ಅವುಗಳಿಗಿರುವುದಿಲ್ಲ. ಹಾಗೆಯೇ ಜಡ ಅಂತಃಕರಣಗಳಿಂದ ಆಯಾ ವಾಸನೆಗಳಿಗನುಸರಿಸಿ ತಮ್ಮದೇ ಆದ ಭೋಗ ಪ್ರಪಂಚವು ಸೃಷ್ಟಿಯಾದರೂ ಕೂಡ ಅದನ್ನು ತಿಳಿಯುವವನು ಸಾಕ್ಷಿಯೇ ಆಗಿರುತ್ತಾನೆ. ಹಿಂದಿನ ಎರಡು ಓವೀಗಳಲ್ಲಿ ಅವಿನಾಶಿಯಾದ ಸಾಕ್ಷಿಯೇ ದೇವನೆಂದು ತಿಳಿಸಲಾಗಿದೆ. ಹೀಗೆ ನಿಜವಾದ ಅರ್ಥದಲ್ಲಿ 'ನಾನೇ' ದೇವರೆಂದು ತಿಳಿದಮೇಲೆ ಯಾರು ಯಾರ ದಾಸ್ಯವನ್ನು ಮಾಡಬೇಕು? ನಾನು ನನ್ನ ದಾಸ್ಯವನ್ನೇ ಮಾಡುವುದಾದರೂ ಹೇಗೆ? ಎಂಬುದನ್ನು ತಿಳಿಯಬೇಕೇ ಹೊರತು ದೇವನನ್ನೇ ತಿಳಿಯದೇ ಯಾರ ಯಾರದೋ ದಾಸ್ಯವನ್ನು ಮಾಡಿದರೆ ಆಗುವ ಅನರ್ಥದ ಬಗ್ಗೆ ಮುಂದಿನ ಎರಡು ಓವೀಗಳು ಎಚ್ಚರಿಕೆಯನ್ನು ಕೊಡುತ್ತವೆ.

ಓ.ಸಂ.175 : ರಾಜನು ಯಾರೆಂದು ತಿಳಿಯದೇ ಚೋರನನ್ನೇ ರಾಜನೆಂದು ಭಾವಿಸಿ ಅವನ ಸೇವೆಯನ್ನು ಕೈಕೊಂಡರೆ ಅವನಿಗೆ ಮುಂದೆ ಶಿಕ್ಷೆಯೇ ಅದರ ಫಲವಾಗಿ ಸಿಗುವುದು.

ವಿವರಣೆ: ಈ ಓವೀಯಲ್ಲಿ ದಾಸ್ಯವನ್ನು ಮಾಡುವಾಗ 'ಯಾರ ದಾಸ್ಯವನ್ನು ಮಾಡಿದರೆ ಆ ದಾಸ್ಯದಿಂದ ಒಳಿತು ಆಗುವುದು' ಎಂದು ತಿಳಿಯದೇ ಯಾರ್‍ಯಾರದೋ ದಾಸ್ಯವನ್ನು ಮಾಡಿದರೆ ಕೊನೆಗೆ ಪಶ್ಚಾತ್ತಾಪವನ್ನು ಪಡಬೇಕಾಗುವುದು ಎಂಬುದನ್ನು ತಿಳಿಸಲು ಒಂದು ಒಳ್ಳೆಯ ದೃಷ್ಟಾಂತವನ್ನು ಇಲ್ಲಿ ಕೊಡಲಾಗಿದೆ. ಒಬ್ಬ ಸಜ್ಜನನು ತನಗೆ ಉಪಯೋಗವಾಗಬಹುದೆಂದು ರಾಜನ ದಾಸ್ಯವನ್ನು ಅಪೇಕ್ಷಿಸಿ ಒಬ್ಬ ಚೋರನನ್ನೇ ರಾಜನೆಂದು ತಪ್ಪು ತಿಳಿದು ಚೋರನ ದಾಸ್ಯವನ್ನು ಕೈಕೊಳ್ಳುತ್ತಾನೆ. ಈ ಸಜ್ಜನನು ರಾಜನು ಯಾರೆಂದು ಸರಿಯಾಗಿ ತಿಳಿಯದೇ ಒಬ್ಬ ಚೋರನನ್ನೇ ಸೇವಿಸಲು ಪ್ರಾರಂಭಿಸುತ್ತಾನೆ. ಆ ಚೋರನಾದರೋ ಈ ಸಜ್ಜನನ ಮುಗ್ಧತೆಯನ್ನು ದುರುಪಯೋಗ ಪಡಿಸಿಕೊಂಡು ತಾನು ರಾಜನೇ ಎಂದು ಆ ಸಜ್ಜನನನ್ನು ನಂಬಿಸಿ ತನ್ನ ಸೇವೆಯನ್ನು ಮಾಡಿಸಿಕೊಳ್ಳುತ್ತಾನೆ. ಇದರ ದುಷ್ಪರಿಣಾಮವು ಹೇಗೆ ಈ ಸಜ್ಜನನನ್ನು ಶಿಕ್ಷೆ ಅನುಭವಿಸುವಂತೆ ಮಾಡುತ್ತದೆ ಎಂಬುದನ್ನು ಮುಂದಿನ ಓವಿಯಲ್ಲಿ ತಿಳಿಸಲಾಗಿದೆ.

ಓ.ಸಂ.176 : ಎಷ್ಟೇ ಸಜ್ಜನನಾದರೂ ಅವನು ಚೋರನ ದಾಸ್ಯವನ್ನು ಮಾಡುತ್ತಿದ್ದರೆ ಅವನನ್ನು ಚೋರನೆಂದೇ ಆರೋಪಿಸಿ ಆಮೇಲೆ ಶಿಕ್ಷೆಯನ್ನು ವಿಧಿಸುವರು.

ವಿವರಣೆ : ಈ ಓವೀಯಲ್ಲಿ ಹಿಂದಿನ ಓವೀಯ ವಿಚಾರವನ್ನೇ ಮುಂದುವರಿಸಲಾಗಿದೆ. ಸಜ್ಜನನೊಬ್ಬನು ಚೋರನನ್ನೇ ರಾಜನೆಂದು ತಪ್ಪು ತಿಳಿದು ಅವನ ದಾಸ್ಯವನ್ನು ಮಾಡಲು ಪ್ರಾರಂಭಿಸಿದರೆ ಅವನಿಗೆ ಯಾವುದೇ ರೀತಿಯ ಲಾಭವಾಗದೇ ಕೇವಲ ಹಾನಿಯಾಗುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಸೇವಕನು ಕಳ್ಳನ

ದಾಸ್ಯವನ್ನು ಮಾಡುತ್ತಿರುವುದರಿಂದ ಯಾವ ಕಳ್ಳತನ ಮಾಡದಿದ್ದರೂ ಸಮಾಜವಾಗಲೀ ಅಥವಾ ನ್ಯಾಯಾಲಯವಾಗಲೀ ಅವನನ್ನು ಕಳ್ಳನೆಂದೇ ಪರಿಗಣಿಸುವುದು. ಒಂದು ವೇಳೆ ಕಳ್ಳನು ಕಳ್ಳತನಮಾಡಿ ಸಿಕ್ಕುಬಿದ್ದರೆ ಆಗ ಆ ಕಳ್ಳನ ಜೊತೆಗೆ ಅವನ ದಾಸನಾದ ಆ ಸಜ್ಜನನನ್ನೂ ಕೂಡ ಜೈಲಿಗೆ ಅಟ್ಟುತ್ತಾರೆ. ಹೀಗೆ ಅವನ ಸಜ್ಜನಿಕೆಯು ಉಪಯೋಗಕ್ಕೆ ಬರದೇ ಅವನನ್ನೂ ಕಳ್ಳನೆಂದೇ ಶಿಕ್ಷಿಸುತ್ತಾರೆ.

**ಓ.ಸಂ.177:** ಆದುದರಿಂದ ಮೊದಲು ರಾಜನಾರೆಂದು ತಿಳಿದ ನಂತರವೇ ಅವನ ದಾಸ್ಯವನ್ನು ಪ್ರೇಮದಿಂದ ಕೈಕೊಳ್ಳಬೇಕು. ಇದೇರೀತಿ ಮೊದಲು ದೇವನಾರೆಂದು ತಿಳಿದುಕೊಂಡ ನಂತರವೇ ಅವನ ದಾಸ್ಯವನ್ನು ಆತ್ಮಭಾವದಿಂದ ಮಾಡಬೇಕು.

**ವಿವರಣೆ :** ಈ ಓವೀಯ ಪೂರ್ವಾರ್ಧವು ದೃಷ್ಟಾಂತದ ಸಮಾರೋಪವನ್ನು ಮಾಡುತ್ತದೆ. ಒಬ್ಬ ಸಜ್ಜನನು ಚೋರನನ್ನೇ ರಾಜನೆಂದು ತಿಳಿದು ಅವನ ಸೇವೆಯನ್ನು ಮಾಡಿದರೆ ಅದು ವ್ಯರ್ಥವೇ ಆಗುವುದು. ಆದುದರಿಂದ ಮೊದಲು ರಾಜನಾರೆಂದು ತಿಳಿದುಕೊಳ್ಳಬೇಕು. ನಂತರವೇ ಆ ರಾಜನ ಸೇವೆಯನ್ನು ಕೈಕೊಳ್ಳಬೇಕು. ಇದರಿಂದ ಮಾತ್ರ ಆ ಸೇವೆಯು ಅವನಿಗೆ ಇಚ್ಛಿತ ಕಾಮನೆಗಳನ್ನು ಈಡೇರಿಸಬಲ್ಲದು. ಆದರೆ ಈ ಸೇವೆಯು ಪ್ರಾಮಾಣಿಕವೂ ಹಾಗೂ ಪ್ರೀತಿಯಿಂದ ಕೂಡಿರುವುದಾಗಿದ್ದರೆ ಮಾತ್ರ ಅದು ರಾಜನ ಮನಸ್ಸಿಗೆ ಒಪ್ಪಿತವಾಗುತ್ತದೆ. ಈಗ ಓವೀಯ ಉತ್ತರಾರ್ಧದಲ್ಲಿ ಈ ದೃಷ್ಟಾಂತವನ್ನು ದೇವನಿಗೆ ಅನ್ವಯಿಸಿ ಹೇಳಲಾಗಿದೆ. ಓವೀ ಸಂ.173 ರಲ್ಲಿ ದೇವನೆಂದರೆ ಅದ್ವಯನೂ, ಅವಿನಾಶಿಯೂ ಮತ್ತು ಚಿನ್ಮಾತ್ರನೂ ಆದ ಸ್ವತಃ ಆತ್ಮರೂಪನೇ ದೇವನೆಂದು ಸಿದ್ಧಮಾಡಲಾಗಿದೆ. ಆದುದರಿಂದ ಈ ದೇವನನ್ನು ಆತ್ಮಭಾವದಿಂದಲೇ ದಾಸ್ಯ ಮಾಡಬೇಕು. ಮುಂದಿನ ಓವೀಗಳು ಇದರ ವಿವರಣೆಯನ್ನು ಕೊಡುವುವು.

**ಓ.ಸಂ.178 :** ಆತ್ಮನಾದ ತಾನು ತನ್ನಲ್ಲಿ ಯಾವ್ಯಾವುದನ್ನು ಕಲ್ಪಿಸುವನೋ ಅದೆಲ್ಲವೂ ತಾನೇ ಆಗುವನು. ತಾನೇ ದೇವನಾಗಿ ಕಲ್ಪಿಸಿದ್ದಾನೆ. ಹಾಗೆಯೇ ತಾನೇ ದಾಸನಾಗಿಯೂ ಕಲ್ಪಿಸಿಕೊಂಡಿರುವನು. ನಿಶ್ಚಯವಾಗಿ ಹೀಗೆ ಕಲ್ಪಿಸಿಕೊಂಡಂತೆ ತಾನೇ ಆಗುತ್ತಾನೆ.

**ವಿವರಣೆ :** ಈ ಅದ್ವಯನಾದ ಆತ್ಮನು ತಾನು ಕಲ್ಪಿಸಿದಂತೆ ಎಲ್ಲವೂ ಅವನೇ ಆಗುತ್ತಾನೆ. ಒಬ್ಬನೇ ಇರುವ ತಾನು ಅನೇಕವಾಗುತ್ತೇನೆ ಎಂದು ಕಲ್ಪಿಸಿದ ಕೂಡಲೇ ಅದೆಲ್ಲವೂ ಅವನೇ ಆಗುತ್ತಾನೆ (ಏಕೋऽಹಂ ಬಹುಷ್ಯಾಮಿ... ? ). ಹೀಗೆ ಅವನು ಏನೆಲ್ಲ ಕಲ್ಪಿಸಿದನೋ ಅದೆಲ್ಲವೂ ತಾನೇ ಆಗುತ್ತಾ ಹೋದನು. ಹೇಗೆ ಸ್ವಪ್ನದಲ್ಲಿ ನಾವು ಕಲ್ಪಿಸಿದ್ದನ್ನೇ ಇರುವಂತೆ ನೋಡುತ್ತೇವೆಯೋ ಹಾಗೆಯೇ ಜಾಗ್ರತದಲ್ಲೂ ನಾವು ನಮ್ಮ ಹಿಂದಿನ ವಾಸನೆಗಳಿಗನುಗುಣವಾಗಿ ಇಡೀ ಸ್ವಪ್ನ ಜಗತ್ತನ್ನು ಸೃಷ್ಟಿಮಾಡುತ್ತೇವೆ. ಇಲ್ಲದಿರುವ ಹಾವನ್ನು ಹೇಗೆ ಇದ್ದಂತೆ ಕಲ್ಪಿಸುತ್ತೇವೆಯೋ ಮತ್ತು ಹೆದರಿ ಓಡಿಹೋಗುತ್ತೇವೆಯೋ ಹಾಗೆ ಇಲ್ಲದಿರುವ ಜಗತ್ತನ್ನು ಇದ್ದಂತೆ ಕಲ್ಪಿಸಿ ಜನ್ಮ-ಜನ್ಮಾಂತರ ಸುಖ-ದುಃಖಗಳನ್ನು ಅನುಭವಿಸುತ್ತೇವೆ. ಅಲ್ಲದೇ ಆತ್ಮನು ಈ ಸಂಸಾರ ತಾಪತ್ರಯಗಳಿಂದ ತಪ್ಪಿಸಿಕೊಳ್ಳಲು ತಾನೇ ದೇವ ಹಾಗೂ ದಾಸನನ್ನಾಗಿ ಕಲ್ಪಿಸಿಕೊಳ್ಳುತ್ತಾನೆ. ಅಂದರೆ ಈ ಭವ-ಬಂಧನದಿಂದ

ಮುಕ್ತಿಯನ್ನು ಪಡೆಯಲು ತನ್ನನ್ನು ದಾಸ್ಯ ಮಾಡುವ ಭಕ್ತನನ್ನಾಗಿ ಕಾಣುತ್ತಾನೆ. ಹಾಗೆಯೇ ಈ ದಾಸ್ಯ ಭಕ್ತಿಯನ್ನು ಸ್ವೀಕರಿಸಲು ಯಜಮಾನನಾಗಿರುವ ದೇವನಾಗಿ ಕಲ್ಪಿಸಿ ಹಾಗೆಯೇ ಇರುವಂತೆ ತೋರುತ್ತಾನೆ.

**ಓ.ಸಂ.179 :** ಆತ್ಮಭಾವದಿಂದ ದೇವನ ದಾಸ್ಯ ಮಾಡುವುದೆಂದರೆ ಆತ್ಮನಂತೆ ನಿಷ್ಕ್ರಿಯವಾಗಿ ಉಳಿದು ಬಿಡುವುದು. ಇದರಿಂದ ಸರ್ವ–ಸುಖಗಳ ಮೂಲವೇ ತಾನಾಗುವನು. ಅಂದರೆ ಸರ್ವ–ಸುಖಗಳ ಪ್ರಾಪ್ತಿಯೂ ಆ ಕೂಡಲೇ ಲಭಿಸುವುದು.

**ವಿವರಣೆ :** ಈ ಓವೀಯಲ್ಲಿ ದೇವನ ದಾಸ್ಯವನ್ನು ಆತ್ಮಭಾವದಿಂದ ಹೇಗೆ ಮಾಡಬೇಕು ಎಂಬುದನ್ನು ವಿವರಿಸಲಾಗಿದೆ. ತಾನು ಆತ್ಮದೃಷ್ಟಿಯಿಂದ ನೋಡಿಕೊಂಡಾಗ ತಾನೇ ದೇವನೆಂಬುದು ಗೊತ್ತಾದ ಮೇಲೆ ತನಗೆ ತಾನು ದಾಸ್ಯವನ್ನು ಮಾಡಿಕೊಳ್ಳುವುದು ಸಾಧ್ಯವಿಲ್ಲದ ಮಾತಾಗಿದೆ. ಆದುದರಿಂದ ಆತ್ಮನು ಸ್ವರೂಪದಿಂದ ನಿಷ್ಕ್ರಿಯನಾಗಿದ್ದಾನೆ. ಏಕೆಂದರೆ ಆತ್ಮನು ಸದಾ ದೇಹ ಹಾಗೂ ಮನಸ್ಸಿಗೆ ಅತೀತನಾಗಿರುತ್ತಾನೆ. ಆದರೆ ಯಾವುದೇ ಕ್ರಿಯೆಯನ್ನು ಮಾಡಲು ದೇಹ–ಮನಸ್ಸುಗಳ ಅವಶ್ಯಕತೆಯು ಇದ್ದೇ ಇರುತ್ತದೆ. ಆದರೆ ಆತ್ಮನು ದೇಹ–ಮನಸ್ಸುಗಳಿಂದ ಸದಾ ಅತೀತನಾಗಿಯೇ ಇರುವನು (ಯಥೋವಾಚೋನಿವರ್ತಂತೇ ತತ್ ಪ್ರಾಪ್ಯ ಮನಸಾಸಹ – ???? ಉಪನಿಷತ್ ? ). ಆದುದರಿಂದ ಅಕರ್ತೃವಾಗಿರುವ ಅವನು ಸದಾ ನಿಷ್ಕ್ರಿಯನಾಗಿರುತ್ತಾನೆ. ಹೀಗಾಗಿ ದಾಸ್ಯ ಭಾವವನ್ನು ಅವನಲ್ಲಿ ಮಾಡುವುದೆಂದರೆ ಜ್ಞಾನಿಯಾದವನು ಏನೂ ಮಾಡದೇ ಸದಾ ನಿಷ್ಕ್ರಿಯನಾಗಿಯೇ ಉಳಿಯುವುದು. ದೇಹ–ಮನಸ್ಸುಗಳು ಅವುಗಳ ಸ್ವಭಾವಕ್ಕನುಸರಿಸಿ ಏನಾದರೂ ಮಾಡುತ್ತಿದ್ದರೂ ತಾನು ಮಾತ್ರ ಎಲ್ಲವುದಕ್ಕೂ ಅತೀತವಾಗಿಯೇ ಉಳಿಯುವನು. ಈ ರೀತಿ ಆತ್ಮಭಾವದಿಂದ ಸದಾ ಇದ್ದಲ್ಲಿ ಯಾವ ಕಾಮನೆಗಾಗಿ ದಾಸ್ಯವನ್ನು ಕೈಗೊಳ್ಳುತ್ತಾನೆಯೋ ಆ ಕಾಮನೆಗಳು ಶೀಘ್ರವೇ ಈಡೇರುವುದಲ್ಲದೇ ಸಕಲ ಸುಖ ಪ್ರಾಪ್ತಿಯು ತತ್ ಕ್ಷಣವೇ ಲಭಿಸುವುದು. ಏಕೆಂದರೆ ಆತ್ಮನು ಸಕಲ ವಿಷಯ ಸುಖಗಳ ಮೂಲವಿರುವನು. ಅವನು ಅಮಿತ ಆನಂದ ಸ್ವರೂಪನೇ ಇರುವುದರಿಂದ ಅವನ ಆನಂದದ ಅಂಶವೇ ಆನಂದಾಭಾಸವಾಗಿ ವಿಷಯ ಸುಖಗಳ ರೂಪದಲ್ಲಿ ತೋರುತ್ತದೆ. ಸಕಲ ಜೀವಿಗಳು ಅದಕ್ಕಾಗಿಯೇ ಜೀವಿಸುವಂತಾಗಿದೆ.

**ಓ.ಸಂ.180 :** ಈ ರೀತಿಯ ದಾಸ್ಯಭಕ್ತಿಯು ದೊರೆಯಬೇಕಾದರೆ ಮೊದಲು ಸದ್ಗುರುವಿನ ಅಥವಾ ಕೊನೆಯಪಕ್ಷ ಇಷ್ಟದೇವತಾ ಮೂರ್ತಿಯ ದಾಸ್ಯವನ್ನಾದರೂ ಮಾಡಬೇಕು. ಇದರಿಂದ ಬಹುಕಾಲದ ನಂತರ ಅಂತಹವರೂ ಕೂಡ ಭವ ಬಂಧನದಿಂದ ಪಾರಾಗುವರು.

**ವಿವರಣೆ :** ಈ ಓವೀಯಿಂದ ವಿಚಾರಶೀಲರಲ್ಲದವರಿಗಾಗಿ ( ಸಾಮಾನ್ಯ ಮನುಷ್ಯರಿಗಾಗಿ ) ಈ ರೀತಿಯ ದಾಸ್ಯವನ್ನು ಹೇಳಲಾಗಿದೆ. ಇದರಲ್ಲಿ ಸದ್ಗುರುವಿನ ದಾಸ್ಯವು ಸಿಕ್ಕಲ್ಲಿ ಅದು ಸರ್ವ ಶ್ರೇಷ್ಠವಾಗಿರುವುದು. ಒಂದು ವೇಳೆ ಅನೇಕ ಕಾರಣಗಳಿಂದ ಇದು ಸಾಧ್ಯವಾಗದಿದ್ದಲ್ಲಿ ಅವರವರ ಇಷ್ಟದೇವತಾ ಮೂರ್ತಿಯ

ದಾಸ್ಯವನ್ನಾದರೂ ಕೈಕೊಳ್ಳಬೇಕು. ಆದರೆ ಇಂತಹ ದೈಹಿಕ-ಮಾನಸಿಕ ದಾಸ್ಯವನ್ನು ಬಹುಕಾಲದವರೆಗೆ ಮಾಡಬೇಕಾಗುವುದು. ಏಕೆಂದರೆ ಅವರ ದುಷ್ಟವಾಸನೆಗಳೆಲ್ಲ ನಿರ್ನಾಮವಾಗಿ ಅವರಿಗೆ ಚಿತ್ತಶುದ್ಧಿಯು ಪ್ರಾಪ್ತವಾಗುವತನಕ ನಿರಂತರವಾಗಿ ಈ ರೀತಿಯ ದಾಸ್ಯವನ್ನು ಮಾಡಬೇಕಾಗಿರುತ್ತದೆ. ಇಂತಹ ದಾಸ್ಯದಿಂದ ಇದೇ ಜನ್ಮದಲ್ಲಿ ಇಲ್ಲವೇ ಕೆಲವರಿಗೆ ಮುಂದಿನ ಜನ್ಮದಲ್ಲಾದರೂ ಶ್ರೀ ಗುರು ಪ್ರಸಾದದಿಂದ ಮುಕ್ತಿಯು ಲಭಿಸುವುದು.

**ಓ.ಸಂ.181 :** ಸದ್ಗುರುವಿನ ಗೃಹದಲ್ಲಿ ಸ್ವತಃ ತಾನೇ ಕಸಗುಡಿಸುವುದು, ಸಾರಿಸುವುದು ಮುಂತಾದ ಕಾರ್ಯಗಳನ್ನು ಮಾಡಬೇಕು. ಈ ಸೇವೆಗಳನ್ನು ದೇವಸ್ಥಾನಗಳಲ್ಲೂ ಮಾಡಬಹುದು. ರಾಜನಾಗಲೀ ಅಥವಾ ಪಂಡಿತನಾಗಲೀ 'ತಾನು ಇಂಥಹವನು' ಎಂಬ ಪ್ರತಿಷ್ಠೆಯನ್ನು ಬಿಡಬೇಕು ( ಮಾಡಬಾರದು ). ಸ್ವತಃ ಈ ರೀತಿ ಸೇವೆಯನ್ನು ಮಾಡಬೇಕು.

**ವಿವರಣೆ :** ಈ ಓವೀಯಲ್ಲಿ ಗುರುವಿಗೆ ಇಲ್ಲವೇ ತನ್ನ ಇಷ್ಟದೇವತೆಗೆ ಹೇಗೆ ಸೇವೆಯನ್ನು (ದಾಸ್ಯವನ್ನು) ಕೈಕೊಳ್ಳಬೇಕು ಅನ್ನುವುದನ್ನು ವಿವರಿಸಲಾಗಿದೆ. ಗುರುಗಳ ಮನೆಯಲ್ಲಿ ಅಥವಾ ದೇವಾಲಯದಲ್ಲಿ ಒಳಗೆ ಮತ್ತು ಹೊರಗೆ ಕಸವನ್ನು ಗುಡಿಸುವುದು, ಒಳಗೆ ಸಾರಿಸುವುದು, ಸ್ವಯಂ ಸೇವಕನಾಗಿ ಮಾಡಬೇಕಾದ ಕೆಲಸಗಳನ್ನು ತಾನೇ ಮಾಡಬೇಕು. ಮುಖ್ಯವಾಗಿ ಶ್ರೀಗುರುವಿನ ಬಟ್ಟೆಗಳನ್ನು ಸ್ವಚ್ಛಮಾಡುವುದು, ಅವರ ಕಾಲುಗಳನ್ನು ಒತ್ತುವುದು, ಅವರ ಆರೋಗ್ಯದ ಕಾಳಜಿವಹಿಸುವುದು ಮುಂತಾದ ಸೇವೆಗಳನ್ನು ತಪ್ಪದೇ ಮಾಡಬೇಕು. ಸ್ವತಃ ಗುರುಗಳ ಸೇವೆಯನ್ನು ಮಾಡುವುದು ಅತ್ಯಂತ ಶ್ರೇಯಸ್ಕರ. ಒಂದುವೇಳೆ ಸಮರ್ಥ ಗುರುಗಳು ಲಭ್ಯವಿಲ್ಲದಿದ್ದಲ್ಲಿ ಆಗ ಇಷ್ಟದೇವತೆಯ ಸೇವೆಯನ್ನಾದರೂ ಕೈಕೊಳ್ಳಬೇಕು. ಸೇವೆ ಮಾಡುವಾಗ ತಾನು ರಾಜನು, ಇಲ್ಲವೇ ವಿದ್ವಾಂಸನು, ಮುಂತಾದ ವಿಚಾರಗಳು ಬರದೇ, ಅಂದರೆ ತನ್ನ ಸ್ಥಿತಿ-ಗತಿಗಳನ್ನು ಚಿಂತಿಸದೇ ಕೇವಲ ನಿಸ್ವಾರ್ಥ ಸೇವಾಭಾವನೆಯನ್ನು ಬೆಳಸಿಕೊಂಡು, ನಿಷ್ಠೆಯಿಂದ ಸೇವೆ ಸಲ್ಲಿಸಬೇಕು.

**ಓ.ಸಂ.182 :** ಸೇವಕ ಜನರಿಂದ ಈ ಸೇವೆಯನ್ನು ಮಾಡಿಸಿದರೆ ಆಗ ತನ್ನ ಚಿತ್ತ ಶುದ್ಧಿಯು ಆಗುವುದಿಲ್ಲ. ಆದ್ದರಿಂದ ದಾಸ್ಯವನ್ನು ತಾನೇ ಸ್ವತಃ ಮಾಡಬೇಕು.

**ವಿವರಣೆ :** ಕೆಲವು ಶ್ರೀಮಂತರು ಗುರುಗಳ ಆಶ್ರಮಕ್ಕಾಗಲೀ ಅಥವಾ ದೇವಸ್ಥಾನಕ್ಕಾಗಲೀ ಸಾಕಷ್ಟು ಧನಸಹಾಯ ಮಾಡುತ್ತಾರೆ. ಅವರಿಗೆ ಗುರುಗಳ ಮೇಲಾಗಲೀ ಅಥವಾ ದೇವರ ಬಗ್ಗೆಯಾಗಲೀ ಅತ್ಯಂತ ಪೂಜ್ಯಭಾವನೆಯಿರುವುದು ನಿಜವಾಗಿರುತ್ತದೆ. ಅವರು ಗುರುಗಳ ಸೇವೆಗಾಗಿಯೇ ಅನೇಕ ಸೇವಕರನ್ನು ನಿಯೋಜಿಸುತ್ತಾರೆ. ಹೀಗೆ ಎಷ್ಟು ಕಾಲಪರ್ಯಂತ ಗುರುಗಳ ಸೇವೆ ಮಾಡಿದರೂ ಸಾಹುಕಾರನಿಗೆ ಅದರ ಫಲವು ಬರುವಂತಿಲ್ಲ. ತತ್ತ್ವಜ್ಞಾನದ ಬೋಧೆಗಾಗಿ ಚಿತ್ತಶುದ್ಧಿಯ ಅವಶ್ಯಕತೆಯು ಇರುತ್ತದೆ. ಗುರುವಿನ ಸೇವೆಯನ್ನು ಯಾರು ಪ್ರಾಮಾಣಿಕವಾಗಿ ಹಾಗೂ ನಿಸ್ವಾರ್ಥದಿಂದ ಮಾಡುವರೋ ಅವರಿಗೆ ಮಾತ್ರ ಚಿತ್ತಶುದ್ಧಿಯಾಗುತ್ತದೆ. ಚಿತ್ತಶುದ್ಧಿಯಾದವರಿಗೆ ಮಾತ್ರ ಶ್ರೀ ಗುರುವು ಪ್ರಸನ್ನನಾಗಿ ತತ್ತ್ವಬೋಧೆಯನ್ನು ಮಾಡುವುದರಿಂದ ಮಾತ್ರವೇ

ಅಂತಹವರಿಗೆ ಮುಕ್ತಿ ಸಿಗುವುದು. ಆದುದರಿಂದ ಸೇವಕರಿಂದ ಗುರುಸೇವೆ ಮಾಡಿಸುವವರಿಗೆ ಈ ಪ್ರಯೋಜನವು ಆಗುವಂತಿಲ್ಲ. ಅಂತಹವರಿಗೆ ಸ್ವಲ್ಪ ಪುಣ್ಯಪ್ರಾಪ್ತಿಯಾಗಬಹುದಷ್ಟೆ.

ಓ.ಸಂ.183 : ದಾಸ್ಯ ಮಾಡುವವನು ಒಂದು ಕ್ಷಣವೂ ಬಿಡುವು ಕೊಡದೇ ದಾಸ್ಯವನ್ನು ಮಾಡಬೇಕು. ಹಾಗೆ ಅವನ ಮನಸ್ಸು ದಾಸ್ಯ ಬಿಟ್ಟು ಬೇರೆ ಕಡೆ ಹೋದಲ್ಲಿ ಅವನು ಕಾಲನ ವಶವಾದಂತೆಯೇ ಆಗುತ್ತದೆ. ದಾಸ್ಯದಲ್ಲಿ ಮೇಲು-ಕೀಳು ಎನ್ನುವುದನ್ನು ನೋಡದೇ ತಾನೇ ಸ್ವತಃ ದಾಸ್ಯವನ್ನು ಮಾಡಬೇಕು.

ವಿವರಣೆ : ದಾಸನು ನಿರಂತರ ತನ್ನ ದಾಸ್ಯದಲ್ಲೇ ಮನಸ್ಸನ್ನು ತೊಡಗಿಸಬೇಕು. ಹಾಗೇನಾದರೂ ಮಾಡದೇ ಒಂದು ಕ್ಷಣವಾದರೂ ಪ್ರಾಪಂಚಿಕ ವಿಷಯ ಸುಖಕ್ಕಾಗಿ ಇಲ್ಲವೇ ತನ್ನ ಕರ್ತವ್ಯದ ನಿಮಿತ್ತವಾಗಿ ಇನ್ನಾವುದೇ ಕಾರಣದಿಂದ ಗುರು ಸೇವೆಯನ್ನು ಅಥವಾ ಗುರುಗಳ ಬಗ್ಗೆ ಚಿಂತೆಯನ್ನು ಬಿಟ್ಟರೆ ಆಗ ಅವನು ಅನಾಯಾಸವಾಗಿ ಕಾಲನ ವಶಕ್ಕೆ ಬಲಿಯಾಗುತ್ತಾನೆ. ಏಕೆಂದರೆ ಸ್ವಾಭಾವಿಕವಾಗಿ ಬರುವ ಪ್ರಾಪಂಚಿಕ ವಿಚಾರಗಳನ್ನು ನಿರೋಧ ಮಾಡುತ್ತಾ ಹೋದಲ್ಲಿ ಅವು ಮನಸ್ಸಿನ ಮೇಲೆ ಬೀರುವ ಪ್ರಭಾವವನ್ನೇ ನಿಲ್ಲಿಸಿಬಿಡುತ್ತವೆ. ಹೀಗಲ್ಲದೇ, ಆಕಸ್ಮಾತ್ ಮನಸ್ಸಿನಲ್ಲಿ ಬರುವ ಪ್ರಾಪಂಚಿಕ ವಿಚಾರಗಳನ್ನು ಉತ್ತೇಜಿಸಿದರೆ ಮನಸ್ಸಿನ ನಿಯಂತ್ರಣವು ತಪ್ಪಿ ಆ ವಿಚಾರಗಳ ಹಿಂದೆ ಹೋಗಲು ಪ್ರಾರಂಭಿಸುವುದು. ಇದರಿಂದ ಅದೇ ವಿಚಾರಗಳು ಮತ್ತೆ-ಮತ್ತೆ ಬರಲು ಪ್ರಾರಂಭಿಸುತ್ತವೆ. ವಾಸನೆಗಳು ಕ್ಷೀಣವಾಗುವ ಬದಲು ದೃಢವಾಗುತ್ತಾ ಬಂದು ಮೂಲ 'ದೇಹೋಽಹಂ' ವಾಸನೆಯು ಬಲವಾಗುತ್ತಾ ಹೋಗುತ್ತದೆ. ಅಂತಹವರು ಕಾಲನ ಜನ್ಮ-ಮರಣಗಳ ವಿಷ ಚಕ್ರದಲ್ಲಿ ಸಿಕ್ಕು ಹೋಗುತ್ತಾರೆ. ಇನ್ನೊಂದು ಮುಖ್ಯ ವಿಷಯವನ್ನು ಕುರಿತು ಈ ಓವೀಯು ಪ್ರಸ್ತಾಪಿಸುತ್ತದೆ. ಗುರುಗಳ ದಾಸ್ಯ ಮಾಡುವಾಗ ಇದು ಮೇಲು-ಕೀಳೆನ್ನದೇ ಎಲ್ಲವನ್ನೂ ಸಮಭಾವದಿಂದಲೂ ಮತ್ತು ಪೂಜ್ಯಭಾವದಿಂದಲೂ ಮಾಡಬೇಕು. ಗುರುಗಳ ಅತ್ಯಂತ ಸನಿಹದಲ್ಲಿ ಇದ್ದುಕೊಂಡು ಕೆಲವರು ಮಾಡುವ ಸೇವೆಯು ಶ್ರೇಷ್ಠ ಮಟ್ಟದ್ದು ಆಗಿರುತ್ತದೆ ಮತ್ತು ಗುರುಗಳಿಂದ ಹೆಚ್ಚು ಮೆಚ್ಚುಗೆ ಪಡೆಯುವಂತಹುದು ಆಗಿರುತ್ತದೆ. ಹಾಗೆಯೇ ಗುರುಗಳ ಬಟ್ಟೆಯನ್ನು ತೊಳೆಯುವುದು, ಗದ್ದೆಗಳಲ್ಲಿ ಕೆಲಸ ಮಾಡುವುದು, ಮುಂತಾದವುಗಳು ಕನಿಷ್ಠ ಮಟ್ಟದವು ಎಂದು ತಪ್ಪಾಗಿ ತಿಳಿಯುತ್ತಾರೆ. ಈ ಎಲ್ಲ ಸೇವೆಯನ್ನು ಭಕ್ತಿಯಿಂದ ಸ್ವತಃ ತಾವೇ ಮಾಡಿದರೆ ಮಾತ್ರ ಅವರ ಅಹಂಕಾರವು ನಾಶವಾಗಿ ಚಿತ್ತಶುದ್ಧಿಯಾಗುವುದು. ಶ್ರೀರಾಮಕೃಷ್ಣರು ಕೊನೆಯ ಕಾಲದಲ್ಲಿ ಗಂಟಲು ಕ್ಯಾನ್ಸರ್‌ನಿಂದ ಬಳಲುತ್ತಿದ್ದು ಆಗಾಗ ಅವರು ರಕ್ತ-ಕೀವು ಸಹಿತ ದುರ್ವಾಸನಾಯುಕ್ತವಾದ ವಾಂತಿಯನ್ನು ಮಾಡಿಕೊಳ್ಳುತ್ತಿದ್ದರು. ಅದನ್ನು ತೆಗೆದು ಸ್ವಚ್ಛ ಮಾಡುವಾಗ ಕೆಲ ಭಕ್ತರು ಹೇಸಿಗೆ ಪಟ್ಟುಕೊಳ್ಳುತ್ತಿದ್ದರು. ಆಗ ಸ್ವಾಮಿ ವಿವೇಕಾನಂದರು ಆ ವಾಂತಿಯನ್ನು ಒಮ್ಮೆ ತಾವೇ ಸ್ವತಃ ಕುಡಿದು ಉಳಿದವರಿಗೆ ಪಾಠ ಕಲಿಸುತ್ತಾರೆ. ಉಪನಿಷತ್ತುಗಳಲ್ಲಿ ಹಾಗೂ ಸಾಧು-ಸಂತರ ಜೀವನದಲ್ಲಿ ಇಂತಹ ಅನೇಕ ಘಟನೆಗಳು ಬರುವುದು ಅತ್ಯಂತ ಸಾಮಾನ್ಯವಾಗಿರುತ್ತದೆ.

**ಓ.ಸಂ.184 :** ಹೀಗೆ ಸದ್ಗುರುವಿನ ಸೇವೆಯನ್ನು ತಮ್ಮ ಶರೀರ, ಮನಸ್ಸು ಹಾಗೂ ವಾಣಿಗಳಿಂದ ಹಗಲು ರಾತ್ರಿಯೆನ್ನದೇ ನಿರಂತರ ತಪ್ಪದೇ ಮಾಡಬೇಕು. ಆಗ ಮಾತ್ರ ಸದ್ಗುರುವಿನ ಪ್ರಸಾದದಿಂದ ಅವನು ಜ್ಞಾನವನ್ನು ಪಡೆದು ಮುಕ್ತನಾಗುವನು.

**ವಿವರಣೆ :** ಹಿಂದಿನ ಓವೀಯಲ್ಲಿ ವಿವರವಾಗಿ ತಿಳಿಸಿದಂತೆ ಸದ್ಗುರುವಿನ ಸೇವೆಯನ್ನು ನಿರಂತರವಾಗಿ ಮಾಡುತ್ತಿರಬೇಕು. ಕಸ ಹೊಡೆಯುವುದು, ಗಾಳಿ ಹಾಕುವುದು, ಬಟ್ಟೆಗಳನ್ನು ತೊಳೆಯುವುದು, ಮುಂತಾದ ಶಾರೀರಿಕ ಸೇವೆಗಳನ್ನು ಮಾಡಬೇಕು. ಶ್ರೀ ಗುರುಗಳು ನಿತ್ಯವೂ ಹೇಳುವ ಬೋಧೆಯನ್ನು ತಪ್ಪದೇ ಆಸಕ್ತಿಯಿಂದ ಕೇಳುವುದು, ಸಂಶಯವಿದ್ದಲ್ಲಿ ಗುರುಗಳೊಡನೆ ಚರ್ಚಿಸಿ ಬಗೆ ಹರಿಸಿಕೊಳ್ಳುವುದು, ಹೀಗೆ ಅರ್ಥವಾಗಿರುವ ತತ್ತ್ವವನ್ನು ನಿರಂತರ ಮನನ ಮಾಡುವುದು, ಶಿಷ್ಯರಲ್ಲಿಯೇ ಈ ವಿಷಯಗಳನ್ನು ಚರ್ಚಿಸುವುದು, ಹೀಗೆ ಮಾನಸಿಕವಾಗಿ ಗುರುಗಳ ಆರೋಗ್ಯದ ಬಗ್ಗೆ ಮತ್ತು ಅವರ ಉಪದೇಶದ ಬಗ್ಗೆ ನಿರಂತರ ಚಿಂತಿಸುತ್ತಿರಬೇಕು. ಹಾಗೆಯೇ ವಾಣಿಯಿಂದ ಗುರುಗಳನ್ನೇ ಇತರರಲ್ಲಿ ಹೊಗಳುವುದು, ಅವರ ಬಗ್ಗೆಯೇ ಸ್ತೋತ್ರಗಳನ್ನು ಹಾಗೂ ಭಜನೆಗಳನ್ನು ಮಾಡುವುದು ಹೀಗೆ ವಾಣಿಯಿಂದಲೂ ಸೇವೆಯನ್ನು ಸಲ್ಲಿಸಬೇಕು. ಹೀಗೆ ಸೇವೆಯನ್ನು ನಿರಂತರ ಸಲ್ಲಿಸಿದಲ್ಲಿ ಶಿಷ್ಯನಿಗೆ ಚಿತ್ತಶುದ್ಧಿಯಾಗಿ ಗುರುಪ್ರಸಾದದಿಂದ ಅಪರೋಕ್ಷ ಜ್ಞಾನವು ಲಭಿಸಿ ಈ ಜನ್ಮದಲ್ಲಿ ಜೀವನ್ಮುಕ್ತಿಯಾಗುವುದು.

**ಓ.ಸಂ.185 :** ದೇವನನ್ನು ಸಮುದ್ರವೆಂದೂ, ಅದರಲ್ಲಿರುವ ನೀರಿನ ಗುಳ್ಳೆಗಳು (ಬುದ್ಬುದ) ತಾನೆಂದು ನಿರಂತರ ಭಾವಿಸಬೇಕು. ಇದರಿಂದ ತಾನು ದೇವನಿಗಿಂತ ಭಿನ್ನನಲ್ಲವೆಂಬ ( ಐಕ್ಯ ) ಭಾವವು ತನ್ನ ಬಹು ಮುಖದ ದಾಸ್ಯದಲ್ಲಿ ನಿರಂತರ ಉಳಿಯುವುದು. ಹೀಗೆ ಮಾಡಿದರೆ ಅದು ಜ್ಞಾನರೂಪವೇ ಆಗಿಬಿಡುತ್ತದೆ.

**ವಿವರಣೆ :** ತಾನು ಶರೀರ–ವಾಣಿ–ಮನಸ್ಸುಗಳಿಂದ ನಿರಂತರ ಗುರುಸೇವೆಯನ್ನು ಮಾಡುವಾಗ ತನಗೂ ಹಾಗೂ ಸದ್ಗುರುವಿಗೂ ಇರಬೇಕಾದ ಸಂಬಂಧವನ್ನು ಹೇಗೆ ಭಾವಿಸಬೇಕು ಎನ್ನುವುದನ್ನು ಈ ಓವೀಯು ಹೇಳುತ್ತದೆ. ತನ್ನ ಸದ್ಗುರುವನ್ನು ಸಾಕ್ಷಾತ್ ಪರಮಾತ್ಮನೆಂದು ತಿಳಿದು ಅವನನ್ನು ಅನಂತ ಸಮುದ್ರವೆಂದೂ, ತಾನು ಅದರಲ್ಲಿರುವ ಒಂದು ಸಣ್ಣ ಗುಳ್ಳೆಯೆಂದೂ ಭಾವಿಸಬೇಕು. ನೀರಿನ ಗುಳ್ಳೆಯಲ್ಲಿ ತನ್ನದೇ ಆದ ಯಾವುದೇ ವಿಶೇಷತೆ ಇಲ್ಲದೇ ಅದು ನೀರಿನಿಂದಲೇ ಉದ್ಭವಿಸಿ ಕೊನೆಗೆ ಅದರಲ್ಲಿಯೇ ನಾಶಹೊಂದುವುದು. ಅದು ಮೊದಲು ಕಂಡಾಗಲೂ ಹಾಗೂ ನಾಶವಾದ ಮೇಲೂ ನೀರಿನ ಸ್ವರೂಪವೇ ಆಗಿರುತ್ತದೆ. ಆದ್ದರಿಂದ ತಾನು ಯಾವಾಗಲೂ ಪರಮಾತ್ಮನ ಸ್ವರೂಪವೇ ಆಗಿರುತ್ತಾನೆ. ಹೀಗೆ ದಾಸ್ಯದ ವೇಳೆಯಲ್ಲೂ ತಪ್ಪದೇ ಐಕ್ಯ ಭಾವನೆಯಿಂದಲೇ ದಾಸ್ಯವನ್ನು ಮಾಡಬೇಕು. ಈ ರೀತಿ ದಾಸ್ಯ ಭಕ್ತಿಯಿಂದ ಜ್ಞಾನಮಾರ್ಗದಲ್ಲಿ ಪಡೆಯ ಬಹುದಾದ ಗುರಿಯನ್ನೇ ( ಐಕ್ಯ) ಈ ಭಕ್ತಿ ಪ್ರಕಾರದಿಂದಲೂ ಮುಟ್ಟಬಹುದು.

ಓ.ಸಂ.186 : ಈ ರೀತಿಯ ದಾಸ್ಯ ಭಕ್ತಿಯಿಂದಲೇ ಮಾರುತಿಯು ಭವ ಸಮುದ್ರವನ್ನು (ಸಂಸಾರ ದುಃಖಸಾಗರವನ್ನು) ದಾಟಿದನೆಂದು ಪುರಾಣದಲ್ಲಿ ಉಲ್ಲೇಖವಿದೆ. ಶ್ರೀರಾಮನು ಮಾರುತಿಯೆಂಬ ದಾಸನ ದಾಸನಾಗಿಬಿಟ್ಟನು.

ವಿವರಣೆ : ಓವೀ ಸಂ.148 ರಿಂದ ಪ್ರಾರಂಭವಾದ ಈ ದಾಸ್ಯಭಕ್ತಿಯು ಈ ಓವೀಗೆ (39 ಓವೀಗಳು) ಕೊನೆಗೊಳ್ಳುತ್ತದೆ. ಈ ಕೊನೆಯ ಓವೀಯಲ್ಲಿ ಮಾರುತಿಯು ಶ್ರೀ ರಾಮನ ದಾಸ್ಯಭಕ್ತಿಯನ್ನು ಮಾಡಿ ಮುಕ್ತಿ ಪಡೆದ ಬಗೆಯನ್ನು ಶ್ರೀ ವ್ಯಾಸರ ಪುರಾಣಗಳಲ್ಲಿ ಉಲ್ಲೇಖವಾಗಿರುವ ಸಂಗತಿಯ ದೃಷ್ಟಾಂತವನ್ನು ಕೊಡಲಾಗಿದೆ. ಹನುಮಂತನು ಶ್ರೀರಾಮನನ್ನು ಕಿಷ್ಕಿಂದೆಯಲ್ಲಿ ಮೊಟ್ಟಮೊದಲು ನೋಡಿದ ಕ್ಷಣದಿಂದಲೂ ಶ್ರೀರಾಮನ ದಾಸನಾದವನು ಕೊನೆಯ ಕ್ಷಣದವರೆಗೂ ದಾಸನಾಗಿಯೇ ಇರುತ್ತಾನೆ. ಮಾರುತಿಯು ರಾಮಾಯಣದಲ್ಲಿ ಸಮುದ್ರ ಲಂಘನವನ್ನು ಮಾಡಿ ಮಾತೆ ಸೀತೆಯನ್ನು ಅನ್ವೇಷಣೆ ಮಾಡುವುದು ಹಾಗೂ ಸಂಜೀವಿನೀ ಪರ್ವತವನ್ನು ಹಿಮಾಲಯದಿಂದ ಲಂಕಾಕ್ಕೆ ಹೊತ್ತು ತಂದು ಶ್ರೀರಾಮ-ಲಕ್ಷ್ಮಣರ ರಕ್ಷಣೆ ಮಾಡುವುದು ಇತ್ಯಾದಿ ಪ್ರಕರಣಗಳು ತುಂಬಿರುವುದು ತಿಳಿದು ಬರುತ್ತದೆ. ಶ್ರೀರಾಮನು ಈ ದಾಸ್ಯಭಕ್ತಿಗೆ ಒಲಿದು ಮಾರುತಿಯನ್ನು ತನ್ನ ಸನಿಹದಲ್ಲೇ ಇರಲು ಒಪ್ಪಿಕೊಳ್ಳುತ್ತಾನೆ. ಶ್ರೀರಾಮನು ಮಾರುತಿಗೆ ಬ್ರಹ್ಮಾತ್ಮೈಕ್ಯ ಜ್ಞಾನವನ್ನೂ ನೀಡಿ ಅವನಿಗೆ ಜೀವನ್ಮುಕ್ತಿಯನ್ನು ನೀಡಿದ್ದಾನೆ. ಮಾರುತಿಯು ಸದಾ ಶ್ರೀರಾಮನ ಹೃದಯಕಮಲದಲ್ಲೇ ವಾಸಿಸುವಂತೆ ಮಾಡಿದ್ದಾನೆ. ಶ್ರೀರಾಮನು ಮಾರುತಿಯನ್ನು 'ಮಾರುತಿಯೆಂಬ ದಾಸನ ದಾಸನಾಗಿದ್ದೇನೆಂದು' ಅವನ ಉಪಕಾರವನ್ನು ಸ್ಮರಣೆ ಮಾಡುತ್ತಾನೆ.

ಓ.ಸಂ.187 : ಈಗ 'ಸಖ್ಯಭಕ್ತಿ' ಪ್ರಾಕಾರವನ್ನು ವಿವೇಚಿಸಲಾಗುವುದು. ಯಾರನ್ನಾದರೂ ತನ್ನ ಸಖ್ಯನನ್ನಾಗಿ ಮಾಡಿಕೊಳ್ಳಬೇಕೆನಿಸಿದರೆ ಆಗ ಮೊದಲು ವಿವೇಕೀಪುರುಷನು ಅವನನ್ನು ಪರೀಕ್ಷಿಸಿ ನೋಡಿ ಸಂಪೂರ್ಣವಾಗಿ ಅವನ ಬಗ್ಗೆ ತಿಳಿದುಕೊಳ್ಳಬೇಕು.

ವಿವರಣೆ : ಈಗ 'ಸಖ್ಯಭಕ್ತಿ'ಯೆಂಬ ಎಂಟನೆಯ ಭಕ್ತಿ ಪ್ರಕಾರದ ಬಗ್ಗೆ ವಿವೇಚಿಸಲು ಪ್ರಾರಂಭವಾಗಿದ್ದು ಈ ಓವೀಯು ಅದರ ಮೊದಲನೆಯ ಓವೀಯಾಗಿರುತ್ತದೆ. ಸಖ್ಯವೆಂದರೆ ಗೆಳೆಯ, ಮಿತ್ರ ಅಥವಾ ಸ್ನೇಹಿತ ಎಂದು ಅರ್ಥವಾಗುತ್ತದೆ. 'ಸಖ್ಯಭಕ್ತಿ' ಯ ಬಗ್ಗೆ ತಿಳಿದುಕೊಳ್ಳುವ ಮೊದಲು ಯಾರನ್ನು ಸಖ್ಯ ಮಾಡಬೇಕು ಎಂಬ ಸಾಮಾನ್ಯ ಲೌಕಿಕ ಜ್ಞಾನವಿರಬೇಕು ಎಂದು ತಿಳಿಸಲು ಈ ಓವೀ ಹಾಗೂ ಮುಂದಿನ ಕೆಲವು ಓವೀಗಳು ಬರೆಯಲ್ಪಟ್ಟಿವೆ. ವಿವೇಕೀಪುರುಷರಿಗೆ ಯಾರನ್ನು ಸಖ್ಯ ಮಾಡಿಕೊಳ್ಳಬೇಕೆಂಬ ಅಭಿಲಾಷೆಯಿದೆಯೋ ಅವರನ್ನು ಮೊದಲು ಸರಿಯಾಗಿ ಪರೀಕ್ಷಿಸಿ ನಂತರವೇ ಅವರ ಸಖ್ಯವನ್ನು ಮಾಡಬೇಕು. ಹಾಗೆಯೇ ದುಡುಕಿನಿಂದ ಪರಿಕ್ಷಿಸಿ ನೋಡದೇ ಎಂದೂ ಯಾರನ್ನೂ ತನ್ನ ಗೆಳೆಯನನ್ನಾಗಿ ಮಾಡಿಕೊಳ್ಳಬಾರದು. ಹಾಗೇನಾದರೂ ಅವಸರದಿಂದ ಬೇರೆ ಯಾರನ್ನೋ ಮಿತ್ರನನ್ನಾಗಿ ಒಪ್ಪಿಕೊಂಡು ವ್ಯವಹರಿಸಿದರೆ ಆಗ ಹೇಗೆ ಪಶ್ಚಾತ್ತಾಪವನ್ನು ಪಡಬೇಕಾಗಬಹುದು ಎಂದು ಮುಂದಿನ ಕೆಲವು ಓವೀಗಳಲ್ಲಿ ತಿಳಿಸಲಾಗಿದೆ.

**ಓ.ಸಂ.188 :** ಕಳ್ಳನೆಂದು ಪರೀಕ್ಷಿಸಿ ತಿಳಿಯದೇ ಕಳ್ಳನ ಜೊತೆಗೆ ಸ್ನೇಹವನ್ನು ಬೆಳೆಸಿದರೆ ಅದರಿಂದ ಸರಕಾರದಿಂದ ಬಂಧನವಾಗುವುದು ನಿಶ್ಚಿತ.

**ವಿವರಣೆ :** ಇನ್ನು ಮೇಲೆ ಯಾರನ್ನಾದರೂ ಪರೀಕ್ಷಿಸದೇ ಸಖ್ಯನನ್ನಾಗಿ ಮಾಡಿಕೊಂಡರೆ ಅದರ ದುಷ್ಪರಿಣಾಮವು ಕೆಟ್ಟದ್ದಾಗುತ್ತದೆ ಎಂದು ತಿಳಿಸಲು ಅನೇಕ ಉದಾಹರಣೆಗಳನ್ನು ಕೊಟ್ಟು ಹಾಗೆ ಮಾಡಬಾರದೆಂದು ತಿಳಿಸಲಾಗಿದೆ. ಈ ಮೊದಲನೆಯ ಉದಾಹರಣೆಯಲ್ಲಿ ಕಳ್ಳನನ್ನು ತೆಗೆದುಕೊಂಡಿದೆ. ಸ್ನೇಹಿತರೊಬ್ಬರನ್ನು ಮಾಡಿಕೊಳ್ಳೋಣವೆಂಬ ಸಜ್ಜನನು ಸದುದ್ದೇಶದಿಂದ ಪಕ್ಕದಲ್ಲೇ ಇರುವ ಮನುಷ್ಯನ ( ಕಳ್ಳನೊಬ್ಬನ ) ಸ್ವಭಾವವು ಏನೆಂದು ಪರೀಕ್ಷಿಸದೇ ಅವನ ಸ್ನೇಹವನ್ನು ಬಯಸಿದರೆ ಮುಂದೆ ಅನಾಹುತವು ಸಂಭವಿಸುವುದು ನಿಶ್ಚಿತ. ಈ ಹೊಸ ಸ್ನೇಹಿತನಿಗೆ ( ಕಳ್ಳನಿಗೆ ) ತನ್ನ ಕಳ್ಳತನದ ವೃತ್ತಿಗೋಸ್ಕರ ಸರ್ಕಾರದವರೇ ಅವನನ್ನು ಸಂದರ್ಭ ಬಂದಾಗ ಜೈಲಿಗೆ ಕಳಿಸುವುದು ನಿಶ್ಚಿತವಾಗಿರುತ್ತದೆ. ಈ ಸಂದರ್ಭದಲ್ಲಿ ಈ ಸಜ್ಜನನೂ ಗುಮಾನಿಯ ಮೇಲೆ ಜೈಲಿಗೆ ಹೋಗುವ ಸಂದರ್ಭವು ಬರುತ್ತದೆ. ಆದುದರಿಂದ ಅವರು ಯಾರೆಂದು ತಿಳಿಯುವ ಮೊದಲೇ ದುಷ್ಟರ ಸಹವಾಸವನ್ನು ಮಾಡಬಾರದು.

**ಓ.ಸಂ.189 :** ಹಾಗೆಯೇ ಜೂಜುಗಾರನೊಡನೆ ತಿಳಿಯದೇ ಸಖ್ಯವನ್ನು ಬೆಳೆಸಿದರೆ ದಾರಿದ್ರ್ಯವು ಪ್ರಾಪ್ತವಾಗುವುದು. ತಿಳಿಯದೇ ಯಾವುದೇ ಸೂಳೆಯ ಸಖ್ಯ ಮಾಡಿದಲ್ಲಿ ಆಗ ತನ್ನ ಧನ–ಮಾನ–ಶಕ್ತಿಗಳು ವ್ಯಯವಾಗುವುವು.

**ವಿವರಣೆ :** ಈ ಓವೀಯಲ್ಲಿ ಜೂಜುಗಾರನ ಹಾಗೂ ವೇಶ್ಯೆಯ ಎರಡು ಉದಾಹರಣೆಗಳನ್ನು ಕೊಡಲಾಗಿದೆ. ನಾವು ಪರೀಕ್ಷಿಸದೇ ಜೂಜುಗಾರನೊಬ್ಬನೊಡನೆ ಗೆಳೆತನವನ್ನು ಮಾಡಿಕೊಂಡರೆ ಆಗ ನಿಧಾನವಾಗಿಯಾದರೂ ಈ ಸಜ್ಜನನನ್ನೂ ಅವನು ಜೂಜುಗಾರನನ್ನಾಗಿ ಮಾಡುತ್ತಾನೆ. ಅವನಿಗೆ ಇಸ್ಪೇಟಿನ ಅಥವಾ ಕುದುರೆ ಓಟದ ಕೆಟ್ಟ ಅಭ್ಯಾಸವು ಬೆಳೆದು ತನ್ನ ಸಂಪತ್ತನ್ನು ಕಳೆದುಕೊಂಡು ದರಿದ್ರನಾಗುತ್ತಾನೆ. ಹಾಗೆಯೇ ಆದರವಾಗಿ ಹಾಗೂ ಉದಾರವಾಗಿ ಇರುವ ಈ ಸಜ್ಜನನು ಆಕಸ್ಮಾತ್ ಯಾರೆಂದು ಪರೀಕ್ಷಿಸದೇ ಹೆಂಗಸೊಬ್ಬಳ ಸ್ನೇಹವನ್ನು ಮಾಡಿಕೊಂಡಲ್ಲಿ ಮತ್ತು ಅವಳು ವೇಶ್ಯಾ ವೃತ್ತಿಯನ್ನು ಮಾಡುತ್ತಿದ್ದುದು ಇವನಿಗೆ ತಿಳಿಯದೇ ಇದ್ದಲ್ಲಿ ಕೊನೆಗೆ ಇವನೂ ಅವಳ ಬಲೆಗೆ ಸುಲಭವಾಗಿಯೇ ಬೀಳುವನು. ಇದರಿಂದ ತನ್ನ ಧನವನ್ನು ಮಾತ್ರವಲ್ಲದೇ ಸಮಾಜದಲ್ಲಿ ತನ್ನ ಮಾನವನ್ನೂ ಕಳೆದುಕೊಂಡು ಕೊನೆಗೆ ಶಕ್ತಿಹೀನನಾಗುವುದರಲ್ಲಿ ಸಂದೇಹವಿಲ್ಲ.

**ಓ.ಸಂ.190 :** ಯಾವುದೇ ಒಂದು ವ್ಯಸನವಿರುವ ವ್ಯಸನಿಯೊಬ್ಬನ ಸ್ನೇಹವನ್ನು ಪರೀಕ್ಷಿಸದೇ ಮಾಡಿಕೊಂಡಲ್ಲಿ ಅವನ ವ್ಯಸನವು ತನಗೂ ಬರಬಹುದು. ಒಂದು ವೇಳೆ ತನಗೆ ಈ ವ್ಯಸನವು ಗಂಟುಬೀಳದಿದ್ದರೂ ಕೂಡ ಒಬ್ಬ ವ್ಯಸನಿಯೆಂದೇ ಗುರುತಿಸಲ್ಪಡುವುದರಿಂದ ಕೆಟ್ಟ ಹೆಸರನ್ನು ಪಡೆಯಬೇಕಾಗುತ್ತದೆ.

**ವಿವರಣೆ :** ಇಲ್ಲಿ 'ವ್ಯಸನ'ವೆಂದರೆ ಕೆಟ್ಟ ಚಟ. ಯಾವುದೇ ಕೆಟ್ಟ ಚಟವಿರುವವನು ವ್ಯಸನಿಯಾಗುತ್ತಾನೆ. ಉದಾಹರಣೆಗೆ ಕುಡಿಯುವುದು, ಜೂಜಾಡುವುದು, ಧೂಮಪಾನ ಮಾಡುವುದು ಹಾಗೂ ಆಗಾಗ ಚಲನಚಿತ್ರ ನೋಡುವ ಮುಂತಾದ ಅನೇಕ ಕೆಟ್ಟಚಟಗಳಿವೆ. ಅವುಗಳಲ್ಲಿ ಯಾವುದಾದರೂ ಒಂದು ಚಟವಿರುವ ವ್ಯಕ್ತಿಯನ್ನು ವ್ಯಸನಿಯೆಂದು ಕರೆಯಬಹುದು. ಹೀಗೆ ಒಬ್ಬ ಮನುಷ್ಯನ ಗೆಳೆತನವನ್ನು ಮಾಡುವಾಗ ಪರೀಕ್ಷಿಸದೇ ಒಬ್ಬ ವ್ಯಸನಿಯನ್ನು ಗೆಳೆಯನನ್ನಾಗಿ ಮಾಡಿಕೊಂಡರೆ ಆಗ ಆಗುವ ದುಷ್ಪರಿಣಾಮಗಳನ್ನು ಈ ಓವೀಯು ತಿಳಿಸುತ್ತದೆ. ಇದರಿಂದ ಈ ಸಜ್ಜನನಿಗೂ ತನಗೇ ತಿಳಿಯದೇ ಗೆಳೆಯನ ಚಟವು ಅವನಿಗೆ ಬರಬಹುದು. ಇಲ್ಲವೇ ಹಾಗೆ ಒಂದು ವೇಳೆ ಚಟಕ್ಕೆ ಬಲಿಯಾಗದಿದ್ದರೂ ಸಮಾಜವು ಇವನನ್ನೂ ವ್ಯಸನಿಯಂದೇ ಗುರುತಿಸುತ್ತದೆ. ಹೀಗಾಗಿ ಅಪರಾಧವನ್ನು ಹೊತ್ತು ತನ್ನ ಮಾನಹಾನಿಯಾಗುವುದೂ ನಿಶ್ಚಿತವಾಗಿರುತ್ತದೆ.

**ಓ.ಸಂ.191 :** ಒಂದು ವೇಳೆ ಪರೀಕ್ಷಿಸದೇ ವಿಶ್ವಾಸಘಾತಮಾಡುವ ವ್ಯಕ್ತಿಯೊಡನೆ ಸ್ನೇಹವನ್ನು ಬೆಳೆಸಿದಲ್ಲಿ ಅದು ತನಗೆ ಪ್ರಾಣ ಕಳೆದುಕೊಳ್ಳುವ ಪ್ರಸಂಗವನ್ನು ತರಬಹುದು. ಹಾಗೆಯೇ ಒಂದು ವೇಳೆ ತಿಳಿಯದೇ ಮೂರ್ಖನ ಸಹವಾಸವನ್ನು ಮಾಡಿದರೆ ತಾನೂ ಮೂರ್ಖನಾಗಬಹುದು.

**ವಿವರಣೆ :** ಈ ಓವೀಯಲ್ಲೂ ಪರೀಕ್ಷಿಸದೇ ಸ್ನೇಹ ಬೆಳೆಸಿದಲ್ಲಿ ಏನೆಲ್ಲಾ ದುಷ್ಪರಿಣಾಮ ಉಂಟಾಗುತ್ತದೆ ಎಂದು ತಿಳಿಸಲು ಮತ್ತೂ ಎರಡು ಉದಾಹರಣೆಗಳನ್ನು ತಿಳಿಸಲಾಗಿದೆ. ಮೊದಲನೆಯದರಲ್ಲಿ ಗೊತ್ತಿರದೇ ವಿಶ್ವಾಸಘಾತಿಯ ಸ್ನೇಹವನ್ನು ಬೆಳೆಸುವುದೇ ಆಗಿರುತ್ತದೆ. 'ವಿಶ್ವಾಸಘಾತಿ' ಯೆಂದರೆ ನಂಬಿಕೆಗೆ ದ್ರೋಹ ಬಗೆಯುವವನು. ಸಾಲಕೊಟ್ಟವರಿಗೆ ಸಾಲವನ್ನು ಒಂದು ವಾರದಲ್ಲಿ ಅಥವಾ ಒಂದು ತಿಂಗಳಲ್ಲಿ ಅಥವಾ ಯಾವುದೇ ನಿಗದಿಯಾದ ಅವಧಿಯಲ್ಲಿ ಸಾಲವನ್ನು ವಾಪಸ್ಸು ಮಾಡುತ್ತೇನೆ ಎಂಬ ಬಗ್ಗೆ ಇಲ್ಲವೇ ಮನೆಯ ಯಜಮಾನನಿಗೆ ಪ್ರತಿ ತಿಂಗಳೂ ಬಾಡಿಗೆಯನ್ನು ತಪ್ಪದೇ ಕೊಡುತ್ತೇನೆ ಎಂಬ ಬಗ್ಗೆ ಕೊಟ್ಟ ಆಶ್ವಾಸನೆಯನ್ನು ಈಡೇರಿಸದೇ ಅವರಿಗೆ ಮೋಸ ಮಾಡುತ್ತಿರುವವನ ಬಗ್ಗೆ ತಿಳಿದುಕೊಳ್ಳದೇ ಅಂಥವನ ಗೆಳೆತನವನ್ನು ಮಾಡಿದರೆ ಈ ಸಜ್ಜನನನ್ನೂ ಕೂಡ ಜನರು ನಂಬದೇ ವಿಶ್ವಾಸದ್ರೋಹಿ ಎಂದು ಕರೆಯುವರು. ಹಾಗೆಯೇ ತಿಳಿಯದೇ ಮೂರ್ಖನ ಸ್ನೇಹ ಮಾಡಿದಲ್ಲಿ ಅವನು ಮಾಡುವ ಮೂರ್ಖ ಕೆಲಸಗಳಲ್ಲಿ ಮೂರ್ಖನೆನಿಸಿಕೊಳ್ಳಬೇಕಾಗುವುದು. ಅವನ ಸಜ್ಜನ ಮಿತ್ರನೂ ಅವನ ಜೊತೆಗೆ ಕೈ ಜೋಡಿಸಲೇಬೇಕಾಗುವುದು. ಆಗ ಇವನೂ ಕೂಡ ಅವನಂತೆ ಮೂರ್ಖನೆನಿಸಿಕೊಳ್ಳಬೇಕಾಗುವುದು.

**ಓ.ಸಂ.192 :** ಹಾಗೆಯೇ ಪಾಖಂಡಿಯೊಡನೆ ಸ್ನೇಹ ಮಾಡಿದರೆ ಅವನು ಪಾಖಂಡಿಯೇ ಆಗುತ್ತಾನೆ. ಹಾಗೆಯೇ ಕೊನೆಯದಾಗಿ ದ್ವಿಜನು ಒಂದು ವೇಳೆ ಅಂತ್ಯಜನ ಸ್ನೇಹವನ್ನು ಬೆಳೆಸಿದರೆ ಆಗ ಅವನಿಗೆ ಮಾತಂಗ ಪದ್ಧತಿಯು ಅಂಟಿಕೊಂಡು ಬಿಡುವುದು.

**ವಿವರಣೆ :** 'ಪಾಖಂಡಿ' ಎಂದರೆ ವೇದಗಳನ್ನು ನಂಬದಿರುವವನು, ನಾಸ್ತಿಕ, ಕುತರ್ಕಮಾಡುವವನು ಎಂದರ್ಥ. ಇಂತಹವನ ಗೆಳೆತನ ಮಾಡಿದರೆ ಸಜ್ಜನನೂ ಕೂಡ ಪಾಖಂಡಿಯೇ ಆಗುತ್ತಾನೆ. ಸಹವಾಸ ದೋಷವನ್ನು

ಸುಲಭವಾಗಿ ಪರಿಹರಿಸಲಾಗುವುದಿಲ್ಲ. ಇನ್ನೊಂದು ಉದಾಹರಣೆಯನ್ನು ಈ ಓವೀಯು ತಿಳಿಸುತ್ತದೆ. ಒಬ್ಬ ದ್ವಿಜನು (ಬ್ರಾಹ್ಮಣನು) ಪಕ್ಕದಲ್ಲೇ ಇರುವ ಅಂತ್ಯಜನ ಸ್ನೇಹವನ್ನು ಮಾಡಿದಾಗ ಆ ಬ್ರಾಹ್ಮಣನಿಗೂ ಕ್ರಮೇಣ ಅಂತ್ಯಜನ (ಮಾತಂಗಿ) ಜೀವನ ಪದ್ಧತಿಯು (ಮಾತಂಗ ಪದ್ಧತಿ) ಬರುವುದು. ಇಲ್ಲಿ ಪಾರಂಪರಿಕವಾಗಿ 'ಅಂತ್ಯಜ' ಅಥವಾ 'ಮಾತಂಗ' ವೆಂಬುದು 'ಮಾದಿಗ' (ಶೂದ್ರ) ಜಾತಿಯನ್ನು ಹೇಳುತ್ತದೆ. ಆದರೆ ಈ ಆಧುನಿಕ ಕಾಲದಲ್ಲಿ ಅದನ್ನು ಸಂಸ್ಕಾರಹೀನನು ಅಥವಾ ಅಸಂಸ್ಕೃತನು ಎಂದು ಅರ್ಥವಾಗುತ್ತದೆ. ಅಂತಹವನ ಸಹವಾಸವನ್ನು ಮಾಡಿದರೆ ಆಗ ಬ್ರಾಹ್ಮಣನೂ ತನ್ನ ಸಂಸ್ಕಾರವನ್ನು ಮರೆತು ಅಂತ್ಯಜನ ಜೀವನ ಪದ್ಧತಿಯನ್ನು ಕ್ರಮೇಣವಾದರೂ ಅಳವಡಿಸಿಕೊಳ್ಳಬೇಕಾಗುತ್ತದೆ. ಇದು ನಿಶ್ಚಿತವಾಗಿರುತ್ತದೆ.

**ಓ.ಸಂ.193 :** ಯಾರೂ ಪರೀಕ್ಷೆ ಮಾಡದೆಯೇ ಯಾರ ಸ್ನೇಹವನ್ನೂ ಮಾಡಿಕೊಳ್ಳಬಾರದು. ಹಾಗೆಯೇ ಪರೀಕ್ಷೆಮಾಡದೇ ಕೊಂಡ ಬಂಗಾರವು ಕೊನೆಯಲ್ಲಿ ಬಣ್ಣವಿಲ್ಲದ ಹಿತ್ತಾಳೆಯೆಂದು ತಿಳಿದುಬರಬಹುದು.

**ವಿವರಣೆ :** ಕೊನೆಯ ದೃಷ್ಟಾಂತವನ್ನು ಈ ಓವೀಯು ತಿಳಿಸುತ್ತದೆ. ಅಕ್ಕಸಾಲಿಗನೊಬ್ಬನು ಮಾರಲಿಕ್ಕೆ ತಂದಿರುವ ಚಿನ್ನವನ್ನು ಪರೀಕ್ಷಿಸದೇ ಒಂದು ವೇಳೆ ಹಾಗೆಯೇ ತೆಗೆದುಕೊಂಡುಬಿಟ್ಟರೆ ಆಗ ಪಶ್ಚಾತ್ತಾಪ ಪಡಬೇಕಾಗುವುದು. ಏಕೆಂದರೆ ನಿಶ್ಚಿತವಾಗಿ ಆ ಚಿನ್ನವು ಹಿತ್ತಾಳೆಯದ್ದಾಗಿರಬಹುದು. ಆದುದರಿಂದ ಈ ಎಲ್ಲ ದೃಷ್ಟಾಂತಗಳು ತಿಳಿಸುವ ಸತ್ಯವೆಂದರೆ ಯಾರನ್ನಾದರೂ ಹೊಸದಾಗಿ ಸ್ನೇಹವನ್ನು ಮಾಡಿಕೊಳ್ಳಬೇಕಾದರೆ ಅವನನ್ನು ಯೋಚಿಸದೇ ಸ್ನೇಹಿತನನ್ನಾಗಿ ಒಪ್ಪಿಕೊಳ್ಳಬಾರದು. ಅವನ ಚಾರಿತ್ರ್ಯವನ್ನು ಅಥವಾ ಸ್ವಭಾವವನ್ನು ಪರೀಕ್ಷೆಮಾಡಿಯೇ ಅವನನ್ನು ಸ್ನೇಹಿತನನ್ನಾಗಿ ಒಪ್ಪಿಕೊಳ್ಳಬೇಕು. ಹೀಗೆ ಅನುಭವದಿಂದ ತಿಳಿಯಬಹುದಾಗಿರುವ ನಿಯಮವನ್ನು ಮುಂದಿನ ಓವೀಯಿಂದ ದೇವರ ವಿಷಯಕ್ಕೂ ಅನ್ವಯಿಸಲಾಗುವುದು.

**ಓ.ಸಂ.194 :** ಹೀಗೆಯೇ ದೇವನ ಸಖ್ಯವನ್ನು ಮಾಡುವುದಿದ್ದಲ್ಲಿ ಮೊದಲು ಅವನ ಬಗ್ಗೆ ಸಕಲವನ್ನೂ ತಿಳಿದುಕೊಳ್ಳಬೇಕು. ನಮ್ಮ ಅಂತಃಕರಣ ವೃತ್ತಿಗೆ ನಿತ್ಯ ಸಾಕ್ಷಿಯಾಗಿರುವವನೊಬ್ಬನೇ ಆ ದೇವನು ಎಂದು ತಿಳಿದುಕೊಳ್ಳಬೇಕು.

**ವಿವರಣೆ :** ಈವರೆಗೆ ತೆಗೆದುಕೊಂಡ ದೃಷ್ಟಾಂತಗಳು ಪರಮಾತ್ಮನ ಸ್ನೇಹವನ್ನು ಬೆಳೆಸುವ ಮುನ್ನ ಅವನ ಬಗ್ಗೆ ಕೂಲಂಕುಷವಾಗಿ ತಿಳಿದುಕೊಳ್ಳಬೇಕು ಎಂದು ತಿಳಿಸುತ್ತವೆ. ಅವನನ್ನು ಎಲ್ಲಿ ಮತ್ತು ಹೇಗೆ ಹುಡುಕುವುದು? ಅವನ ಸ್ವರೂಪವೇನು? ಮುಂತಾದವುಗಳ ಬಗ್ಗೆ ವಿವರವಾಗಿ ತಿಳಿದುಕೊಳ್ಳಬೇಕು. ನಂತರವೇ ಅವನ ಸ್ನೇಹವನ್ನು ಮಾಡುವ ಬಗ್ಗೆ ಚಿಂತಿಸಬೇಕು. ಪರಮಾತ್ಮನನ್ನು ಎಲ್ಲಿ ಮತ್ತು ಹೇಗೆ ಹುಡುಕುವುದು ಎಂಬ ಪ್ರಶ್ನೆಗಳಿಗೂ ಈ ಓವೀಯೇ ಉತ್ತರವನ್ನು ತಿಳಿಸಿದೆ. ಪರಮಾತ್ಮನನ್ನು ಹೊರಗೆಲ್ಲೂ ಹುಡುಕಬೇಕಿಲ್ಲ, ಅವನು ಪ್ರತಿಕ್ಷಣವೂ ಹೊಸದಾಗಿ ಬರುತ್ತಿರುವ ನಮ್ಮ ಅಂತಃಕರಣದ ವೃತ್ತಿಗಳಿಗೆ ನಿತ್ಯ ಸಾಕ್ಷಿಯಾಗಿರುತ್ತಾನೆ ಎಂದು ತಿಳಿದುಕೊಳ್ಳಬೇಕು. ಅವನು ಬೇರೆ ಯಾರೂ ಆಗಿರದೇ ದೇಹ-ಭಾನರಹಿತವಾಗಿರುವ 'ನಾನೇ' ಆಗಿರುತ್ತೇನೆ. ಅಂದರೆ ಅವಸ್ಥೆಗಳಲ್ಲಿ ಸ್ಥೂಲ-ಸೂಕ್ಷ್ಮ-ಕಾರಣ ದೇಹಗಳಿಗೆ ಸೀಮಿತವಾಗಿರುವ 'ನಾನು' ಆಗಿರದೇ ಅವುಗಳಿಗೆ

ಅತೀತವಾಗಿರುವ ಹಾಗೂ ಮೂರೂ ಅವಸ್ಥೆಗಳನ್ನು ತಿಳಿಯಬಲ್ಲ ಯಾವ ತುರೀಯಾವಸ್ಥೆಯಲ್ಲಿರುವ ಸಾಕ್ಷಿಯೋ ಅವನೇ 'ನಾನು' ಆಗಿರುವೆನು.

ಓ.ಸಂ.195 : ಅಲ್ಲದೇ ಯಾವಾಗ ಮನೋವೃತ್ತಿಗಳೇ ಇರುವುದಿಲ್ಲವೋ ಆಗ ಸಾಕ್ಷೀಭಾವವೂ ಇಲ್ಲದೇ ಯಾವುದೇ ಭೇದವಾಗಲೀ-ಅಭೇದವಾಗಲೀ ತೋರದಂತೆ ತಾನೇ-ತಾನಾಗಿ ಪೂರ್ಣರೂಪದಿಂದ ಉಳಿಯುವುದೋ ಅವನೇ ಪರಮಾತ್ಮನು.

ವಿವರಣೆ: 'ಆತ್ಮನು ಸದಾ ಸಾಕ್ಷೀಭಾವದಿಂದಿರಲೇಬೇಕು, ಏಕೆಂದರೆ ಅವನು ಮೂರು ಅವಸ್ಥೆಗಳಿಗೆ ಕಟ್ಟುಬಿದ್ದು ನಿತ್ಯ ಸಾಕ್ಷಿಯಾಗಿರುತ್ತಾನೆ' ಎಂಬ ಭಾವನೆಯೇ ತಪ್ಪು ತಿಳುವಳಿಕೆಯಾಗಿದೆ. ಇದನ್ನು ಹೇಳಿರುವುದು ಅವಸ್ಥಾತ್ರಯ ದೃಷ್ಟಿಯಿಂದ ಮತ್ತು 'ಜೀವ'ನ ವ್ಯವಹಾರ ದೃಷ್ಟಿಯಿಂದ. ಏಕೆಂದರೆ ಜೀವನಿಗೆ ಜ್ಞಾನದಿಂದ ಅಜ್ಞಾನವು ನಿವಾರಣೆಯಾಗುವ ತನಕ ಈ ಮೂರು ಅವಸ್ಥೆಗಳು ನಿವಾರಣೆಯಾಗುವುದಿಲ್ಲ. ಹಾಗೆ ಈ ಅವಸ್ಥೆಗಳು ನಿವಾರಣೆ ಆಗದಿದ್ದರೆ ಆತ್ಮನ ಸಾಕ್ಷಿತ್ವವೂ ನಿವಾರಣೆಯಾಗಲಾರದು. ವೇದಾಂತ ಜ್ಞಾನದಿಂದ 'ಜೀವ'ನ ಅಜ್ಞಾನವು ನಾಶವಾಗಿ ಆತ್ಮನು ಅವಸ್ಥಾತ್ರಯತೀತನಾಗಿ ತುರ್ಯಾವಸ್ಥೆಯಲ್ಲಿ ಬ್ರಹ್ಮಸ್ವರೂಪದಿಂದ ಪ್ರಕಟನಾಗುತ್ತಾನೆ. ಇದರಿಂದ ಈ ನಾಮ-ರೂಪಗಳು ಮಿಥ್ಯೆ ಮತ್ತು ಅವುಗಳ ಅದಿಷ್ಠಾನನಾಗಿರುವ ಹಾಗೂ ಅದ್ವಯನಾಗಿರುವ ನಾನೊಬ್ಬನೇ ಸತ್ಯವೆಂದು ತಿಳಿದು ಬರುವುದು. ಆದರೆ ಈ ಜ್ಞಾನವಿಲ್ಲದ ಸಾಮಾನ್ಯರಿಗೂ ವೃತ್ತಿರಹಿತಾವಸ್ಥೆಯಾಗಿರುವ ಸುಷುಪ್ತಿ-ಸಮಾಧಿಗಳಲ್ಲಿ ಶುದ್ಧ-ಆತ್ಮಾನುಭವವು ದೊರಕುತ್ತದೆ. ಸುಷುಪ್ತಿಯಲ್ಲಿ ಪ್ರತಿನಿತ್ಯವೂ ಅಪ್ರಯತ್ನವಾಗಿ ಈ ಆತ್ಮಾನುಭವವು ನಮಗಾದರೂ ಆತ್ಮಜ್ಞಾನವಿಲ್ಲದಿರುವುದರಿಂದ ಅದು ಆನಂದವೂ, ಪರಿಪೂರ್ಣವೂ ಹಾಗೂ ಅದ್ವಯವೂ ಆಗಿರುವ ಆತ್ಮಾನುಭವವೆಂದು ನಮಗೆ ತಿಳಿದಿರುವುದಿಲ್ಲ. ಜಾಗೃತ-ಸ್ವಪ್ನಗಳಲ್ಲಿ ಕಾಣುವ ಭೇದ-ಭಾನವು ಮತ್ತು ಸುಷುಪ್ತಿಯಲ್ಲಿ ಈ ಭೇದವಿಲ್ಲದಿರುವ ಶೂನ್ಯವೂ (ಅಭೇದ ಭಾನ) ತೋರುವುವು ( ಭೇದದ ಹಿನ್ನೆಲೆಯಲ್ಲಿ ಮಾತ್ರ ಅಭೇದ ಭಾನವಿರುವುದು). ಇಲ್ಲಿ ಕೇವಲ ವ್ಯವಹಾರ ದೃಷ್ಟಿಯಿಂದ ಆತ್ಮಾನುಭವದಲ್ಲಿ (ವೃತ್ತಿರಾಹಿತ್ಯಾವಸ್ಥೆಗಳಲ್ಲಿ ) ಈ ಎರಡೂ ( ಭಾನಾಭಾನಗಳು ) ಇಲ್ಲದೇ ಆತ್ಮವು ( ಅಂದರೆ ನಾನು ) ಪರಿಪೂರ್ಣನಾಗಿ ತನಗೆ ತಾನೇ ಉಳಿಯುತ್ತಾನೆ. ಅವನೇ ಪರಮಾತ್ಮನು ಕೂಡ ಆಗಿದ್ದಾನೆ.

ಓ.ಸಂ.196 : ಮನೋವೃತ್ತಿಯು ಇಲ್ಲದಾಗ ಆತ್ಮನೊಬ್ಬನೇ ಉಳಿಯುತ್ತಾನೆ. ಎರಡನೆಯದಾವುದೂ ಉಳಿಯುವುದಿಲ್ಲ. ಅಂದರೆ ಉಳಿದ ಇದೊಂದಕ್ಕೆ ಮಾತ್ರ ಸತ್ತೆ ಇದ್ದು ಅದರಿಂದಲೇ ತೋರುವ ಉಳಿದವುಗಳಿಗೆ ಸತ್ತೆ ಇರುವಂತೆ ಕಾಣುತ್ತದೆ.

ವಿವರಣೆ: ನಮ್ಮ ವಾಸನೆಗಳ ಪರಿಣಾಮವಾಗಿ ಮನೋವೃತ್ತಿಯು ಇದ್ದಾಗಲೇ ಜಗತ್ತು ಇರುವಂತೆ ತೋರುತ್ತದೆ. ಮನಸ್ಸೇ ಅಂದರೆ ಮನೋವೃತ್ತಿಯು ಇಲ್ಲದಾಗ ಯಾವುದೂ ತೋರುವುದಿಲ್ಲ. ಆಗ ಆತ್ಮವೊಂದೇ

ಉಳಿಯುತ್ತದೆ. ಏಕೆಂದರೆ ತೋರಿಕೆಯ ಜಗತ್ತು ಇಲ್ಲದೇ ಇರುವಾಗ ಅದರ ಅಧಿಷ್ಠಾನವು ಅಂದರೆ ಆತ್ಮತತ್ತ್ವವು ತಾನೊಂದೇ ಇರುವುದನ್ನು ಪ್ರಕಾಶಿಸುತ್ತದೆ. ಇದರಿಂದ ಇರುವಿಕೆಯು (ಸತ್ತಾ) ಆತ್ಮನಿಗೆ ಮಾತ್ರ ಇರುವುದೆಂದು ತಿಳಿದು ಬರುತ್ತದೆ. ಅದನ್ನು ಬಿಟ್ಟು ಉಳಿದ ಸಕಲವೂ ತಾತ್ಕಾಲಿಕವಾಗಿ ತೋರುವಾಗ ಆತ್ಮನ ಇರುವಿಕೆಯಿಂದಲೇ ಅವು ತಾತ್ಕಾಲಿಕವಾಗಿ ಇರುವಂತೆ ಕಾಣುತ್ತವೆ. ಅವು ಅಸ್ತಿ-ಭಾತಿ-ಪ್ರಿಯ ಸ್ವರೂಪವಾಗಿ ಕಾಣಲು ಆತ್ಮನ ಸತ್-ಚಿತ್-ಆನಂದ ಸ್ವರೂಪವೇ ಕಾರಣವಾಗಿರುತ್ತದೆ.

**ಓ.ಸಂ.197 :** ಈ ಆತ್ಮವು ಇರುವಿಕೆಯ ಸ್ವರೂಪವೇ ಆಗಿರುತ್ತಾನೆ. ಈ ಆತ್ಮತತ್ತ್ವವನ್ನೇ 'ನಾನೆಂದು' ನಿಶ್ಚಿತವಾಗಿ ತಿಳಿಯಬೇಕು. ನನ್ನನ್ನು ಬಿಟ್ಟರೆ ಬೇರೆ ಇನ್ನೊಂದು ಎರಡನೆಯದು ಇರಲಾರದು.

**ವಿವರಣೆ :** ಮನೋವೃತ್ತಿಗಳು ಇಲ್ಲದಾಗ ಉಳಿಯುವುದೇ ಆತ್ಮತತ್ತ್ವವೆಂಬುದನ್ನು ಹಿಂದಿನ ಓವೀಯು ತಿಳಿಸಿದೆ. ಆದರೆ ಮನೋವೃತ್ತಿಗಳರಾಹಿತ್ಯವನ್ನು ಉಂಟುಮಾಡುವವನು ಹಾಗೂ ಅದನ್ನು ಅನುಭವಿಸುವವನು 'ನಾನೇ' ಆಗಿರುತ್ತೇನೆ. ಅಂದರೆ ಮನೋರಾಹಿತ್ಯದ ಅವಸ್ಥೆಯಲ್ಲಿ ಉಳಿಯುವ 'ನಾನು' ಮತ್ತು ಆತ್ಮತತ್ತ್ವವು ಬೇರೆ-ಬೇರೆಯಾಗಿರದೇ ಒಂದೇ ಆಗಿರುತ್ತದೆ. ಆದರೆ ಈ ನಾನು ಮಾತ್ರ ದೇಹ-ಭಾನ ಹೊಂದಿರುವ 'ಜೀವ'ನಾಗಿರುವುದಿಲ್ಲ. ಮನೋರಾಹಿತ್ಯವಾದಾಗಲೇ ಸಕಲ ಜಗತ್ತಿನ ಸಹಿತ ಜೀವನು ನಾಶವಾಗಿರುತ್ತಾನೆ. ಆದ್ದರಿಂದ ಇಲ್ಲಿ 'ನಾನು' ಎನ್ನುವುದು ಅತೀಂದ್ರಿಯವಾಗಿರುತ್ತದೆ. ಯಾವ ನಾನು ಮೂರೂ ಅವಸ್ಥೆಗಳಿಗೆ ಅತೀತವಾಗಿದ್ದುಕೊಂಡು ಅವುಗಳಿಗೆ ಸಾಕ್ಷಿಯಾಗಿ ನೋಡುತ್ತಿರುತ್ತೇನೋ ಅದೇ ನಾನು ಈಗ ಸಾಕ್ಷಿತ್ವ ಕಳೆದುಕೊಂಡು ಶುದ್ಧ ಆತ್ಮನೇ ಆಗಿರುತ್ತೇನೆ. 'ನಾನು' ಅದ್ವಯನಾಗಿರುತ್ತೇನೆ'. ಏಕೆಂದರೆ ನನ್ನನ್ನು ಬಿಟ್ಟು ಬೇರೆ ಯಾರೂ ಇರಲು ಆಗುವುದಿಲ್ಲ. 'ನಾನು' ಶುದ್ಧವಾದ ಆತ್ಮಸ್ವರೂಪವೇ ಆಗಿರುತ್ತೇನೆ.

**ಓ.ಸಂ.198 :** ಅದ್ವಯನಾದ ತಾನು ಏನೂ ಮಾಡದೆಯೇ ತನಗೆ ತಾನೇ ಸಖ್ಯವು ಸಹಜವಾಗಿಯೇ ಘಟಿಸುತ್ತದೆ. ಈ ಸಖ್ಯವು ಮಾತ್ರ ಅಕೃತ್ರಿಮವಾದದ್ದು, ಅಂದರೆ ನೈಜವಾದದ್ದು. ಅಲ್ಲದೇ ಇದು ನಾಶವಾಗದೇ ನಿತ್ಯವಾಗಿ ಇರುವಂತಹುದು ಆಗಿರುತ್ತದೆ. ಹೀಗೆ ಸಖ್ಯಭಕ್ತಿಯಿಂದ ಜ್ಞಾನನಿಷ್ಠನು ಬ್ರಹ್ಮಾತ್ಮೈಕ್ಯ ಅಪರೋಕ್ಷ ಜ್ಞಾನವನ್ನು ಪಡೆಯುತ್ತಾನೆ.

**ವಿವರಣೆ :** ಮುಂದಿನ ಓವೀಯ ಮೊದಲನೆಯ ಚರಣವನ್ನು ಈ ಓವೀಯಲ್ಲೇ ವಿವರಿಸಲಾಗಿದೆ. ತಾನು ಅದ್ವಯನಾಗಿರುವುದರಿಂದ ಸ್ನೇಹವು ತನಗೆ ತಾನೇ ಘಟಿಸುತ್ತದೆ (ತಾನೊಬ್ಬನೇ ಇರುವುದರಿಂದ). ಹೇಗೆಂದರೆ ಸ್ನೇಹ ಬೆಳೆಸುವ ವ್ಯಕ್ತಿಗೆ ತನ್ನ ಆತ್ಮನೇ ಪರಮಾತ್ಮ ಸ್ವರೂಪವೆಂದು ತಿಳಿಯದಿರುವುದರಿಂದ ಇದನ್ನು ತಿಳಿದುಕೊಳ್ಳುವುದು ಅತ್ಯಂತ ಆವಶ್ಯಕವಾಗಿರುತ್ತದೆ. ಹೀಗೆ ಸತ್ಯವನ್ನು ತಿಳಿದುಕೊಂಡಾಗ ತನ್ನ ಆತ್ಮದ ಜೊತೆ ತಾನು ಹೊಸದಾಗಿ ಸಖ್ಯವನ್ನು ಬೆಳೆಸುವ ಅವಶ್ಯಕತೆಯು ಇರುವುದಿಲ್ಲ. ಏಕೆಂದರೆ ಇದು ಅತ್ಯಂತ ಸಹಜವಾಗಿ ಸದಾ ಘಟಿಸಿಯೇ ಇರುತ್ತದೆ. ತನ್ನ ಆತ್ಮನನ್ನು ತಾನು ಎಂದೂ ಬಿಟ್ಟಿರುವುದು ಸಾಧ್ಯವಿಲ್ಲದ ಮಾತು. ಅಂದರೆ ಇಂತಹ ನೈಜ ಸಖ್ಯವು ಎಂದೂ ನಾಶವಾಗಲಾರದು. ಹೀಗೆ ಕಾಣದ ಪರಮಾತ್ಮನನ್ನು ಕಲ್ಪಿಸಿ ಅವನ ಜೊತೆಗೆ

ಸಖ್ಯಕ್ಕೆ ಪ್ರಯತ್ನಿಸುವುದು ಕೃತ್ರಿಮವಾದ ಸ್ನೇಹವಾಗುತ್ತದೆ. ಅಂತರ್ಮುಖನಾಗಿ ತನ್ನ ಆತ್ಮನನ್ನು ( ತನ್ನ ನೈಜಸ್ವರೂಪವನ್ನೇ ) ತಾನೇ ತಿಳಿದುಕೊಂಡಾಗ ನಿಜವಾದ ಪರಮಾತ್ಮನ ದರ್ಶನವೇ ಆಗಿಬಿಡುತ್ತದೆ. ಈ ಜ್ಞಾನದಿಂದ ಅವನು ಭವಬಂಧನದಿಂದಲೇ ದಾಟಿ ಜೀವನ್ಮುಕ್ತನಾಗಿಬಿಡುತ್ತಾನೆ. ಅಂದರೆ ಇದೇ ಬ್ರಹ್ಮಾತ್ಮೈಕ್ಯ ಅಪರೋಕ್ಷಜ್ಞಾನವು ಆಗಿರುತ್ತದೆ. ಇದರಿಂದ ಜ್ಞಾನನಿಷ್ಠನ ಸಖ್ಯಭಕ್ತಿಯು ಸದ್ಯೋಮುಕ್ತಿಯನ್ನು ಅವನಿಗೆ ತಂದು ಕೊಡುತ್ತದೆ.

**ಓ.ಸಂ.199 :** ಯಾರಿಗೆ ಬ್ರಹ್ಮಾತ್ಮೈಕ್ಯ ಅಪರೋಕ್ಷ ಜ್ಞಾನವು ಪ್ರಾಪ್ತವಾಗುವುದಿಲ್ಲವೋ ಅಂತಹವರು ಪರೋಕ್ಷವಾಗಿ ಸರ್ವಭೂತಗಳಲ್ಲಿ ಪರಮಾತ್ಮನನ್ನು ಕಾಣಲು ಪ್ರಯತ್ನಿಸಬೇಕು.

**ವಿವರಣೆ:** ಈ ಓವೀಯ ಪ್ರಥಮ ಚರಣವನ್ನು ಹಿಂದಿನ ಓವೀಯಲ್ಲೇ ವಿವರಿಸಲಾಗಿದೆ. ಹಿಂದಿನ ಓವೀವರೆಗೆ ಜ್ಞಾನನಿಷ್ಠನು ಸಖ್ಯಭಕ್ತಿಯನ್ನು ಹೇಗೆ ಮಾಡಬೇಕೆಂದು ಹೇಳಲಾಗಿದೆ. ಈ ಓವೀಯಿಂದ ಮುಂದೆ ಜ್ಞಾನನಿಷ್ಠನಾಗಲು ಅಸಮರ್ಥರಾದವರಿಗೆ ಸಖ್ಯಭಕ್ತಿಯನ್ನು ಹೇಗೆ ಮಾಡಬೇಕೆಂದು ಹೇಳಿದೆ. ಯಾರಿಗೆ ಹಿಂದಿನ ಓವೀಯಲ್ಲಿ ಹೇಳಿದಂತೆ ಬ್ರಹ್ಮಾತ್ಮೈಕ್ಯದ ಅಪರೋಕ್ಷ ಜ್ಞಾನವು ಇನ್ನೂ ಆಗಲಿಲ್ಲವೋ ಅಂತಹ ಭಾವುಕರಾದ ಭಕ್ತರು ಮೊಟ್ಟಮೊದಲು ಸಕಲಭೂತಗಳಲ್ಲಿ ( ಸಕಲ ಜೀವಿಗಳಲ್ಲಿ ) ಪರಮಾತ್ಮನಿದ್ದಾನೆಂದು ಕಾಣಬೇಕು. ಸಕಲಜೀವಿಗಳೆಂದರೆ ಚತುರ್ಮುಖ ಬ್ರಹ್ಮನಾದಿಯಾಗಿ ಹಿಡಿದು ಕ್ರಿಮಿ, ಕೀಟ, ಯಕ್ಷ, ಗಂಧರ್ವ, ಕಿನ್ನರ, ಪಶು, ಪಕ್ಷ್ಯಾದಿ, ಮನುಷ್ಯ ಮುಂತಾದ ಎಲ್ಲ ಜೀವಿಗಳಲ್ಲೂ ಸ್ವತಃ ಪರಮಾತ್ಮನೇ ಇರುತ್ತಾನೆಂದು ತಿಳಿಯಬೇಕು. ಹೀಗೆ ಎಲ್ಲದರಲ್ಲೂ ದೇವನನ್ನು ಕಂಡು ಮುಂದೆ ಏನು ಮಾಡಬೇಕೆಂದು ಮುಂದಿನ ಓವೀಯಲ್ಲಿ ತಿಳಿಸಲಾಗಿದೆ.

**ಓ.ಸಂ.200 :** ಸರ್ವಭೂತಗಳಲ್ಲಿ ದೇವನನ್ನು ಕಂಡಮೇಲೆ ಅವುಗಳೊಡನೆ ಸಖ್ಯವನ್ನು ಬೆಳೆಸಬೇಕು. ಇದರ ಪರಿಣಾಮವಾಗಿ ಅವುಗಳನ್ನು ಯಾವುದೇ ರೀತಿಯಲ್ಲಿ ಹಿಂಸಿಸದೇ ಅಥವಾ ದುಃಖಪಡಿಸದೇ ಪ್ರೇಮದಿಂದ ಕಾಣಬೇಕು. ದೇವನ ಸ್ವರೂಪ ಲಕ್ಷಣಗಳಾದ ಕರುಣೆ, ಸಮತ್ವ, ಮುಂತಾದ ಗುಣಗಳನ್ನು ಸ್ವತಃ ರೂಢಿಸಿಕೊಳ್ಳಬೇಕು.

**ವಿವರಣೆ :** ಸಕಲಪ್ರಾಣಿ–ಮನುಷ್ಯರಲ್ಲಿ ದೇವರನ್ನು ಕಂಡಮೇಲೆ ಅವುಗಳೊಡನೆ ಸಖ್ಯವನ್ನು ಬೆಳೆಸಬೇಕು. ಸಾಮಾನ್ಯ ಮನುಷ್ಯನು ತನ್ನ ಆತ್ಮೀಯ ಗೆಳೆಯನ ಜೊತೆಗೆ ಹೇಗೆ ನಡೆದುಕೊಳ್ಳುತ್ತಾನೋ ಹಾಗೆ ಮನುಷ್ಯರಲ್ಲಿ ಆತ್ಮೀಯತೆಯನ್ನು ಬೆಳೆಸಿಕೊಳ್ಳಬೇಕು. ಇದರ ಫಲವಾಗಿ ತಾನು ಇತರರನ್ನು ಯಾವುದೇ ಕಾರಣಕ್ಕಾಗಿ ಕಾಯ–ವಾಚಾ–ಮನಸಾ ಹಿಂಸಿಸಕೂಡದು. ಹಾಗೂ ಯಾರಿಗೂ ದುಃಖವನ್ನುಂಟು ಮಾಡಬಾರದು. ಪರಮಾತ್ಮನ ಬೇರೆ ಲಕ್ಷಣಗಳಾದ ಎಲ್ಲರನ್ನೂ ಸಮಭಾವದಿಂದ ಕಾಣುವುದು, ಕರುಣೆ, ಕ್ಷಮಾಗುಣ ಇತ್ಯಾದಿಗಳನ್ನು ಸಕಲರಲ್ಲಿ ತೋರಿಸುವುದು ಮುಂತಾದ ಸದ್ಗುಣಗಳನ್ನು ಸ್ವತಃ ತನ್ನಲ್ಲಿ ರೂಢಿಸಿಕೊಳ್ಳಬೇಕು. ಮುಖ್ಯವಾಗಿ ಪ್ರಾಣಿಗಳನ್ನು ಸದಾ ರಕ್ಷಣೆ ಮಾಡಬೇಕೇ ವಿನಃ ಅವುಗಳಿಗೆ ಯಾವುದೇ ರೀತಿಯಲ್ಲಿ ಹಿಂಸೆಯನ್ನು ಕೊಡಬಾರದು.

ಅವುಗಳನ್ನು ಕೊಲ್ಲುವುದು, ಅವುಗಳಿಗೆ ಆಹಾರ-ನೀರುಗಳನ್ನು ಕೊಡದಿರುವುದು ಮುಂತಾದವುಗಳನ್ನು ಮಾಡಬಾರದು. ಈ ಸಖ್ಯಭಕ್ತಿಯನ್ನು ಮಾಡುವವರು ಪೂರ್ಣಮಾಂಸಾಹಾರವನ್ನು ತ್ಯಜಿಸಿ ಸಸ್ಯಾಹಾರವನ್ನು ಅಭ್ಯಾಸಮಾಡಿಕೊಂಡರೆ ಉತ್ತಮವು.

**ಓ.ಸಂ.201 :** ದೇವನ ಲಕ್ಷಣಗಳಾದ ಕರುಣೆ ಮುಂತಾದವುಗಳನ್ನು ಅಳವಡಿಸಿಕೊಂಡರೆ ಆಗ ಭಕ್ತನೇ ದೇವರಾಗುವನು. ಸಹಜವಾಗಿ ಭಕ್ತನು ಭಗವಂತನ ಮಿತ್ರತ್ವವನ್ನು ಹೊಂದುವನು.

**ವಿವರಣೆ :** ಪರಮಾತ್ಮನ ಲಕ್ಷಣಗಳನ್ನು ಹಿಂದಿನ ಓವೀಯಲ್ಲಿ ವಿವರಿಸಲಾಗಿದೆ. ಅವುಗಳನ್ನು ತಮ್ಮ ಜೀವನದಲ್ಲಿ ಯಾರು ಅಳವಡಿಸಿಕೊಳ್ಳುತ್ತಾರೋ ಅವರು ಸಹಜವಾಗಿ ದೇವನ ಸ್ವಭಾವವನ್ನೇ ಪಡೆಯುತ್ತಾರೆ. ಈಗಲೂ ಕೆಲವರನ್ನು 'ದೇವನಂತೆ ಇದ್ದಾನೆ' ಎಂಬುದಾಗಿ ಹೇಳುವುದನ್ನು ಕಾಣಬಹುದು. ಆದ್ದರಿಂದ ತನ್ನ ವರ್ತನೆಯಿಂದ ಎಲ್ಲರಿಗೂ ಸಂತೋಷವನ್ನು ಉಂಟುಮಾಡುವ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಬೇಕು. ಆಗ ಇದರಿಂದ ದೇವನಿಗೆ ತಾನು ಅತ್ಯಂತ ಪ್ರೀತಿಪಾತ್ರನಾಗಬಹುದು. ಇಂತಹ ಭಕ್ತನಿಗೆ ಸಕಲ ಸಂಕಷ್ಟಗಳಿಗೂ ಪರಿಹಾರೋಪಾಯಗಳನ್ನು ದೇವನು ಕೇಳದೆಯೇ ಸೂಚಿಸುವನು ಮತ್ತು ಅಪಾಯ ಪರಿಸ್ಥಿತಿಗಳಲ್ಲಿ ತಾನೇ ಮುಂದಾಗಿ ಭಕ್ತನನ್ನು ಕಾಪಾಡುತ್ತಾನೆ. ಹೀಗೆ ಭಕ್ತನು ಭಗವಂತನ ಸಖ್ಯವನ್ನು ತಾನೇ ಸಹಜವಾಗಿ ಹೊಂದುತ್ತಾನೆ. ಇದರಲ್ಲಿ ಯಾವ ಸಂಶಯವೂ ಇರದು.

**ಓ.ಸಂ.202 :** ಇಂತಹ ಸಖ್ಯ ಭಕ್ತನು ತನಗೆ ಆಗುವುದನ್ನೆಲ್ಲಾ ದೇವನ ಇಚ್ಛೆಗನುಸಾರವಾಗಿ ನಡೆಯುತ್ತಿದೆ. ಎಂದು ಭಾವಿಸಿ ಸಂತೋಷದಿಂದ ಅದನ್ನು ಅನುಭವಿಸುತ್ತಾನೆ. ಒಂದು ವೇಳೆ ಅವನು ಇದಕ್ಕೆ ವಿರುದ್ಧವಾಗಿ ವಿಕಲ್ಪವನ್ನು ಮಾಡಿದಾಗ ಅದು ಅವನಿಗೇ ವಿರುದ್ಧವಾಗುವುದು.

**ವಿವರಣೆ :** ದೇವನು ಒಮ್ಮೆ ಭಕ್ತನ ಸಖ್ಯವನ್ನು ಮಾಡಿಕೊಂಡಾಗ ಭಕ್ತನು ಭಗವಂತನ ಇಚ್ಛೆಗನುಸರಿಸಿ ಎಚ್ಚರದಿಂದ ನಡೆಯಬೇಕಾಗುತ್ತದೆ. ಆಗುವುದೆಲ್ಲ ಭಗವಂತನ ಲೀಲೆ ಎಂದು ಭಕ್ತನು ಸಂತೋಷದಿಂದ ಅನುಭವಿಸುತ್ತಾನೆ. ಸಂತೋಷದ ಕ್ಷಣಗಳು ಬಂದಾಗ ಅವನ ಪ್ರಸಾದವೆಂದು ಅನುಭವಿಸಬೇಕು. ಆದರೆ ಒಂದು ವೇಳೆ ದುಃಖದ ಸನ್ನಿವೇಶವು ಬಂದಾಗಲೂ ಭಕ್ತನು ಅಷ್ಟೇ ಪ್ರಸನ್ನಚಿತ್ತದಿಂದ ಅದನ್ನು ದೈವೇಚ್ಛೆ ಎಂದು ತಿಳಿದು ಅನುಭವಿಸುತ್ತಾನೆ. ಆ ದುಃಖದ ಸನ್ನಿವೇಶವನ್ನು ತಾನು 'ಹಾಗೆ' ಮಾಡಿದ್ದರೆ ತಪ್ಪಿಸಬಹುದು, ಇಲ್ಲವೇ ತಾನು 'ಹೀಗೆ' ಮಾಡಿದ್ದರೆ ತಪ್ಪಿಸಬಹುದು ಎನ್ನುವ ವಿಕಲ್ಪವನ್ನು ತಾನು ಎಂದೂ ಮಾಡಬಾರದು. ಒಂದು ವೇಳೆ ಹಾಗೆ ಮಾಡಿದರೆ ಅದು ದೇವನ ವಿರೋಧವನ್ನು ಕಟ್ಟಿಕೊಂಡಂತಾಗುವುದು.

**ಓ.ಸಂ.203 :** ಇಂತಹ ಭಕ್ತನು ಮಾಡುವ ಮೊದಲ ಸಂಕಲ್ಪವನ್ನು ದೇವರ ಸಂಕಲ್ಪವೆಂದು ಭಾವಿಸಬೇಕು. ಅನಂತರ ಅವನು ಮಾಡುವ ಸಂಕಲ್ಪ-ವಿಕಲ್ಪಗಳು 'ಜೀವ' ನದು ಆಗಿರುತ್ತವೆಯೇ ಹೊರತು ಅವು ದೇವನದಲ್ಲವೆಂದು ಸ್ಪಷ್ಟವಾಗಿ ತಿಳಿಯಬೇಕು.

**ವಿವರಣೆ :** ಇಂತಹ ಶ್ರೇಷ್ಠ ಭಕ್ತನಿಗೆ ಪರೋಕ್ಷವಾಗಿಯೇ ಪರಮಾತ್ಮನು ಮಾರ್ಗದರ್ಶನ ಮಾಡುತ್ತಿರುತ್ತಾನೆ. ಯಾವುದಾದರೂ ಸಮಸ್ಯೆಯ ಅಂಗವಾಗಿ ಮತ್ತು ಅದರ ಪರಿಹಾರಾರ್ಥವಾಗಿ ಮಾಡುವ ಪ್ರಯತ್ನಕ್ಕಾಗಿ ಉಂಟಾಗುವ ಮೊಟ್ಟಮೊದಲನೆಯ ಸಂಕಲ್ಪವೇ ಪರಮಾತ್ಮನ ಇಚ್ಛೆಯೆಂದು ತಿಳಿದು ಅದನ್ನೇ ಕಾರ್ಯರೂಪಕ್ಕೆ ತರಬೇಕು. ನಂತರ ಉಂಟಾಗುವ ಸಂಕಲ್ಪ ಹಾಗೂ ವಿಕಲ್ಪಗಳು 'ಜೀವ'ನ ಸೃಷ್ಟಿಯಾಗಿರುವುದರಿಂದ ಅವು ಪ್ರಯತ್ನಮಾಡಿದಾಗ್ಯೂ ಬೇಕಾದ ಫಲವನ್ನು ಕೊಡುವುದಿಲ್ಲ. ಏಕೆಂದರೆ ನಂತರ ಏಳುವ ಸಂಕಲ್ಪಗಳು ಬುದ್ಧಿ ಕಲ್ಪಿತವಾಗಿದ್ದು ಅವು ಗುರಿಯನ್ನು ಮುಟ್ಟಲು ಅಸಮರ್ಥವಾಗಿರುತ್ತವೆ. ಎಲ್ಲ ದೇವ ಗುಣಗಳನ್ನೂ ಅಳವಡಿಸಿಕೊಂಡ ಭಕ್ತನು ಭಗವಂತನ ಸಖ್ಯವನ್ನು ಸಹಜವಾಗಿ ಪಡೆಯುತ್ತಾನೆ. ಅಂತಹವನಿಗೆ ಏನೂಮಾಡಲು ತೋಚದೇಇದ್ದಾಗ ಆಗ ಪರಮಾತ್ಮನೇ ಪ್ರಥಮ ಸಂಕಲ್ಪವನ್ನು ಸೃಷ್ಟಿಸಿ ಸಹಾಯ ಮಾಡುತ್ತಾನೆ.

**ಓ.ಸಂ.204 :** ಸಖ್ಯಭಕ್ತನು ಪ್ರಯತ್ನಪೂರ್ವಕವಾಗಿ ಜೀವ ಸ್ವಭಾವವನ್ನು ಬಿಟ್ಟು ದೇವ ಸ್ವಭಾವವನ್ನು ಹಿಡಿಯಬೇಕು. ಆಗ ಅವನೇ ದೇವನಾಗುತ್ತಾನೆ ಮತ್ತು ಪರಮಾತ್ಮನಿಗೆ ಈ ಸಖ್ಯಭಕ್ತನು ಅತ್ಯಂತ ಪ್ರಿಯನಾಗುತ್ತಾನೆ.

**ವಿವರಣೆ :** ಸಖ್ಯಭಕ್ತನು ದೇವ ಭಾವವನ್ನು ಸದಾ ಉಳಿಸಿಕೊಳ್ಳಲು ಹಿಂದಿನ ಓವೀಯಲ್ಲಿ ತಿಳಿಸಿದಂತೆ, ಮೊದಲ ಸಂಕಲ್ಪದ ರೀತಿಯಲ್ಲಿಯೇ ಪ್ರತಿಯೊಂದೂ ಕರ್ಮವನ್ನು ಮಾಡಬೇಕು. ಇದರಿಂದ ಕ್ರಮೇಣ ಸಖ್ಯಭಕ್ತನ ವೈಯಕ್ತಿಕ ನಿರ್ಣಯಗಳೇ ಇಲ್ಲದಂತಾಗಿ ತನ್ನ ಇಡೀ ಜೀವನವೇ ದೇವಭಾವದಿಂದ ತುಂಬಿಹೋಗುವುದು. ಇದರಿಂದ ದೇವನು ಇಂತಹ ಸಖ್ಯಭಕ್ತನ ಶಾಶ್ವತ ಸಲಹೆಗಾರನಾಗಿರುತ್ತಾನೆ. ಅವನ ನಡೆ ಉಳಿದವರಿಗೆ ಅಸಹಜವಾಗಿ ಕಾಣುವುದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ಆದುದರಿಂದ ಸಾಮಾನ್ಯ ಜನರಿಂದ ಸಖ್ಯ ಭಕ್ತನ ಮೇಲೆ ಅನೇಕ ಟೀಕೆ-ಟಿಪ್ಪಣಿಗಳು ಬಂದರೆ ಆಶ್ಚರ್ಯವಿಲ್ಲ. ಆದರೆ ಸಖ್ಯಭಕ್ತನು ಮಾತ್ರ ಇದಕ್ಕೆಲ್ಲ ಧೃತಿಗೆಡದೆ ತನ್ನಷ್ಟಕ್ಕೆ ತಾನು ಸದಾ ದೇವಭಾವದಿಂದ ವಿಚಲಿತನಾಗದೇ ಸಕಲ ಕರ್ಮಗಳನ್ನೂ ದೇವಭಾವದಿಂದಲೇ ಆಚರಿಸುತ್ತಾನೆ. ಇಂತಹ ಸಖ್ಯಭಕ್ತನು ಭಗವಂತನಿಗೆ ಅತ್ಯಂತ ಪ್ರೀತಿ-ಪಾತ್ರನಾಗುತ್ತಾನೆ. ಅಂದರೆ ಭಕ್ತನಿಗೆ ದೇವನು ಆತ್ಮೀಯ ಗೆಳೆಯನಿದ್ದಂತೆ. ಅವನಿಗೆ ಕಷ್ಟಕಾಲದಲ್ಲಿ ಆಪ್ತಸಲಹೆಯನ್ನು ಕೊಡಬಲ್ಲವನಾಗಿರುತ್ತಾನೆ.

**ಓ.ಸಂ.205 :** 'ಜೀವ' ನ ಅಹಂಕಾರವು ಸದಾ ಏಕದೇಶೀಯವಾಗಿರುತ್ತದೆ. ಆದರೆ ದೇವನ ಅಹಂಕಾರವು ಸಹಜವಾಗಿ ಸ್ಫುರಿಸುತ್ತದೆ.

**ವಿವರಣೆ :** 'ಜೀವ'ನಲ್ಲಿ ತನ್ನ ಹಾಗೂ ದೇವನ ಅಹಂಕಾರಗಳೆರಡೂ ಇರುವುವು. ಈ ಓವೀಯಲ್ಲಿ ಈ ಎರಡೂ ಅಹಂಕಾರಗಳ ವ್ಯತ್ಯಾಸವನ್ನು ಕೊಟ್ಟಿರುವುದರಿಂದ 'ಜೀವ'ನು ಸುಲಭವಾಗಿ ಬೇಕಾದ್ದನ್ನು ಆರಿಸಿಕೊಳ್ಳಬಹುದು. 'ಜೀವ' ನ ಅಹಂಕಾರವು ಸದಾ ಏಕದೇಶೀಯವಾಗಿರುತ್ತದೆ. ಅಂದರೆ 'ಜೀವ'ನಾದ 'ನಾನು' ಗ್ರಹಿಸುವುದೇ ಅಲ್ಲ 'ದೃಶ್ಯ'ವನ್ನು. ಅವನಿಗೆ ದೃಶ್ಯದ ಕಡೆ ಗಮನ ಹೋದರೆ ತನ್ನ ಕಡೆ ಗಮನವಿರುವುದಿಲ್ಲ. ತನ್ನ ಕಡೆ ಗಮನಹರಿಸಿದರೆ ಆಗ 'ದೃಶ್ಯ'ದ ಕಡೆ ಗಮನವಿರುವುದಿಲ್ಲ. ಅಂದರೆ 'ಜೀವ'ನದು ಅಪೂರ್ಣ ದೃಷ್ಟಿಯಾಗಿರುತ್ತದೆ. ಆದರೆ ದೇವನ ಅಹಂಕಾರವು ಜೀವನಲ್ಲಿ ಸಹಜವಾಗಿಯೇ ಸ್ಫುರಿಸುತ್ತಿರುತ್ತದೆ. ಇದು ಜಾಗೃತವಾದಾಗ ಮನಃಸಾಕ್ಷಿಯೂ ಜಾಗ್ರತವಾಗುತ್ತದೆ. ಅದಕ್ಕೆ ಪೂರ್ಣದೃಷ್ಟಿ ಇರುತ್ತದೆ. ಅಂದರೆ ಅದು ಸ್ಫುರಿಸಿದಾಗ ಅದು 'ಜೀವ'ನ ಬಗ್ಗೆ ಹಾಗೂ ಅವನು ನೋಡುತ್ತಿರುವ ದೃಶ್ಯದ ಬಗ್ಗೆ–ಎರಡೂ ಕಡೆ ಸಮಾನವಾಗಿಯೇ 'ಜೀವ'ನಿಗೆ ಗಮನವಿರುತ್ತದೆ. 'ಜೀವ'ನು ಅದನ್ನು ಗಮನಿಸಿ ಸದಾ ಅದನ್ನೇ ಗ್ರಹಣ ಮಾಡುತ್ತಿರಬೇಕು.

**ಓ.ಸಂ.206 :** 'ಜೀವ'ನು ನಿತ್ಯ ಸಮಷ್ಟಿ ಅಹಂಕಾರದ ಗ್ರಹಣಮಾಡುತ್ತಾ ಹೋದಾಗ ಅವನು ನಿರಹಂಕಾರಿಯಾಗುತ್ತಾನೆ. ಒಂದು ವೇಳೆ ಅವನು ವ್ಯಷ್ಟಿ ಅಹಂಕಾರವನ್ನು ಹೆಚ್ಚು ಹೆಚ್ಚಾಗಿ ಸ್ವೀಕರಿಸುತ್ತಾ ಹೋದರೆ ಆಗ ದೇವನು 'ಜೀವ'ನಿಂದ ದೂರವಾಗುತ್ತಾ ಬರುವನು.

**ವಿವರಣೆ :** ಹಿಂದಿನ ಓವೀಯಲ್ಲಿ ಸಮಷ್ಟಿ–ವ್ಯಷ್ಟಿ ಅಹಂಕಾರಗಳಲ್ಲಿರುವ ವ್ಯತ್ಯಾಸವನ್ನು ತಿಳಿಸಲಾಗಿದೆ. ಈ ಸಮಷ್ಟಿ ಅಹಂಕಾರವು ಬಂದಾಗ ಮನಃಸಾಕ್ಷಿಯು ಜಾಗ್ರತವಾಗಿರುತ್ತದೆ. ಏಕೆಂದರೆ ಆತ್ಮನು 'ಜೀವ'ನ ಸಾಕ್ಷಿಯಾಗಿ ನೇರವಾಗಿ 'ಜೀವ'ನ ಅಂತಃಕರಣವನ್ನೇ ಅಂದರೆ 'ನಾನು' ಎಂಬ ಭಾವವಿರುವ 'ಜೀವ'ನನ್ನೇ ವಿಷಯೀಕರಿಸುತ್ತದೆ. ಇದರಿಂದ 'ಜೀವ'ನು ಯಾವುದೇ ಕೆಲಸ ಮಾಡಲೀ ಮುಖ್ಯವಾಗಿ ಅದು ಕೆಟ್ಟ ಕೆಲಸವಾಗಿದ್ದರೆ 'ಇದು ಕೆಟ್ಟದ್ದು; ಕೆಟ್ಟದ್ದು' ಎಂದು ಸದಾ ಮನಃಸಾಕ್ಷಿಯು ನಮ್ಮನ್ನು ಎಚ್ಚರಿಸುತ್ತಿರುತ್ತದೆ. ಇದರಿಂದ ಪ್ರಾಮಾಣಿಕ ವ್ಯಕ್ತಿಯಾಗಿರುವ ಅಧ್ಯಾತ್ಮ ಸಾಧಕನಿಗೆ ಯಾವ ಧಾರ್ಮಿಕ–ಅನೀತಿಯುತ ಕೆಲಸಗಳೂ ಆಗಲು ಸಾಧ್ಯವಿಲ್ಲ. ಹೆಚ್ಚು ಹೆಚ್ಚು ಸಮಷ್ಟಿ ಅಹಂಕಾರವನ್ನು ಅವನು ಗ್ರಹಿಸುತ್ತಾ ಹೋದಂತೆ ಅವನು ಹೆಚ್ಚು ಹೆಚ್ಚು ನಿಸ್ವಾರ್ಥನೂ ಹಾಗೂ ನಿರಹಂಕಾರಿಯೂ ಆಗುತ್ತಾ ಹೋಗುತ್ತಾನೆ, ಅಂದರೆ ಚಿತ್ತಶುದ್ಧನಾಗುತ್ತಾ ಹೋಗುತ್ತಾನೆ. ಇದಕ್ಕೆ ವಿರುದ್ಧವಾಗಿ ಅವನು ತನ್ನ ವ್ಯಷ್ಟಿ ಅಹಂಕಾರವನ್ನು ಹೆಚ್ಚು ಹೆಚ್ಚು ಗ್ರಹಿಸುತ್ತಾ ಹೋದರೆ ದೇವನು ಅವನಿಗೆ ಹೆಚ್ಚು ಹೆಚ್ಚು ದೂರವಾಗುತ್ತಾ ಹೋಗುತ್ತಾನೆ. ಕೆಲವು ಕೆಟ್ಟ ಸ್ವಭಾವದ ಜನರಿಗೆ ಸಮಷ್ಟಿ ಅಹಂಕಾರ ಅಥವಾ ಮನಃಸಾಕ್ಷಿಯೇ ಸ್ಫುರಿಸುವುದು.

ಓ.ಸಂ.207 : ದೇವನು 'ಜೀವ'ರಲ್ಲಿ ಕೇವಲ ಸಾಕ್ಷಿಯಾಗಿರುತ್ತಾನೆ ಮತ್ತು ಅವನು ಎಂದೂ ಲಿಪ್ತನಾಗಿರುವುದಿಲ್ಲ. ಭಕ್ತನು ಯಾವಾಗ ಸಾಕ್ಷಿಯಂತೆ ನಿರ್ಲಿಪ್ತನಾಗಿರುತ್ತಾನೋ ಆಗಲೇ ಭಗವಂತನು ಭಕ್ತನ ಸಖನಾಗಿರುತ್ತಾನೆ.

ವಿವರಣೆ : 'ಜೀವ'ರಲ್ಲಿ ಪರಮಾತ್ಮನು ಸದಾ ಕೇವಲ ಸಾಕ್ಷಿಯಾಗಿರುವನು. ಅಂದರೆ ಅವನು ಎಂದೂ ಕರ್ತೃವಾಗಲೀ ಅಥವಾ ಭೋಕ್ತೃವಾಗಲೀ ಆಗಿರುವುದಿಲ್ಲ. ಜ್ಞಾನದಲ್ಲೂ ಅವನಿಗೆ ಸದಾ ಸಾಕ್ಷೀದೃಷ್ಟಿ (ಪೂರ್ಣದೃಷ್ಟಿ) ಸಮಷ್ಟಿದೃಷ್ಟಿಯಾಗಿರುತ್ತದೆ. ಇದರ ಬಗ್ಗೆ ಹಿಂದಿನ ಓವೀಯಲ್ಲೇ ವಿವರಣೆ ಬಂದಿದೆ. ಅಂದರೆ ಸಾಕ್ಷಿಯು ಎಂದೂ ಲೌಕಿಕ ವಿಷಯಗಳಿಂದ 'ಜೀವ'ನಂತೆ ಲಿಪ್ತನಾಗಿರುವುದಿಲ್ಲ. ಅಂದರೆ ಯಾವುದಕ್ಕೂ ಭಾವನಾತ್ಮಕವಾಗಿ ಅಂಟಿಕೊಂಡು ಸ್ವಾರ್ಥಿಯಾಗಿರುವುದಿಲ್ಲ. ಹೀಗೆಯೇ ಯಾವ ಭಕ್ತನು ತನ್ನ ಬದುಕನ್ನು ನಿಸ್ವಾರ್ಥಿಯಾಗಿಯೂ ಹಾಗೂ ನಿರ್ಲಿಪ್ತ ಭಾವನೆಯಿಂದಲೂ ಇರುವಂತೆ ನೋಡಿಕೊಳ್ಳುವನೋ ಆಗಲೇ ಪರಮಾತ್ಮನು ಭಕ್ತನ ಮಿತ್ರನಾಗಿರುತ್ತಾನೆ.

ಓ.ಸಂ.208 : ಇಲ್ಲಿ ಸಖ್ಯಭಕ್ತನೇ ದೇವನು ಮತ್ತು (ಭಕ್ತನೇ) ಅವನೇ ದೇವನ ಮಿತ್ರನು. ಎರಡೂ ಒಬ್ಬನೇ ಆಗಿ ದೇವನನ್ನು ಮಿತ್ರನೆಂದು ಭಾವಿಸಬೇಕು, ಮತ್ತು ತಾನೇ ಭಕ್ತನಾಗಿ, ತಾನೇ ದೇವನಾಗಿ, ಸುಖ-ದುಃಖಗಳನ್ನು ಹೇಳಿಕೊಳ್ಳಬೇಕು. ತನಗಿಂತ ಹೆಚ್ಚು ದೇವನನ್ನು ಪ್ರೀತಿಸಬೇಕು.

ವಿವರಣೆ : ಇಲ್ಲಿ ಒಬ್ಬ ಭಕ್ತನೇ ದೇವನಾಗಿ ಹಾಗೂ ಭಕ್ತನಾಗಿ ತೋರಿಕೊಳ್ಳುತ್ತಿರುವುದು. ಭಕ್ತನಾದಾಗ ಅವನು ದೇವನ ಮಿತ್ರನಾಗಿರುತ್ತಾನೆ. ಅಲ್ಲದೇ ಭಕ್ತನೇ ಈ ಮಿತ್ರನಾಗಿ ದೇವನಿಗೆ ಪೂಜ್ಯ ಭಾವನೆಯಿಂದ ನಡೆದುಕೊಳ್ಳುತ್ತಾನೆ. ಭಕ್ತನಾದಾಗ ತನಗೆ ಎದುರಾಗುವ ಕಷ್ಟ-ಕಾರ್ಪಣ್ಯಗಳನ್ನೂ ಹಾಗೂ ದುಃಖ-ದುಮ್ಮಾನಗಳನ್ನೂ ಯಾವ ಸಂಕೋಚವಿಲ್ಲದೇ ತನ್ನ ಮಿತ್ರನಾದ ದೇವನಿಗೆ ಹೇಳಿಕೊಳ್ಳುತ್ತಾನೆ. ಇದಕ್ಕೆ ಉತ್ತರವಾಗಿ ತಾನೇ ದೇವನಾಗಿ ಅದಕ್ಕೆ ಪರಿಹಾರವನ್ನು ತಿಳಿಸಿ ಹೇಳಬೇಕು. ಹೀಗೆ ತಾನೇ ಹುಚ್ಚನಂತೆ ಇಬ್ಬರೂ ಆಗಿ ಸಂಭಾಷಣೆಯನ್ನು ಮಾಡುತ್ತಿರಬೇಕು. ಭಕ್ತನಾಗಿ ತನಗಿಂತ ಹೆಚ್ಚಾಗಿ ದೇವನನ್ನು ಪೂಜ್ಯಭಾವದಿಂದಲೂ, ಆದರದಿಂದಲೂ ಪೂಜಿಸಬೇಕು.

ಓ.ಸಂ.209 : ಭಕ್ತನೇ ದೇವನಾಗಿ ಭಕ್ತನಿಗೆ ಸಮಾಧಾನ ಹೇಳಬೇಕು. ಭಕ್ತನಾದ ತಾನು ದೇವನಾದ ತನ್ನನ್ನೇ ತನಗಿಂತ ಹೆಚ್ಚು ಪ್ರೀತಿಸಬೇಕು.

**ವಿವರಣೆ :** ಭಕ್ತನಾಗಿ ತನ್ನ ಕಷ್ಟ-ನಷ್ಟಗಳನ್ನು ಹಾಗೂ ಸುಖ-ದುಃಖಗಳನ್ನು ತಾನೇ ಜೀವಂತ ದೇವರಾಗಿರುವುದರಿಂದ ಆತನ ಬಳಿ ಹೇಳಿಕೊಳ್ಳಬೇಕು. ಆಗ ತಾನೇ ದೇವನಾಗಿ ಭಕ್ತನಾದ ತನಗೆ ಒಂದೊಂದೇ ಸಮಸ್ಯೆಗಳನ್ನು ತೆಗೆದುಕೊಂಡು ಅದಕ್ಕೆ ಪರಿಹಾರ ಹೇಳುತ್ತ ತನಗೇ ಸಮಾಧಾನ ಹೇಳಿಕೊಳ್ಳಬೇಕು. ದೇವನು ಹೇಳುವ ಈ ಸಮಾಧಾನದಿಂದ ಭಕ್ತನು ಸಂಪೂರ್ಣವಾಗಿ ನಂಬಬೇಕು ಮತ್ತು ಅದರಿಂದ ಭಕ್ತನಾದ ತಾನು ಸಮಾಧಾನ ಹೊಂದಬೇಕು. ಮನುಷ್ಯನು ತನ್ನ ಆತ್ಮನನ್ನು ಪ್ರೀತಿಸಿದಷ್ಟು ಯಾವುದನ್ನೂ ಪ್ರೀತಿಸಲು ಸಾಧ್ಯವಿಲ್ಲವೆಂದು ಹೇಳುತ್ತಾರೆ (" ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ " – ಬೃ.ಉ.II.4.5). ಆದರೆ ಭಕ್ತನ ಆತ್ಮನೇ ದೇವನಾಗಿರುವುದರಿಂದ ತನ್ನನ್ನು ತಾನು ದೇವನಾಗಿ ತನಗಿಂತ ಹೆಚ್ಚು ಪ್ರೀತಿಸಬೇಕು. ಪ್ರೀತಿಸುವಾಗ ತಾನು ಭಕ್ತನಾಗಿ ದೇವನಿಗೆ ಅತ್ಯಂತ ಪೂಜ್ಯ ಭಾವನೆಯಿಂದಲೂ ಹಾಗೂ ಆದರದಿಂದಲೂ ನೋಡಬೇಕು.

**ಓ.ಸಂ.210 :** ಇಂತಹ ಸಖ್ಯಭಕ್ತಿಯನ್ನು ನಿರಂತರ ಮಾಡುತ್ತಿದ್ದರೆ ಭಕ್ತನು ಗುರುಕೃಪೆಯನ್ನು ಪಡೆದು ತನ್ನ ಸ್ವರೂಪ ಜ್ಞಾನದಿಂದ ಜೀವನ್ಮುಕ್ತಾವಸ್ಥೆಯನ್ನು ಪಡೆಯುತ್ತಾನೆ. ಈ ಅವಸ್ಥೆಯಲ್ಲಿ ಸುಖ ದುಃಖಗಳ ಸ್ಪರ್ಶ ಆಗದೇ ನಿಶ್ಚಯವಾಗಿ ಮೋಕ್ಷವನ್ನು ಪಡೆಯುತ್ತಾನೆ.

**ವಿವರಣೆ:** ಹೀಗೆ ಸಖ್ಯಭಕ್ತನು ತನ್ನ ಮಿತ್ರನಾದ ದೇವನ ಜೊತೆಗೆ ಒಡನಾಟವನ್ನು ಬಹಳಕಾಲ ಇಟ್ಟುಕೊಂಡರೆ ಆಗ ನಿಶ್ಚಿತವಾಗಿ ಅವನಿಗೆ ಚಿತ್ತಶುದ್ಧಿಯು ಆಗುವುದು. ಅಂದರೆ ಬ್ರಹ್ಮಾತ್ಮೈಕ್ಯ ಜ್ಞಾನವನ್ನು ಪಡೆಯುವ ಸಾಮರ್ಥ್ಯವು ಬರುವುದು. ಆಗ ಶೀಘ್ರವಾಗಿ ಯಾವುದಾದರೂ ಬ್ರಹ್ಮಜ್ಞಾನಿಯ ಕೃಪೆಯಿಂದ ಬ್ರಹ್ಮಾತ್ಮೈಕ್ಯ ಜ್ಞಾನ ಉಂಟಾಗುತ್ತದೆ. ಇದರಿಂದ ತತ್‌ಕ್ಷಣವೇ ಭವ ಬಂಧನದಿಂದ ಬಿಡುಗಡೆಯಾಗುವನು. ಅಂದರೆ ಅನಾದಿಯಾದ ಅಜ್ಞಾನವು ನಾಶವಾಗಿ ಸುಖ-ದುಃಖಗಳ ಬಂಧನವು ಇಲ್ಲದಂತಾಗಿ ತನ್ನ ನಿಜಸ್ವರೂಪವನ್ನು ಅಂದರೆ ಸದ್ಯೋಮುಕ್ತಿಯನ್ನು ನಿಶ್ಚಿತವಾಗಿ ಪಡೆಯುತ್ತಾನೆ.

**ಓ.ಸಂ.211 :** ಈ ಸಖ್ಯ ಭಕ್ತಯಿಂದಲೇ ಅರ್ಜುನನು ಶ್ರೀ ಕೃಷ್ಣನಿಗೆ ಅತ್ಯಂತ ಪ್ರೀತಿಪಾತ್ರನಾದನು. ಶ್ರೀಕೃಷ್ಣನು ಮಹಾಭಾರತ ಯುದ್ಧದಲ್ಲಿ ಅರ್ಜುನನ ರಥದ ಸಾರಥಿಯಾಗಿರುತ್ತಾನೆ. ಅಲ್ಲದೇ ಯುದ್ಧಭೂಮಿಯಲ್ಲಿ ಸರ್ವಶ್ರುತಿಸಾರವನ್ನು ತಿಳಿಸುವ ಹಾಗೂ ಗುಹ್ಯವಾದ ಭಗವದ್‌ಗೀತೆಯ ಉಪದೇಶವನ್ನೂ ಶ್ರೀಕೃಷ್ಣನು ಅವನಿಗೆ ಮಾಡುತ್ತಾನೆ.

**ವಿವರಣೆ :** ಈ ಓವೀಯ ತನಕ ಸಖ್ಯ ಭಕ್ತಿಯ ನಿರೂಪಣೆಯು ಸಮಾರೋಪವಾಗುತ್ತದೆ. ಒಟ್ಟು 25 ಓವೀಗಳಷ್ಟು ದೀರ್ಘಪ್ರಮಾಣದಲ್ಲಿ (ಓವೀ. ಸಂ. 187 ರಿಂದ 211) ಇದರ ನಿರೂಪಣೆಯನ್ನು ಮಾಡಲಾಗಿದೆ. ಈ ಸಖ್ಯ ಭಕ್ತಿಯಿಂದಲೇ ಅರ್ಜುನನು ಭಗವಾನ್ ಶ್ರೀಕೃಷ್ಣನಿಗೆ ಅತ್ಯಂತ ಪ್ರೀತಿಪಾತ್ರನಾಗುತ್ತಾನೆ. ಮಹಾಭಾರತ ಯುದ್ಧದಲ್ಲಿ ಶ್ರೀ ಕೃಷ್ಣನು ಅರ್ಜುನನ ರಥದ ಸಾರಥಿಯಾಗಿರುತ್ತಾನೆ. ಅಲ್ಲದೇ ಇದೇ ಯುದ್ಧದಲ್ಲಿ ಅರ್ಜುನನಿಗೆ

ಜಗತ್ಪ್ರಸಿದ್ಧಿಯಾದ, ಸರ್ವಶ್ರುತಿಸಾರವಾದ ಹಾಗೂ ರಹಸ್ಯವಾದ ಭಗವದ್ಗೀತೆಯ ಉಪದೇಶವನ್ನು ಮಾಡುತ್ತಾನೆ. ಶ್ರೀ ಕೃಷ್ಣನ ಸಹಾಯವಿಲ್ಲದಿದ್ದರೆ ಪಾಂಡವರು ಈ ಯುದ್ಧದಲ್ಲಿ ಗೆಲ್ಲಲು ಸಾಧ್ಯವಿರುತ್ತಿರಲಿಲ್ಲವೆಂಬುದು ಸರ್ವರಿಗೂ ವೇದ್ಯವಾಗಿರುವ ವಿಷಯವಾಗಿರುತ್ತದೆ.

**ಓ.ಸಂ.212 :** ಇನ್ನು ಮೇಲೆ 'ಆತ್ಮನಿವೇದನ'ವೆಂಬ ಒಂಭತ್ತನೆಯ ಭಕ್ತಿವಿಧವನ್ನು ವಿವರಿಸಲಾಗುವುದು. ನಿವೇದನೆಗೆ ಮುಂಚೆಯೇ ಇದನ್ನು ಯಾವ ದೇವತೆಗೆ ನಿವೇದನೆ? ಆ ದೇವತೆ ಯಾರು? ಅವನ ಸ್ಥಾನ ಯಾವುದು? ಎಂಬುದನ್ನು ನಿರ್ಧರಿಸಬೇಕು.

**ವಿವರಣೆ :** ಇಲ್ಲಿಂದ ಮುಂದೆ 'ಆತ್ಮನಿವೇದನೆ' ಎಂಬ ಒಂಭತ್ತನೆಯ ಭಕ್ತಿ ವಿಧದ ಬಗ್ಗೆ ವಿವರಣೆಯು ಪ್ರಾರಂಭವಾಗುತ್ತದೆ. ಇಲ್ಲಿ 'ಆತ್ಮನಿವೇದನೆ' ಎಂಬ ಪದದಿಂದ ಭಕ್ತನು ತನ್ನ ಆತ್ಮವನ್ನೇ ದೇವನಿಗೆ ಅರ್ಪಣಮಾಡುವುದೇ ಆಗಿರುತ್ತದೆ. ಇಲ್ಲಿ ತಮ್ಮ ಆತ್ಮವನ್ನು ನಿವೇದನೆ ಮಾಡುವ ಮೊದಲು ಆ ಭಕ್ತನು ಆ ದೇವನ ಸ್ವರೂಪವನ್ನು ತಿಳಿದುಕೊಳ್ಳಬೇಕಾಗಿರುವುದು ಅತ್ಯಂತ ಮಹತ್ವದ್ದಾಗಿರುತ್ತದೆ. ಏಕೆಂದರೆ ಈ ನಿವೇದನೆಯನ್ನು ಯಾವ ದೇವರಿಗೆ ಮಾಡಬೇಕು? ಅವನು ಹೇಗಿರುವನು? ಮತ್ತು ಅವನ ಸ್ಥಾನ ಯಾವುದು? ಎಂಬ ಮುಖ್ಯ ಪ್ರಶ್ನೆಗಳಿಗೆ ಉತ್ತರ ತಿಳಿದುಕೊಳ್ಳದೇ ನಿವೇದನೆಯನ್ನು ಮಾಡುವ ಹಾಗಿಲ್ಲ. ಏಕೆಂದರೆ ದೇವತೆಗಳು ಅನೇಕರಿದ್ದು ಯಾವ ದೇವತೆಗೆ ಎಂಬುದು ನಿರ್ಧಾರವಾಗಿಲ್ಲ. ಆ ದೇವತೆಯು ಪರಬ್ರಹ್ಮನೇ ಆಗಿ ನಿರ್ಗುಣನಾಗಿದ್ದರೆ ಅವನು ಭಕ್ತನ ಯಾವ ನಿವೇದನೆಯನ್ನೂ ಸ್ವೀಕರಿಸುವುದಿಲ್ಲ. ಆದ್ದರಿಂದ ದೇವನು ಹೇಗಿರುವನು ಎಂದು ತಿಳಿದುಕೊಳ್ಳುವುದು ಮುಖ್ಯ. ಒಂದು ವೇಳೆ ದೇವನು ಸಗುಣನಾಗಿದ್ದಲ್ಲಿ ಅವನು ಬ್ರಹ್ಮನೋ, ವಿಷ್ಣುವೋ, ಮಹೇಶ್ವರನೋ ಅಥವಾ ಗಣಪತಿ ಸೂರ್ಯಾದಿ ದೇವತೆಗಳಲ್ಲೊಬ್ಬನೋ ಎಂಬುದನ್ನೂ ಮತ್ತು ಅಂತಹ ದೇವರನ್ನು ಉಪಾಸಿಸಲು ಆ ದೇವತೆಯ ಪ್ರತೀಕವನ್ನು ತಿಳಿಯಬೇಕು.

**ಓ.ಸಂ.213 :** ನಿವೇದನವನ್ನು ಯಾವ ದೇವನಿಗೆ ಮಾಡಬೇಕೋ ಆ ದೇವನನ್ನು ಗುರುತಿಸಬೇಕು. ವಿಚಾರದಿಂದ ದೇವನಾರೆಂದು ಪರೀಕ್ಷಿಸಿದಾಗ ಆ ದೇವನೇ ಆತ್ಮನೆಂಬುದು ತಿಳಿದುಬರುವುದು.

**ವಿವರಣೆ :** ನಿವೇದನವನ್ನು ಯಾವ ದೇವನಿಗೆ ಮಾಡಬೇಕೋ ಅವನ ಆತ್ಮದ ಸ್ವರೂಪವನ್ನು ಮೊದಲು ನಿರ್ಧರಿಸಬೇಕು. ಏಕೆಂದರೆ ಯಾವುದೇ ಜೀವಿಗೆ ದೇಹ–ಮನಸ್ಸುಗಳ ಜಡ ಉಪಾಧಿ ಇರುವುದರಿಂದ ಅದು ಆ ಜೀವಿಯ ಆತ್ಮವಾಗಲಾರದು ಎಂಬ ಪ್ರಜ್ಞೆಯು ಮನುಷ್ಯರಿಗೆ ಬಂದಿರುವುದರಿಂದಲೂ ಮತ್ತು ಈ ದೇಹ–ಮನಸ್ಸುಗಳು ಪ್ರತಿಯೊಬ್ಬರಿಗೂ ನಿಶ್ಚಿತವಿರುವುದರಿಂದಲೂ 'ಜೀವಿ ಎಂದರೆ ನಿತ್ಯ ಇರುವ ಆತ್ಮನೇ' ಎಂಬುದು ನಿಶ್ಚಿತವಾಗುತ್ತದೆ. ಹಾಗೆಯೇ ಒಬ್ಬನೇ ಪರಮಾತ್ಮನ ಆತ್ಮಸ್ವರೂಪವನ್ನು ನಿರ್ಧರಿಸಬೇಕು. ಇದನ್ನು ನಿರ್ಧರಿಸುವ ಬಗೆಯು ವಿಚಾರ–ಮಾರ್ಗದ್ದಾಗಿರುತ್ತದೆ. ಆದುದರಿಂದ ವಿಚಾರದಿಂದ ಇದನ್ನು ನಿರ್ಧರಿಸಬಹುದು. ಹೀಗೆ ವಿಚಾರಮಾಡಲು ನಮಗೆ ಶ್ರುತಿಯೇ ಮಾರ್ಗದರ್ಶನ ಮಾಡುತ್ತದೆ ( "ಶ್ರುತ್ಯನುಗ್ರಹೀತ ತರ್ಕ" ). ಶ್ರುತಿಯು ದೇವನೆಂದರೆ ನಮ್ಮ ಆತ್ಮನೆಂದೇ ಹೇಳುತ್ತದೆ. ("ಅಯಂ ಆತ್ಮಾ ಬ್ರಹ್ಮಾ", "ಸೋಯಂ ಆತ್ಮಾ ಚತುಷ್ಪಾತ್"–

ಮಾಂ.ಉ.2). ಇದನ್ನು ಗುರುಗಳು ವೇದಾಂತ ಶ್ರವಣದಲ್ಲಿ ಹೇಳುತ್ತಾರೆ. ಅದನ್ನು ಶಿಷ್ಯನು ಮನಸ್ಸಿನಲ್ಲಿ ವಿಚಾರಿಸಿ ತಿಳಿದುಕೊಳ್ಳಬೇಕು. ಮುಂದೆ ಇದನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಓ.ಸಂ.214 :** ಹೀಗೆ 'ದೇವನು ನಮ್ಮ ಆತ್ಮನೇ' ಎಂಬುದು ತಿಳಿದಮೇಲೆ ಈ 'ನಿವೇದನೆ' ಎಂಬುದಕ್ಕೆ ಅರ್ಥವಿರದಂತಾಗುತ್ತದೆ ಮತ್ತು ಆಗ ದೇವನು ನಮ್ಮ ಆತ್ಮನೆಂದು ತಿಳಿದುಕೊಂಡಾಗ ಸಹಜವಾದ ಆತ್ಮನಿವೇದನೆಯಾಗುತ್ತದೆ. ಈ ಜ್ಞಾನವಿಲ್ಲದಾಗ ಎಷ್ಟು ನಿವೇದನೆಯನ್ನು ಮಾಡಿದರೂ ಅದೆಲ್ಲ ವ್ಯರ್ಥವಾಗುತ್ತದೆ.

**ವಿವರಣೆ :** ಹೀಗೆ ದೇವನೆಂದರೆ ನಮ್ಮ ಆತ್ಮನೇ ಎಂಬುದು ತಿಳಿದಮೇಲೆ ಯಾರು, ಯಾರಿಗೆ ನಿವೇದನೆ ಮಾಡಬೇಕು? ಆದ್ದರಿಂದ 'ನಿವೇದನೆ' ಎನ್ನುವುದು ಅರ್ಥವಿಲ್ಲದ ಪದವಾಗುತ್ತದೆ. ಇದನ್ನು ತಿಳಿದುಕೊಳ್ಳದೇ ಇದ್ದಾಗ ಹಿಂದೆ ಮಾಡಿದ ಪ್ರಯತ್ನವೆಲ್ಲವೂ ವ್ಯರ್ಥವಾದಂತೆ ಆಗುತ್ತದೆ. ಅನೇಕ ತೀರ್ಥ–ಕ್ಷೇತ್ರಗಳನ್ನು ದೇವರಿಗಾಗಿ ಸುತ್ತಾಡಿ 'ದೇವನು ಕೈಲಾಸದಲ್ಲಿದ್ದಾನೆ' ಅಥವಾ '...ವೈಕುಂಠದಲ್ಲಿರುತ್ತಾನೆ' ಎಂಬುವ ಕಲ್ಪನೆಗಳನ್ನು ಮಾಡುತ್ತಾ ಸುಮ್ಮನೆ ಮನುಷ್ಯನು ಆಧ್ಯಾತ್ಮಿಕ ದೃಷ್ಟಿಯಿಂದ ವ್ಯರ್ಥವಾಗಿ ಕಾಲಹರಣ ಮಾಡುತ್ತಾನೆ. ಯಾವುದಾದರೂ ಗುರು ಮುಖೇನ 'ದೇವನಾರು' ಎಂಬುದನ್ನು ತಿಳಿದರೆ ತನಗೇ ಐಕ್ಯಕ ನಿತ್ಯ ಸತ್ಯವಾಗಿರುವ ಪರಮಾತ್ಮನಾದ ಪರಬ್ರಹ್ಮನೆಂದು ತಿಳಿದು ಬರುವುದು. ಹೀಗೆ ತಿಳಿಯುವುದೇ ನಿಜವಾದ ಹಾಗೂ ಸಹಜವಾದ 'ಆತ್ಮನಿವೇದನೆ'ಯಾಗಿರುತ್ತದೆ. ಇದು ಅತ್ಯಂತ ಸಹಜವೂ ಆಗಿರುವುದಲ್ಲದೇ ಮನುಷ್ಯನ ಪರಮ ಪುರುಷಾರ್ಥವಾದ ಮೋಕ್ಷವೂ ಆಗಿರುತ್ತದೆ. ಇದನ್ನು ತಿಳಿದುಕೊಳ್ಳದೇ ಇರುವತನಕ ಮನುಷ್ಯನು ಎಷ್ಟು ಜನ್ಮವೆತ್ತಿದರೂ ಅದೆಲ್ಲ ವ್ಯರ್ಥವಾಗಿರುತ್ತದೆ.

**ಓ.ಸಂ.215 :** ಈ ಬ್ರಹ್ಮಾತ್ಮೈಕ್ಯ ಜ್ಞಾನವನ್ನು ಪಡೆಯುವುದು ವಿಚಾರವಂತರಿಗೆ ಬಹಳ ಸುಲಭದ ಕೆಲಸವಾಗಿರುತ್ತದೆ. ಆದರೆ ಅವಿಚಾರಿಗಳಿಗೆ ಎಲ್ಲವೂ ದುರ್ಲಭವಾಗಿರುತ್ತದೆ. ಇದು ಅನುಭವದ ವಿಷಯವಾಗಿದ್ದು ಇದನ್ನು ಪಡೆಯುವ ಸಾಮರ್ಥ್ಯ ಇದ್ದವರಿಗೆ ಈ ಬ್ರಹ್ಮಾತ್ಮೈಕ್ಯ ಜ್ಞಾನವು ಸುಲಭವಾಗಿ ಲಭ್ಯವಾಗುವುದು.

**ವಿವರಣೆ :** ಬ್ರಹ್ಮಾತ್ಮೈಕ್ಯ ಜ್ಞಾನವನ್ನು ತಿಳಿದ ಗುರುಗಳನ್ನು ವಿಚಾರವಂತರು ಭೇಟಿಯಾಗಿ ಈ ಜ್ಞಾನವನ್ನು ಪಡೆಯುತ್ತಾರೆ. ಅವರಿಗೆ ಎಲ್ಲವೂ ಸುಲಭವಾಗಿಯೇ ಕೈಗೂಡುತ್ತದೆ. ಆದರೆ ಅವಿಚಾರವಂತರಿಗೆ ಮಾತ್ರ ಈ ಕೆಲಸವು ಅತ್ಯಂತ ದುರ್ಲಭವಾಗಿರುತ್ತದೆ. ಅವರು ಸ್ವಭಾವತಃ ಬಹಿರ್ಮುಖವಾಗಿರುತ್ತಾರೆ. ಇಂತಹವರು ನಮಗೇನು ಫಲ ಎಂದು ಪ್ರಶ್ನೆಯನ್ನು ಮೇಲಿಂದ ಮೇಲೆ ಕೇಳುತ್ತಿರುತ್ತಾರೆ ಮತ್ತು ಅವರು ಸದಾ ಕರ್ಮೋಪಾಸನೆಯನ್ನು ಆಚರಿಸುವುದರಲ್ಲೇ ಹೆಚ್ಚಿನ ಆಸಕ್ತಿಯನ್ನು ತೋರಿಸುತ್ತಾರೆ. ಅಕಸ್ಮಾತ್ ಅವರಿದ್ದಲ್ಲೇ ಸಾಧು–ಸಂತರು ಬಂದು ಪ್ರವಚನ ಮಾಡಿದರೂ ಕೂಡ ಅವರು ಯಾವ ಆಸಕ್ತಿಯನ್ನೂ ತೋರಿಸದೇ ಅಸಡ್ಡೆಯಿಂದಲೇ ಕೇಳುತ್ತಾರೆ. ಹೀಗಾಗಿ ಅವಿಚಾರಿಗಳಿಗೆ ಪರಮಪುರುಷಾರ್ಥವು ಅತ್ಯಂತ ದುರ್ಲಭವಾಗಿರುತ್ತದೆ. ಕೇವಲ ವಿಚಾರದಿಂದ ಬ್ರಹ್ಮಾತ್ಮೈಕ್ಯ ಪರೋಕ್ಷ ಜ್ಞಾನವು ಲಭಿಸಬಹುದೇ ವಿನಹ ಅದು

ಅಪರೋಕ್ಷಜ್ಞಾನವಾಗಲಾರದು. ಆದುದರಿಂದ ಆತ್ಮ ನಿವೇದನ ಮಾಡುವ ಭಕ್ತನು ನಿದಿಧ್ಯಾಸನದಿಂದ ಅನುಭವವನ್ನು ಪಡೆದು ಅಪರೋಕ್ಷ ಜ್ಞಾನವನ್ನು ಸುಲಭವಾಗಿ ಪಡೆಯಬಹುದು.

**ಓ.ಸಂ.216 :** ಮೊದಲು ಆತ್ಮನಿವೇದನೆ ಮಾಡಿಕೊಳ್ಳುವ ಭಕ್ತನು ಆತ್ಮವನ್ನು ಗುರುತಿಸುವಾಗ ಮೊದಲು ಅವನಿಗೆ ಕಾಣುವುದು ಜಾಗ್ರತಾವಸ್ಥೆ; ನಂತರ ಅದರಲ್ಲಿರುವ ಸ್ಥೂಲ ಶರೀರ ಹಾಗೂ ಇದರ ಅಭಿಮಾನಿಯಾದ ವೈಶ್ವಾನರನನು. ಈ ಎರಡಕ್ಕೂ ತಾನೇ ಆತ್ಮನಿದ್ದೇನೆಂದು ತಿಳಿಯುತ್ತದೆ.

**ವಿವರಣೆ :** ಯಾವಾಗ ಗುರುಗಳಿಂದ ಇಲ್ಲವೇ ಶಾಸ್ತ್ರಗಳಿಂದ ಪರಮಾತ್ಮನು ನಮ್ಮ ಆತ್ಮನೇ ಎಂದು ತಿಳಿದಾಗ ಭಕ್ತನು ತನ್ನ ಆತ್ಮನನ್ನೇ ಅಂತರ್ಯದಲ್ಲಿ ಹುಡುಕಲು ಪ್ರಾರಂಭಿಸುತ್ತಾನೆ. ಆಗ ಅವನಿಗೆ ಮೊದಲು ಗೋಚರವಾಗುವುದೇ ತನ್ನ ದೇಹವು; ನಂತರ ತನ್ನ ಜಾಗ್ರತಾವಸ್ಥೆಯಲ್ಲಿ ಕಾಣುವ ಈ ಸ್ಥೂಲದೇಹ ಹಾಗೂ ಸಮಷ್ಟಿ ಜಗತ್ತು ಆಗಿರುತ್ತದೆ. ಈ ನೋಡಲ್ಪಟ್ಟ ನಮ್ಮ ಸಕಲ ಜಡಕ್ಕೆ ಅಭಿಮಾನಿಯಾದ ವೈಶ್ವಾನರನೇ ತನ್ನ ಆತ್ಮನೆಂದು ತಪ್ಪಾಗಿ ತಿಳಿಯುತ್ತಾನೆ. ಮೊದ ಮೊದಲು ಅವಿಚಾರಾವಸ್ಥೆಯಲ್ಲಿ ತನ್ನ ಸ್ಥೂಲದೇಹಕ್ಕೆ ಮಾತ್ರ ತಾನು ಅಭಿಮಾನಿ ಎಂದು ತಿಳಿದಿರುತ್ತಾನೆ. ನಂತರ ವಿಚಾರ ಮಾಡಿದಾಗ ತಾನೇ ಇಂದ್ರಿಯಗಳ ಹಾಗೂ ಮನಸ್ಸಿನ ಮೂಲಕವಾಗಿ ವೃತ್ತಿರೂಪದಲ್ಲಿ ಇರುವ ಈ ಜಡ ಜಗತ್ತನ್ನು ತಿಳಿಯುವುದು ಸ್ಪಷ್ಟವಾಗುತ್ತದೆ. ನನ್ನಿಂದ ತಿಳಿಯಲ್ಪಟ್ಟ ಈ ನನ್ನ ಜಡಜಗತ್ತಿಗೂ ಕೂಡ ದೇಹದಂತೆ ನಾನೇ ಅಭಿಮಾನಿಯಾಗಿದ್ದೇನೆ ಎಂದೂ ತಿಳಿಯುತ್ತದೆ. ಇದರಿಂದ ತನ್ನ ಶರೀರಕ್ಕೂ ಹಾಗೂ ತಾನು ನೋಡುವ ಈ ಜಗತ್ತಿಗೂ ತನ್ನ ಆತ್ಮನೇ ಅಭಿಮಾನಿಯಾಗಿದ್ದಾನೆ ಎಂದು ತಿಳಿಯುತ್ತದೆ.

**ಓ.ಸಂ.217 :** ಈಗ ಈಶ್ವರನನ್ನು ಹುಡುಕಲು 'ಅತ್ಮನಿವೇದನ ಭಕ್ತ'ನು ಹೊರಗಡೆ ದೃಷ್ಟಿ ಹಾಯಿಸಿದಾಗ ಅವನಿಗೆ ಕಂಡದ್ದು 'ವಿರಾಡ್ರೂಪ ವಿಶ್ವ' ('ವಿರಾಡ್ರೂಪ ಪ್ರಪಂಚ'). ಪಂಚೀಕೃತವಾದ ಆಕಾಶಾದಿ ಪಂಚಭೂತಗಳೊಂದಿಗೆ ಈ ಸ್ಥೂಲ ವಿರಾಟನ ಐಕ್ಯವನ್ನು ಅವನು ತಿಳಿದುಕೊಳ್ಳುತ್ತಾನೆ.

**ವಿವರಣೆ :** ಹಿಂದಿನ ಓವೀಯಲ್ಲಿ ಮೊದಲು ತನ್ನ ಸ್ಥೂಲ ಶರೀರವನ್ನೇ ಮತ್ತು ಅದರ ಹಾಗೂ ಜಾಗ್ರತಾವಸ್ಥೆಯ ಅಭಿಮಾನಿಯಾದ ಆತ್ಮನನ್ನೇ ವೈಶ್ವಾನರ ('ವಿಶ್ವ') ನೆಂದು ತಿಳಿಯುತ್ತಾನೆ. ಈಗ ಅವನು ಪರೋಕ್ಷವಾದ ಈಶ್ವರನನ್ನು ಬಾಹ್ಯದಲ್ಲಿ ನೋಡಲು ಪ್ರಯತ್ನಿಸುತ್ತಾನೆ. ಆಗ ಅವನಿಗೆ ಕಂಡದ್ದು ಅನಂತ ರೂಪದ ಇಡೀ ವಿಶ್ವವನ್ನು ಅಥವಾ ವಿರಾಟ್ ಸ್ವರೂಪವನ್ನು. ಈ ವಿಶ್ವವು ಈಶ್ವರನಿಂದ ಸೂಕ್ಷ್ಮರೂಪದ ಅಂದರೆ ಅಪಂಚೀಕೃತವಾದ ಪಂಚಭೂತಗಳು (ತನ್ಮಾತ್ರೆಗಳು) ಪಂಚೀಕರಣದಿಂದ ಸ್ಥೂಲರೂಪಕ್ಕೆ ಬಂದಿರುವುದು ತಿಳಿಯಿತು. ಆದುದರಿಂದ ಈ ಅನಂತ ವಿಶ್ವವು ಕೇವಲ ಪಂಚಭೂತಗಳಿಂದ ಮಾಡಲ್ಪಟ್ಟಿದೆ ಎಂದು ಎರಡರ (ವಿಶ್ವದ ಮತ್ತು ಪಂಚಭೂತಗಳ) ಐಕ್ಯವನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳುತ್ತಾನೆ.

**ಓ.ಸಂ.218 :** ಜಾಗ್ರತಾವಸ್ಥೆಯೆಂದರೆ ಮನಸ್ಸಾದಿ(ಸೂಕ್ಷ್ಮ ಶರೀರವಾದ ಮನೋ, ಬುದ್ಧಿ, ಅಹಂಕಾರ, ಚಿತ್ತಾದಿಗಳು) ಗಳೊಂದಿಗೆ ಈ ಜಡ ಪ್ರಪಂಚವೂ ಸೇರಿದೆ. ಈಶ್ವರನ ಸೃಷ್ಟಿಯಲ್ಲಿ ಈ ವಿರಾಟ್ ಸಹಿತ 'ಜೀವ'ನ ಶರೀರ-ಮನಸ್ಸುಗಳೂ ಸೇರಿಕೊಳ್ಳುತ್ತವೆ. ಅಂದರೆ ವಿರಾಟ್ ಮತ್ತು 'ಜೀವ'ನ ಶರೀರ-ಮನಸ್ಸುಗಳು ಅಂಶ-ಅಂಶಿ ಸಂಬಂಧವನ್ನು ಹೊಂದಿವೆ.

**ವಿವರಣೆ :** ಹಿಂದಿನ ಓವೀಯಲ್ಲಿ ಭಕ್ತನು ತನ್ನ ಜಾಗ್ರತಾವಸ್ಥೆಯಲ್ಲಿ ಕಾಣುವ ವಿರಾಡ್ರೂಪದ ಅಭಿಮಾನಿಯಾಗಿ ವೈಶ್ವಾನರನನ್ನು ಕಾಣುತ್ತಾನೆ. ಹಾಗೆಯೇ ಓವೀಸಂ.216 ರಲ್ಲಿ ತನ್ನ ಸ್ಥೂಲ ಶರೀರದ ಅಭಿಮಾನಿಯಾದ 'ವಿಶ್ವ'ನನ್ನು ತಿಳಿದಿದ್ದಾನೆ. ಸೃಷ್ಟಿಯಲ್ಲಿ ವಿರಾಟನು ಸಮಷ್ಟಿ ಜಡ ಉಪಾಧಿಯಾಗಿದ್ದಾನೆ. ಆದರೆ, ಶರೀರ-ಮನಸ್ಸುಗಳು ಕೂಡ ವಿರಾಟ್‌ನ ಜೊತೆಯಲ್ಲೇ ಸೃಷ್ಟಿಯಾಗಿದ್ದು ಅವುಗಳ ಒಂದಕ್ಕೊಂದು ಸಂಬಂಧವನ್ನು ಈ ಓವೀಯಲ್ಲಿ ತಿಳಿಸಲಾಗಿದೆ. 'ವಿರಾಟ್' ಎಂಬುದು ವೈಶ್ವಾನರನ ಸಮಷ್ಟಿ ಜಡ ಉಪಾಧಿ (ಅಂಶಿ) ಯಾಗಿರುತ್ತದೆ. ಹಾಗೆಯೇ 'ವಿಶ್ವ'ನ ವ್ಯಷ್ಟಿ ಜಡ ಉಪಾಧಿ (ಅಂಶ) ಯು ಶರೀರವಾಗಿರುತ್ತದೆ. ಇವೆರಡನ್ನು 'ಅಂಶಿ'- (ಪೂರ್ಣ) 'ಅಂಶ' (ಭಾಗ) ವಾಗಿಯೂ ಪರಿಗಣಿಸಲಾಗಿದೆ.

**ಓ.ಸಂ.219 :** ವಿರಾಟ್ ಸ್ವರೂಪದ ಅಭಿಮಾನಿಯಾದ 'ವಿಶ್ವ'ನೇ ತಾನಾಗಿರುವುದರಿಂದ ಈ ರೀತಿ ಸ್ಥೂಲ ದೃಷ್ಟಿಯಿಂದ 'ನಿವೇದನಾ ಭಕ್ತನು' ನೋಡಿದಾಗ ಯಾವುದೇ ಅರ್ಪಣದ ಕೆಲಸವೇ ಇರುವುದಿಲ್ಲ.

**ವಿವರಣೆ :** ಹಿಂದಿನ ಓವೀಯಲ್ಲಿ 'ಜೀವ'ನ ಶರೀರ ಮತ್ತು ವಿರಾಟ್‌ಗಳು ಅಂಶ-ಅಂಶಿ ಸಂಬಂಧವನ್ನು ಹೊಂದಿರುವುದು ತಿಳಿಸಲಾಗಿದೆ. ಈ ಓವೀಯಲ್ಲಿ ಇವೆರಡರ, ಅಂದರೆ ಸಮಷ್ಟಿ ವಿರಾಟ್ ಹಾಗೂ ವ್ಯಷ್ಟಿ 'ಜೀವ'ನ ಶರೀರವು 'ನಿವೇದನಾ ಭಕ್ತ'ನ ವೃತ್ತಿಯಿಂದಲೇ ಇರುವಂತೆ ತೋರುತ್ತವೆ. ಆದುದರಿಂದ 'ತಾನೇ' ಅಂದರೆ 'ವಿಶ್ವ'ನೇ ಇವುಗಳ ಅಭಿಮಾನಿಯಾಗಿದ್ದಾನೆ. ಅಂದರೆ ಇವು 'ತನ್ನವೇ' ಆಗಿರುತ್ತವೆ. ಈ 'ಆತ್ಮನಿವೇದನ ಭಕ್ತಿ'ಯಲ್ಲಿ ಸರ್ವವನ್ನೂ ಭಗವಂತನಿಗೆ 'ಅರ್ಪಣ' ಮಾಡಬೇಕಾಗಿರುತ್ತದೆ. ಆದರೆ ಈ 'ಭಗವಂತ'ನೆಂದರೆ ಯಾರೆಂದು ಜಿಜ್ಞಾಸೆಯು ನಡೆದಿರುತ್ತದೆ. ಇದಕ್ಕೆ ಉತ್ತರವಾಗಿ ಕಣ್ಣಿಗೆ ಕಾಣುವ ಈ ಸಮಷ್ಟಿ ಜಡ ವಿಶ್ವವು ತನ್ನದೇ ಇರುತ್ತದೆ. ಹೀಗಿರುವಾಗ ಸ್ಥೂಲದೃಷ್ಟಿಯಿಂದ ನೋಡಿದಾಗ ಭಕ್ತನು ಹಾಗೂ ಭಗವಂತನು ಒಬ್ಬನೇ ಇರುವುದರಿಂದ 'ಅರ್ಪಣ'ದ ಕೆಲಸವೇ ಇರುವುದಿಲ್ಲ.

**ಓ.ಸಂ.220 :** ಆದರೆ ಒಮ್ಮೆ ದೇವರೆಂದು ತಿಳಿದುಕೊಂಡ ದೈವವನ್ನು (ವಿರಾಟ್) ದೇವರಲ್ಲವೆಂದು ಪರಿಗಣಿಸಬಾರದು. ಆದುದರಿಂದ ಪುನಃ ಅಂತರ್ಮುಖನಾಗಿ ನಾನು ನನ್ನೆಡೆಗೆ ನೋಡಿಕೊಂಡರೆ ನಾನು ಒಳಗಿರುವ ಸೂಕ್ಷ್ಮದೇಹವೆಂದು ತಿಳಿದು ಬರುತ್ತದೆ.

**ವಿವರಣೆ :** ಬಹಿರಂಗವಾದ ಈ ವಿರಾಟ್ ಹೆಸರಿನ ಜಡ ವಿಶ್ವವು ಅನಂತವೂ, ಅಗಾಧವೂ, ವಿಚಿತ್ರವೂ ಆಗಿದ್ದು ನನ್ನ ನಿಯಂತ್ರಣಕ್ಕೆ ಯಾವುದೂ ಸಾಧ್ಯವಿಲ್ಲವೆಂದು ತಿಳಿದು ನಾನು ಅಸಹಾಯಕನೆಂದು ತಿಳಿದು ಬರುತ್ತದೆ. ಆದ್ದರಿಂದ ಇದಕ್ಕೆ ನಾನೇ ಅಭಿಮಾನಿಯೆಂದೂ ಇದು ಭಗವಂತನಾಗಲು ಸಾಧ್ಯವಿಲ್ಲವೆಂದು-ತಿಳಿಯುವುದು ದುಡುಕುತನವಾಗುತ್ತದೆ. ಆದುದರಿಂದ ಸಮಷ್ಟಿ ವಿರಾಟ್‌ನನ್ನು ದೇವರಲ್ಲವೆಂದು ತಿಳಿದುಕೊಳ್ಳಬಾರದು. ಹೀಗಾಗಿ ಪುನಃ ಭಕ್ತನು ತನ್ನೊಳಗೆ ನೋಡಿಕೊಂಡಾಗ ಅವನಿಗೆ ಕಂಡದ್ದು ತನ್ನ ಸೂಕ್ಷ್ಮ ಶರೀರವು. ಮುಂದಿನ ಓವೀಗಳಲ್ಲಿ ಈ ಸೂಕ್ಷ್ಮಶರೀರದ ವಿವೇಚನೆಯು ಬಂದಿದೆ.

**ಓ.ಸಂ.221 :** ಹೀಗೆ ಅಂತರ್ಮುಖನಾದಾಗ ಭಕ್ತನಿಗೆ ಕಂಡದ್ದು ಸ್ವಪ್ನಾವಸ್ಥೆಯಾಗಿದೆ. ಆದರೆ ಈ ಸ್ವಪ್ನಾವಸ್ಥೆಯ ಅಭಿಮಾನಿಯಾಗಿರುವ 'ತೈಜಸ' ನಾಮದಿಂದ 'ನನ್ನನ್ನೇ' ಗುರುತಿಸಿದ್ದಾನೆ. ಈಗ ಆ ಅವಸ್ಥೆಯಲ್ಲಿಯೇ ಭಗವಂತನಿಗಾಗಿ ಹೊರಗೆ ನೋಡಿದಾಗ ಕಂಡದ್ದು ಹಿರಣ್ಯಗರ್ಭನು. ಸಮಷ್ಟಿ ಸೂಕ್ಷ್ಮ ಶರೀರವು (ಹಿರಣ್ಯಗರ್ಭ ) ಹಾಗೂ 'ಜೀವ' ನ ಸೂಕ್ಷ್ಮ ಶರೀರಕ್ಕೂ ಅಂಶ-ಅಂಶಿ ಸಂಬಂಧವಿರುವುದು.

**ವಿವರಣೆ :** ಈವರೆಗೆ ಭಕ್ತನು ತಾನು ವಿರಾಟ್ ಸ್ವರೂಪದ ಅಭಿಮಾನಿಯಾಗಿರುವುದರಿಂದ ಸ್ಥೂಲ ರೂಪದಲ್ಲಿ ವಿರಾಟ್ ಅಥವಾ ವಿರಾಜ್ ಎಂಬ ದೇವನು ತಾನೇ ಎಂಬುದು ಗೊತ್ತಾಗಿ ಅವನಿಗೆ ಯಾವ ಅರ್ಪಣದ ಅವಶ್ಯಕತೆಯೂ ಇಲ್ಲವೆಂದು ತೀರ್ಮಾನಿಸಿದ್ದಾನೆ. ಈಗ ಅಂತರ್ಮುಖನಾದ ಮನಸ್ಸಿನ ಸೃಷ್ಟಿಯು ಅಥವಾ ಸ್ವಪ್ನ ಸೃಷ್ಟಿಯು ತನ್ನದೇ ಆಗಿರುವುದರಿಂದ ಸ್ವಪ್ನದಲ್ಲಿರುವ 'ತೈಜಸ'ನು ಈ ಎಲ್ಲ ಸೃಷ್ಟಿಗೆ ಅಭಿಮಾನಿಯಾಗಿರುವುದರಿಂದ ತಾನೇ ಈ ಸೃಷ್ಟಿಗೆ ಒಡೆಯನೆಂಬುದು ತಿಳಿಯುತ್ತದೆ. ಈಗ ಆ ಮಾನಸಿಕ ಪ್ರಪಂಚದಲ್ಲಿ ಬಹಿರ್ಮುಖನಾಗಿ ಹೊರಗೆ ನೋಡಿದಾಗ ಅಲ್ಲೂ ಕೂಡ ಅನಂತವೂ ಹಾಗೂ ವಿಶಾಲವೂ ಆದ ಪ್ರಪಂಚವು ಕಂಡುಬರುತ್ತದೆ. ಅದನ್ನು 'ಹಿರಣ್ಯಗರ್ಭ'ವೆಂಬ ಹೆಸರಿನಿಂದ ಕರೆದಿದ್ದಾರೆ. ಅದು ಜಾಗ್ರತಿಯ ಜಗತ್ತಿನಂತೆ ಜಡವಾದರೂ ಕೂಡ ಸೂಕ್ಷ್ಮ ಸ್ವರೂಪದ್ದಿರುವುದು. ಆದುದರಿಂದ ಈ 'ಹಿರಣ್ಯಗರ್ಭ'ನು ಸಮಷ್ಟಿ ಸೂಕ್ಷ್ಮ ಶರೀರಿಯಾಗಿರುತ್ತಾನೆ ಹಾಗೂ 'ಜೀವ' ನ ವ್ಯಷ್ಟಿ ಸೂಕ್ಷ್ಮಶರೀರವು ಹಿರಣ್ಯ ಗರ್ಭನ ಜೊತೆಗೆ ಅಂಶ-ಅಂಶಿ ಸಂಬಂಧವನ್ನೂ ಹೊಂದಿರುತ್ತದೆ.

**ಓ.ಸಂ.222 :** ಸ್ವಪ್ನ ಪ್ರಪಂಚವು ಸೂಕ್ಷ್ಮವಾದ ಅಪಂಚೀಕೃತ ಪಂಚಭೂತಗಳಿಂದ ಮಾಡಲ್ಪಟ್ಟಿದೆ ಎಂದು ತಿಳಿಯುತ್ತದೆ. ನಮ್ಮ ಸ್ವಪ್ನಾವಸ್ಥೆಯು ಜಗತ್ತಿನ 'ಸ್ಥಿತಿ'ಯ ಅಂಶವಾಗಿರುತ್ತದೆ.

**ವಿವರಣೆ :** ಇಡೀ ಸೂಕ್ಷ್ಮರೂಪದ ಸ್ವಪ್ನ-ಪ್ರಪಂಚವು ಮಾನಸಿಕ ಸೃಷ್ಟಿಯಾಗಿರುವುದರಿಂದ ಅದೆಲ್ಲವೂ ಸೂಕ್ಷ್ಮರೂಪದ ಅಪಂಚೀಕೃತ ಭೂತಗಳಿಂದ ಮಾಡಲ್ಪಟ್ಟಿರಲೇಬೇಕು. ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ ಎಂಬ ಐದು ಸೂಕ್ಷ್ಮವಾದ ಕಣ್ಣಿಗೆ ಕಾಣದ ಅಪಂಚೀಕೃತಭೂತಗಳಾಗಿವೆ. ಇವೇ ಪಂಚತನ್ಮಾತ್ರೆಗಳು.

ಇವುಗಳಿಂದಲೇ ಸೂಕ್ಷ್ಮ ಶರೀರವಾಗಲೀ, ಹಿರಣ್ಯಗರ್ಭವಾಗಲೀ ಮಾಡಲ್ಪಟ್ಟಿರುತ್ತದೆ. ನಮ್ಮ ಜಾಗ್ರತ್ತಿನಲ್ಲಿ ನಮ್ಮ ಇಂದ್ರಿಯಗಳ ಸಂಯೋಗದಿಂದ ಉಂಟಾಗುವ ತಿಳುವಳಿಕೆಯೆಲ್ಲವೂ ಜಗತ್ತಿನ 'ಸೃಷ್ಟಿ'ಗೆ ಸಮನಾಗಿದೆ. ಏಕೆಂದರೆ ಇದೆಲ್ಲವೂ ಹೊಸದಾಗಿ ಸೃಷ್ಟಿಯಾಗಿರುವುದಾಗಿರುತ್ತದೆ. ಆದರೆ ಇದೆಲ್ಲವೂ ವಾಸನಾ ರೂಪದಲ್ಲಿ ಚಿತ್ತದಲ್ಲಿ ಸೇರಿಹೋಗಿ ಆಗಾಗ ನೆನಪಿಗೂ ಹಾಗೂ ಸ್ವಪ್ನದಲ್ಲೂ ಬರುತ್ತಿರುತ್ತವೆ. ಹಾಗೆ ಈ ವಾಸನೆಗಳು ಶಾಶ್ವತವಾಗಿದ್ದು ಆಗಾಗ ಹಿಂದೆ ನಡೆದು ಹೋದ ಸಂಗತಿಯನ್ನು ಸ್ಮರಣೆಗೆ ತರುತ್ತಿರುತ್ತವೆ. ಈ ಅರ್ಥದಲ್ಲಿ ಸ್ವಪ್ನವು 'ಸ್ಥಿತಿ' ಸ್ವರೂಪವನ್ನು ತಿಳಿಸುತ್ತದೆ. 'ವಿರಾಟ್' ಅವಸ್ಥೆಯು ಜಗತ್ತಿನ ಸೃಷ್ಟಿಯನ್ನು ಹೇಳಿದರೆ ಹಿರಣ್ಯಗರ್ಭಾವಸ್ಥೆಯು ಜಗತ್ತಿನ ಸ್ಥಿತಿಯನ್ನು ಹೇಳುತ್ತದೆ.

**ಓ.ಸಂ. 223 :** ಜಗತ್ತಿನ ಸ್ಥಿತಿಯೂ ಹಾಗೂ ಸ್ವಪ್ನಾವಸ್ಥೆಯೂ ಒಂದಕ್ಕೊಂದು ಸಮಾನವಾಗಿರುತ್ತವೆ. ಸಮಷ್ಟಿ ಸೂತ್ರಾತ್ಮ ಮತ್ತು ತೈಜಸರಲ್ಲಿಯೂ ಪರಸ್ಪರ ಐಕ್ಯವಿರುತ್ತದೆ.

**ವಿವರಣೆ :** ಜಗತ್ತು ಮೊದಲು 'ಸೃಷ್ಟಿ'ಯನ್ನೂ ನಂತರ 'ಸ್ಥಿತಿ'ಯನ್ನೂ ಕೊನೆಯಲ್ಲಿ ಅದು ನಾಶದ ಹಾದಿಯಲ್ಲಿ 'ಲಯ'ವಾಗುತ್ತದೆ. ಹಾಗೆಯೇ 'ಜೀವ'ರುಗಳ ಜಾಗ್ರತಾವಸ್ಥೆಯನ್ನು ಸೃಷ್ಟಿಗೆ ಹೋಲಿಸಬಹುದು. ಏಕೆಂದರೆ ಇಂದ್ರಿಯ ಸಂವೇದನೆಯಿಂದ ಉಂಟಾದ ಪ್ರತಿಯೊಂದು ಜ್ಞಾನವೂ ಹೊಸಸೃಷ್ಟಿಯೇ ಆಗಿರುತ್ತದೆ. ಆದರೆ ಅದು ಅಷ್ಟೇ ಕ್ಷಣಿಕವಾಗಿ ನಾಶವಾಗಿ ವಾಸನಾರೂಪದಲ್ಲಿ ಉಳಿಯುತ್ತದೆ ಮತ್ತು ಈ ವಾಸನೆಗಳು ಅಸಂಖ್ಯಾತವಾಗಿ ಆಗಾಗ ಸ್ಮರಣೆ ರೂಪದಲ್ಲಿ ಬರುವುದು. ಅದರ ಬಗ್ಗೆ ಕನಸನ್ನು ಕಾಣುವುದು, ಆಗಾಗ ಚಿಂತನೆಯನ್ನು ನಡೆಸುವುದು ಮುಂತಾದವುಗಳು ಸಾಧ್ಯವಾಗುವುದರಿಂದಲೇ ಸ್ವಪ್ನವನ್ನು 'ಸ್ಥಿತಿ'ಗೆ ಹೋಲಿಸಿದ್ದಾರೆ. ಅಂದರೆ ಅದು ನಾಶವನ್ನು ಹೊಂದುವುದಿಲ್ಲ. ತೈಜಸನು ಇದೇ ಸ್ವಪ್ನ ಪ್ರಪಂಚದ ಅಭಿಮಾನಿಯಾಗಿದ್ದಾನೆ. ಹಾಗೆಯೇ ಸೂತ್ರಾತ್ಮನು ಸಮಸ್ತ ಸೂಕ್ಷ್ಮ ಪ್ರಪಂಚಕ್ಕೆ ಅಂದರೆ ಹಿರಣ್ಯಗರ್ಭಕ್ಕೆ ಅಭಿಮಾನಿಯಾಗಿರುತ್ತಾನೆ. ಅಂದರೆ ಹಿರಣ್ಯಗರ್ಭವೇ ನಾನಾಗಿದ್ದೇನೆ ಎಂಬ ಭಾವವಿರುತ್ತದೆ. ಮನಸ್ಸಿನ ಸೃಷ್ಟಿಯೆಲ್ಲವೂ ಅಪಂಚೀಕೃತ ಭೂತಗಳಿಂದಾಗಿದ್ದು ತೈಜಸನ ವಿಸ್ತೃತ ರೂಪವೇ ಸೂತ್ರಾತ್ಮನಾಗಿರುತ್ತಾನೆ. ವ್ಯಷ್ಟಿ–ಸಮಷ್ಟಿ ಜಡ ಉಪಾಧಿಗಳಲ್ಲಿ ಭೇದವಿದ್ದರೂ ತೈಜಸಾತ್ಮ ಹಾಗೂ ಸೂತ್ರಾತ್ಮರಲ್ಲಿ ಭೇದವಿರಲು ಸಾಧ್ಯವಿಲ್ಲ.

**ಓ.ಸಂ. 224 :** ಈ ರೀತಿ ಸೂಕ್ಷ್ಮದೃಷ್ಟಿಯಿಂದ ನೋಡಿದರೂ ಕೂಡ ನಾನು ಭಗವಂತನಿಗಿಂತ ಭಿನ್ನವಿಲ್ಲ. ಆದ್ದರಿಂದ ಆತ್ಮನಿವೇದನೆಯನ್ನು ಮಾಡಲು ಬರುವುದಿಲ್ಲ.

**ವಿವರಣೆ :** ಹಿಂದೆ ಸ್ಥೂಲದೃಷ್ಟಿಯಿಂದ ನೋಡಿದಾಗ 'ವಿಶ್ವ'ನೆಂಬ ಜಾಗ್ರತಾಭಿಮಾನಿಯಾದ ನಾನೇ ಸಮಷ್ಟಿ ರೂಪದಲ್ಲಿ ಕಾಣುವ ವಿರಾಟ್‌ನ ಅಭಿಮಾನಿಯಾಗಿರುವೆನು. ಇಲ್ಲಿ ವ್ಯಷ್ಟಿ ರೂಪದ ವಿಶ್ವನನ್ನು ಹಾಗೂ ಸಮಷ್ಟಿ ರೂಪದ ವಿರಾಜ್ ( ವಿರಾಟ್ ನ ಅಭಿಮಾನಿ ) ನನ್ನು ಐಕ್ಯ ಮಾಡಬಹುದು. ಆದುದರಿಂದ ದೇವನಿಗೆ

ಆತ್ಮನಿವೇದನೆಯನ್ನು ಮಾಡಲು ಆಗವುದಿಲ್ಲ. ಸೂಕ್ಷ್ಮ ದೃಷ್ಟಿಯಿಂದ ನೋಡಿದಾಗಲೂ ಅದೇ ರೀತಿ ಇರುತ್ತದೆ. ಇಡೀ ಸ್ವಪ್ನ ಪ್ರಪಂಚಕ್ಕೆ ನಾನೇ ತೈಜಸನಾಗಿ ಅದರ ಅಭಿಮಾನಿಯಾಗಿರುವುದರಿಂದ ಅದನ್ನೇ ಸೂತ್ರಾತ್ಮನೆಂದು ತೆಗೆದುಕೊಳ್ಳಬೇಕು. ಏಕೆಂದರೆ ಇಡೀ ಅನಂತ ಸ್ವರೂಪದ ಸ್ವಪ್ನ ಸಾಮ್ರಾಜ್ಯವು ನನ್ನ ಮಾನಸ ಸೃಷ್ಟಿಯೇ ಆಗಿದ್ದು ಇಡೀ ಹಿರಣ್ಯಗರ್ಭವೇ ಆಗಿ ಸೂಕ್ಷ್ಮವಾದ ಅಪಂಚೀಕೃತ ರೂಪದಲ್ಲಿ ಮಾನಸ ಸೃಷ್ಟಿಯೇ ಆಗಿರುತ್ತದೆ. ಹೀಗಾಗಿ ಹಿರಣ್ಯಗರ್ಭವೆಂಬ ಸಮಷ್ಟಿ ಜಡ ಸಮೂಹದ ಅಭಿಮಾನಿಯಾದ ಸೂತ್ರಾತ್ಮನೂ ಮತ್ತು ಸ್ವಪ್ನದ ಮಾನಸಿಕ ದೇಹದ ಅಭಿಮಾನಿಯೂ ಆದ ನಾನು 'ತೇಜಸ್', ಬೇರೆ ಬೇರೆ ಆಗಿರಲು ಸಾಧ್ಯವಿಲ್ಲ. ನನ್ನನ್ನೇ ಸಮಷ್ಟಿ ಉಪಾಧಿಯಲ್ಲಿ ಭಗವಂತನೆಂದು ಕರೆಯುತ್ತಿದ್ದೇನೆ ಅಷ್ಟೇ. ಆದುದರಿಂದ ನನಗೆ ನಾನೇ ಆತ್ಮನಿವೇದನೆಯನ್ನು ಮಾಡಿಕೊಳ್ಳಲು ಬರುವುದಿಲ್ಲ.

**ಓ.ಸಂ.225 :** ಈಗ ಭಕ್ತನು ತನ್ನೊಳಗೆ ಪುನಃ ನೋಡಿಕೊಂಡರೆ ಆಗ ಸುಷುಪ್ತಿ ಅವಸ್ಥೆಯಲ್ಲಿ ಆತ್ಮದ ಅಜ್ಞಾನವನ್ನು ಮತ್ತು 'ಪ್ರಾಜ್ಞ'ನನ್ನು ಕಾಣಲಾಗುವುದು.

**ವಿವರಣೆ :** ಭಕ್ತನು ಭಗವಂತನ ಶೋಧನೆಯಲ್ಲಿದ್ದಾನೆ. ಆದುದರಿಂದ ಪುನಃ ಅಂತರ್ಯದಲ್ಲಿ ನೋಡಿಕೊಳ್ಳುತ್ತಿದ್ದಾನೆ. ಅವನಿಗೆ ಪ್ರತಿದಿನ ಸ್ವಪ್ನವನ್ನಲ್ಲದೇ ಕನಸಿಲ್ಲದ ನಿದ್ರಾವಸ್ಥೆಯು ಅಂದರೆ ಸುಷುಪ್ತಿಯ ಅವಸ್ಥೆಯು ಇರುವುದು ತಿಳಿಯಿತು. ಅಲ್ಲಿಯ ಅನುಭವವನ್ನು ನೋಡಿದಾಗ ಅದು ಅವನಿಗೆ 'ಏನೊಂದೂ ತಿಳಿಯದ ಅಜ್ಞಾನಾವಸ್ಥೆಯೆಂದು' ತಿಳಿದು ಬಂದಿತು. ಆ ಅವಸ್ಥೆಯಲ್ಲಿ ದಶ ಇಂದ್ರಿಯಗಳು ಮಾತ್ರವಲ್ಲದೇ ಮನಸ್ಸೂ ಕೂಡ ವಿಶ್ರಾಂತಿಯನ್ನು ಪಡೆಯುತ್ತಿರುತ್ತವೆ. ಅವುಗಳ ವೃತ್ತಿಯೇ ಇಲ್ಲದ ಮೇಲೆ ಜಗತ್ತಾಗಲೀ ಅಥವಾ ನಾನಿರುವುದಾಗಲೀ ತಿಳಿಯಲು ಸಾಧ್ಯವಿರುವುದಿಲ್ಲ. ಎದ್ದಮೇಲೆ 'ನಾನು ಈವರೆಗೆ ನಿದ್ದೆಮಾಡಿದ್ದೆ; ನನಗೆ ಏನೂ ತಿಳಿಯಲಿಲ್ಲ' ಎಂದು ಹೇಳುವುದರಿಂದ ನಾನೇ ಅಜ್ಞಾನ ಸ್ವರೂಪನಾಗಿದ್ದೆನೆಂದೂ ಮತ್ತು ಈ ಅವಸ್ಥೆಯಲ್ಲಿ ನನ್ನನ್ನೇ 'ಪ್ರಾಜ್ಞ' ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತೆಂದೂ ಹೇಳಲಾಗಿದೆ.

**ಓ.ಸಂ.226 :** ಭಕ್ತನು ದೇವನ ಕಡೆ ನೋಡಿದಾಗ ಅವನಿಗೆ ಅಲ್ಲಿ ಮಾಯೆಯು ಕಂಡಳು. ಇಲ್ಲಿ ಕಾರಣತ್ವದಲ್ಲಿ ಐಕ್ಯವೇ ಕಂಡುಬರುತ್ತದೆ.

**ವಿವರಣೆ :** ಭಕ್ತನ ಸುಷುಪ್ತಿ ಅನುಭವವು ವ್ಯಷ್ಟಿ ರೂಪದ್ದಾಗಿರುವುದು. ಇದೇ ರೀತಿ ಇಡೀ ಜಗತ್ತೇ ಪ್ರಳಯದಲ್ಲಿ ಸಮಷ್ಟಿ ಅಜ್ಞಾನದಲ್ಲಿ ಇರುತ್ತದೆ. ಅದನ್ನೇ ಮಾಯೆ ಅಥವಾ 'ಅವ್ಯಾಕೃತ'ವೆಂದು ಕರೆಯುತ್ತಾರೆ. ಸುಷುಪ್ತಿಯಿಂದ ಜಾಗ್ರತ-ಸ್ವಪ್ನಗಳು ಹೊರಗೆ ಬಂದು ಪುನಃ ಸುಷುಪ್ತಿಯಲ್ಲೇ ಅಂದರೆ ಅಜ್ಞಾನದಲ್ಲೇ ಲಯವಾಗುವುವು. ಹಾಗೆಯೇ ಅವ್ಯಾಕೃತದಿಂದ ಈ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳು ಅತ್ಯಂತ ನಿಖರವಾಗಿ ನಡೆಯುವುವು. ವ್ಯಷ್ಟಿಯಲ್ಲಿ ಅಜ್ಞಾನದ ರೂಪವೇ ಆಗಿರುವ 'ಪ್ರಾಜ್ಞ'ನೇ ಸಮಷ್ಟಿಯಲ್ಲಿ ಅವ್ಯಾಕೃತದ ಅಭಿಮಾನಿಯಾಗಿರುವ 'ಅಕ್ಷರ' ನೆಂದೇ ಹೇಳಬಹುದು. ಹೇಗೆಂದರೆ ಸುಷುಪ್ತಿಯ ಹಾಗೂ ಪ್ರಳಯದ ಅನುಭವವು ಒಂದೇ ಆಗಿರುತ್ತದೆ.

ಅಲ್ಲದೇ 'ಜೀವ'ವು ಪ್ರತಿ ಜಾಗ್ರತಿ-ಸ್ವಪ್ನಗಳಲ್ಲಿ ಹೇಗೆ ಯಾವಾಗಲೂ ಇರುವಂತೆ ಕಾಣಿಸುತ್ತದೆಯೋ ಹಾಗೆಯೇ ಇಡೀ ಬ್ರಹ್ಮಾಂಡವು ಹಾಗೂ ಹಿರಣ್ಯಗರ್ಭವು ಮೊದಲಿನಂತೆಯೇ ಕಾಣುತ್ತವೆ. ಇಲ್ಲಿ ಪ್ರಾಜ್ಞನ ವಿಸ್ತಾರ ರೂಪವೇ ಅಕ್ಷರನಾಗಿದ್ದು ಎರಡು ಮೂಲಕಾರಣಗಳು ಒಂದೇ ಎಂದು ಕಾಣುತ್ತವೆ. ಏಕೆಂದರೆ ವ್ಯಷ್ಟಿಯಲ್ಲಿ ಪ್ರತಿ 'ಜೀವ'ನು ಕಾಣುವ ಬ್ರಹ್ಮಾಂಡವು ಸಮಷ್ಟಿ ಬ್ರಹ್ಮಾಂಡವೇ ಆಗಿದ್ದು ಅದು ಪ್ರತಿ ಸಲ ಎಚ್ಚರವಾದಾಗಲೂ ಅದೇ ಬ್ರಹ್ಮಾಂಡವು ನಮಗೆ ತೋರುತ್ತಿರುವುದು. ಹೀಗಾಗಿ ಪ್ರಾಜ್ಞ ಮತ್ತು ಅಕ್ಷರರ ಐಕ್ಯವನ್ನು ಅರ್ಥಮಾಡಿ ತೋರಿಸಬಹುದು.

**ಓ.ಸಂ.227 :** ಸುಷುಪ್ತಿಯಲ್ಲಿ ಹೇಗೆ ಎಲ್ಲ ಜೀವಸೃಷ್ಟಿಯೂ ಲಯವಾಗುತ್ತದೆಯೋ ಹಾಗೆಯೇ ಬ್ರಹ್ಮಾಂಡವು ಲಯವಾದರೆ ಅದೇ ಪ್ರಳಯಾವಸ್ಥೆಯಾಗಿರುತ್ತದೆ. ಹೀಗಾಗಿ 'ಅಕ್ಷರ'ನೇ ಪ್ರಾಜ್ಞನೆಂಬುದು ನಿಶ್ಚಿತವಾಗುತ್ತದೆ. ಇವೆರಡಕ್ಕೂ ಭೇದವಿರುವುದಿಲ್ಲ.

**ವಿವರಣೆ :** ಸುಷುಪ್ತಿಯಲ್ಲಿ ಸಕಲ ಜೀವ-ಜಗತ್ತುಗಳು ಲಯವಾಗುತ್ತವೆ. ಅಲ್ಲಿ ಏನೂ ಇರುವುದಿಲ್ಲವೆಂದು ತಿಳಿಯಲೂ ಕೂಡ ಯಾರೂ ಇರುವುದಿಲ್ಲ. ಅಲ್ಲಿಂದ ಪುನಃ ಸ್ವಪ್ನ-ಜಾಗ್ರತಾವಸ್ಥೆಗಳು ಹುಟ್ಟುವುವು ಹಾಗೂ ಕೊನೆಗೆ ಅಲ್ಲಿಯೇ ಲಯವಾಗುತ್ತವೆ. ಆದುದರಿಂದ ಸುಷುಪ್ತಿಯಲ್ಲಿರುವ ಅಜ್ಞಾನವನ್ನೇ ಮೂಲಕಾರಣವೆಂದು ಪರಿಗಣಿಸುತ್ತಾರೆ. ಇದೇ ರೀತಿ ಪ್ರಳಯದಲ್ಲಿ ಇಡೀ ಬ್ರಹ್ಮಾಂಡವೇ ಚತುರ್ಮುಖ ಬ್ರಹ್ಮನ ಸಹಿತ ಇರುವ ಸಕಲವೂ ಅವ್ಯಾಕೃತದಲ್ಲಿ ಅಂದರೆ ಸಮಷ್ಟಿ ಅಜ್ಞಾನದಲ್ಲಿ ಲಯವಾಗುತ್ತದೆ. ಪುನಃ ಅಲ್ಲಿಂದ ಸಕಲವೂ ಸೃಷ್ಟಿಯಾಗುತ್ತದೆ. ನಂತರ ಪುನಃ ಅಲ್ಲಿಯೇ ಲಯವಾಗುತ್ತದೆ. ಸಮಷ್ಟಿ ಕಾರಣವಾದ ಅಜ್ಞಾನವೇ ಮಾಯೆಯಾಗಿರುತ್ತದೆ. ಪ್ರಳಯದ ಹಾಗೂ ಸುಷುಪ್ತಿಯ ಅವಸ್ಥೆಗಳು ಒಂದೇ ಸಮನೆ ಇರುತ್ತವೆ. ಹಾಗೆಯೇ ಅವುಗಳ ಅಭಿಮಾನಿಯಾಗಿರುವ 'ಅಕ್ಷರ' ಹಾಗೂ 'ಪ್ರಾಜ್ಞ'ರ ಅನುಭವಗಳು ಹಾಗೂ ಭೋಗಗಳು ಒಂದೇ ಆಗಿರುತ್ತವೆ. ಅವರುಗಳ ಜಡ ಉಪಾಧಿಗಳು ಬೇರೆ-ಬೇರೆ ಇರುವುದರಿಂದ ಅವರಿಬ್ಬರೂ ಬೇರೆ-ಬೇರೆ ಕಾಣುತ್ತಾರೆಯೇ ಹೊರತು ಸ್ವರೂಪತಃ ಅವರಿಬ್ಬರೂ ಒಂದೇ ಆಗಿರುತ್ತಾರೆ.

**ಓ.ಸಂ.228 :** ಈ ರೀತಿಯಲ್ಲಿ ಭಕ್ತನು ಕಾರಣದ ದೃಷ್ಟಿಯಿಂದ ನೋಡಿದಾಗಲೂ ಅವನು ಭಗವಂತನಿಗಿಂತ ಭಿನ್ನನಿಲ್ಲ. ಹೀಗಿದ್ದಾಗ ಆತ್ಮನಿವೇದನವನ್ನು ಮಾಡಲು ಅಲ್ಲಿ ಯಾರೂ ಇಲ್ಲ ಹಾಗೂ ಯಾವುದೇ ರೀತಿಯಲ್ಲೂ ಸಾಧ್ಯವಿಲ್ಲ.

**ವಿವರಣೆ :** ಹಿಂದಿನ ಓವೀಗಳಲ್ಲಿ ನೋಡಿದ ಪ್ರಕಾರ ಎಲ್ಲದಕ್ಕೂ ಕಾರಣವಾದ ಮಾಯೆಯು ಹಾಗೂ ಅದರ ಅಭಿಮಾನಿಯಾದ 'ಅಕ್ಷರ'ನು ವ್ಯಷ್ಟಿಯಲ್ಲಿ ಸುಷುಪ್ತಿಯ 'ಪ್ರಾಜ್ಞ' ನಿಗೆ ಸಮಾನವಾಗಿಯೇ ತೋರುತ್ತಾನೆ. ಇಬ್ಬರ ಅನುಭವವಾಗಲೀ ಅಥವಾ ಭೋಗವಾಗಲೀ ಸಮನಾಗಿರುವುದರಿಂದ ಇಬ್ಬರಲ್ಲಿ ಕೇವಲ ಉಪಾಧಿ ಭೇದವಿರಬಹುದೇ ಹೊರತು ಸ್ವರೂಪದಿಂದಲ್ಲ. ಅಂದರೆ ಇಬ್ಬರ ಆತ್ಮವೂ ಒಂದೇ ಆಗಿರುತ್ತದೆ. ಕಾರಣ

ದೃಷ್ಟಿಯಿಂದ ವ್ಯಷ್ಟಿಗೂ-ಸಮಷ್ಟಿಗೂ ಯಾವ ಭೇದವಿರುವುದಿಲ್ಲವೆಂದು ಇದರಿಂದ ತಿಳಿಯುತ್ತದೆ. ಹಿಂದೆ ಹೀಗೆಯೇ ಕಾರ್ಯದೃಷ್ಟಿಯಿಂದಲೂ ವ್ಯಷ್ಟಿಯ 'ವಿಶ್ವ'ನು ಸಮಷ್ಟಿಯ 'ವೈರಾಜ್'ನ ಜೊತೆಗೂ ಹಾಗೂ ವ್ಯಷ್ಟಿಯ ತೈಜಸನು ಸಮಷ್ಟಿಯ ಸೂತ್ರಾತ್ಮನ ಜೊತೆಗೂ ತಾದಾತ್ಮವಾಗಿರುವುದನ್ನು ನೋಡಿದೆವು. ಹೀಗೆ ಸಕಲ ದೃಷ್ಟಿಯಿಂದಲೂ ಭಕ್ತನು ಹಾಗೂ ಭಗವಂತನು ಒಂದೇ ಆಗಿರುವುದು ಕಂಡು ಬಂದಿರುತ್ತದೆ. ಆದುದರಿಂದ 'ಆತ್ಮನಿವೇದನ'ವು ಯಾವರೀತಿಯಲ್ಲೂ ಸಾಧ್ಯವಾಗದ ಕೆಲಸವಾಗಿರುತ್ತದೆ. ಹೀಗೆ ಭಗವಂತನು ಯಾರೆಂದು ತಿಳಿದುಕೊಂಡು ಆತ್ಮನಿವೇದನವನ್ನು ಮಾಡಬೇಕು.

ಓ.ಸಂ.229 : ಭಕ್ತನು ಪುನಃ ಅಂತರ್ಮುಖನಾಗುತ್ತಾನೆ ಹಾಗೂ 'ನಾನು ಬ್ರಹ್ಮನಿದ್ದೇನೆ' ಎಂಬ ಬ್ರಹ್ಮಸ್ಫುರಣವೂ ಕೂಡ ಲೀನವಾಗಿರುವಂತಹ ಅವಸ್ಥೆಯನ್ನು ತಲುಪುತ್ತಾನೆ. ಅಲ್ಲಿ ಭಾನಾಭಾನಗಳಿರುವುದಿಲ್ಲ. ಅದು ಕೇವಲ ಅಖಂಡ ಅದ್ವೈತ ಸ್ಥಿತಿಯಾಗಿರುತ್ತದೆ.

ವಿವರಣೆ : ಭಕ್ತನು ಪುನಃ ಅಂತರ್ಮುಖನಾಗುತ್ತಾನೆ ಜಾಗ್ರತ-ಸ್ವಪ್ನ-ಸುಷುಪ್ತಿ ಅವಸ್ಥೆಗಳನ್ನು ಮೀರಿ ತುರೀಯಾವಸ್ಥೆಯನ್ನು ಮೀರಿ ಅಲ್ಲಿನ ಸ್ಥಿತಿಯನ್ನು ಅವಲೋಕಿಸುತ್ತಾನೆ. 'ನಾನು ಬ್ರಹ್ಮನಿದ್ದೇನೆ' ಎಂಬ ಅವಸ್ಥೆಯನ್ನು ಮೀರಿ ಹೋಗುತ್ತಾನೆ. ಅಲ್ಲಿ ಯಾವ ದ್ವೈತಕ್ಕೂ ಅವಕಾಶವಿರುವುದಿಲ್ಲ. ಅಲ್ಲಿ ಯಾವ ತೋರಿಕೆಯೂ ಇರುವುದಿಲ್ಲ. ಹೀಗೆ ಯಾವುದಾದರೂ ತೋರಿಕೆಯ ಹಿನ್ನಲೆಯಲ್ಲಿ ಮಾತ್ರ ಅದರ ತೋರಿಕೆಯ ಅಭಾವವು ತೋರಬಹುದು. ಈ ಸ್ಥಿತಿಯಲ್ಲಿ ತೋರಿಕೆಯು (ಭಾನ) ಅದರ ಅಭಾವವೂ (ಅಭಾನ) ಎರಡೂ ಇಲ್ಲದ ಕೇವಲ ಅದ್ವೈತ ಸ್ಥಿತಿಯು ಅಲ್ಲಿ ಇರುತ್ತದೆ. ಎಲ್ಲವೂ ಲಯವಾಗಿ ಏನೂ ಉಳಿದಿರುವುದಿಲ್ಲ. ಅಲ್ಲಿ ಕೇವಲ ತಾನೇ ತಾನಾಗಿ ಇರುವನು. ಅವನೇ ಭಗವಂತನಾಗಿ ಬಿಟ್ಟಿದ್ದಾನೆ. ಅವನನ್ನು ಬಿಟ್ಟರೆ ಬೇರೆ ಏನೂ ಇರುವುದಿಲ್ಲ.

ಓ.ಸಂ.230 : ಈ ಅವಸ್ಥೆಯಲ್ಲಿ ಕೇವಲ ತಾನೇ ತಾನಾಗಿಯೇ ಉಳಿಯುವನು. ಇಲ್ಲಿ ಆತ್ಮನೆಂಬುದಾಗಲೀ ಅಥವಾ ಪೂರ್ಣತ್ವವೆಂಬುದಾಗಲೀ ಇರುವಂತಿಲ್ಲ. ಅಲ್ಲಿ ಸಹಜವಾಗಿಯೇ ಏಕತ್ವವು ಇರುತ್ತದೆ.

ವಿವರಣೆ : ಈ ಅವಸ್ಥೆಯಲ್ಲಿ ಇಂತಹದ್ದೆಂದು ಹೇಳಲು ಏನೂ ಉಳಿದಿರುವುದಿಲ್ಲ. ಅಲ್ಲಿ ಕೇವಲ ತಾನು ಮಾತ್ರ ಉಳಿದಿರುತ್ತಾನೆ. ದೇಶ-ಕಾಲ-ವಸ್ತುವಿನಿಂದ ಮಿತಿಯನ್ನು ಹೊಂದಿರುವ ಯಾವುದಕ್ಕೂ ಅಲ್ಲಿ ಸ್ಥಾನವಿರುವುದಿಲ್ಲ. ಅಲ್ಲಿ ಕೇವಲ ನಿರಪೇಕ್ಷವೂ, ಅದ್ವಯವೂ ಹಾಗೂ ಆನಂದ ಪರಿಪೂರ್ಣನೂ ಆದ ತಾನೊಬ್ಬನೇ ಅಲ್ಲಿರುತ್ತಾನೆ. ಅದನ್ನು ಆತ್ಮನೆಂಬುದಾಗಲೀ ಅಥವಾ ಪೂರ್ಣತ್ವವೆಂಬುದಾಗಲೀ ಹೇಳಲಾಗಲು ಸಾಧ್ಯವಿಲ್ಲ. ಏಕೆಂದರೆ ಈ ಎಲ್ಲ ಪದಗಳು ಸಾಪೇಕ್ಷವಾಗಿರುತ್ತವೆ. ಅಂದರೆ ಒಂದಕ್ಕೆ ಹೋಲಿಸಿ ಹೀಗೆ ಹೇಳಬಹುದಾಗಿರುತ್ತದೆ. ಅಲ್ಲಿ ಯಾವುದಾದರೂ ಇದೆ (ಭಾವ) ಎಂಬ ಕಲ್ಪನೆ ಬಂದಾಗ ಮಾತ್ರ ಅದರ ಇಲ್ಲದಿರುವಿಕೆಯ (ಅಭಾವ) ಕುರಿತು ಚಿಂತಿಸಬಹುದು. ಉದಾಹರಣೆಗೆ ಜಗತ್ತು ಇರುವ ಕಲ್ಪನೆ ಬಂದಾಗ

ಮಾತ್ರ ಅವರ ಇಲ್ಲದಿರುವಿಕೆಯ ಕಲ್ಪನೆಯು ಬರಬಹುದಾಗಿರುತ್ತದೆ. ಅಲ್ಲಿ 'ನಾನು'ಎನ್ನಲು ಬರದ ನನ್ನ ಸಮಷ್ಟಿ ಅರಿವು ಮಾತ್ರ ಉಳಿದು ಸಹಜವಾಗಿಯೇ ಏಕತ್ವವು ಸಿದ್ಧವಾಗುತ್ತದೆ.

**ಓ.ಸಂ.231 :** ಹೀಗೆ ಆತ್ಮತ್ವದಿಂದ ಭಗವಂತನನ್ನು ಹುಡುಕಲು ಹೋದಾಗ ಸೃಷ್ಟಿಸಿದ್ದೆಲ್ಲವೂ ತಾನೇ ಅಭಾವಹೊಂದಿತು. ಅಲ್ಲದೇ ಭಕ್ತನೇ ಭಗವಂತನೆಂದು ದೃಢಪಟ್ಟಿತು. ಆದುದರಿಂದ ನಿವೇದನವನ್ನು ಮಾಡುವುದು ಸಾಧ್ಯವಿಲ್ಲ.

**ವಿವರಣೆ :** ಭಕ್ತನು ಆತ್ಮನನ್ನು ಹುಡುಕಲು ಅಂತರ್ಮುಖನಾದಾಗ ಇಡೀ ಜೀವ-ಜಗತ್ತುಗಳ ಸಮೂಹವು ತನಗೆ ತಾನೇ ನಾಶವಾಗಿ ಅಲ್ಲಿ ಕೇವಲ ತಾನೊಬ್ಬನೇ ಉಳಿಯುವನು. ಅಲ್ಲಿ ತನ್ನ ವಿನಃ ಯಾವುದೇ ದ್ವೈತಭಾವನೆಗೆ ಅವಕಾಶವೇ ಇರುವುದಿಲ್ಲ. ಅದೊಂದು ಸಮಷ್ಟಿ ಅರಿವಿನ ಪ್ರವಾಹವಾಗಿ ಆನಂದದ ನೆಲೆಯಾಗಿರುತ್ತದೆ. ಅಲ್ಲಿ ಲೌಕಿಕ 'ನಾನು' ಇರದಿದ್ದರೂ ನನ್ನದೇ ಅರಿವು ಮಾತ್ರ ಎಲ್ಲ ಕಡೆ ಓತ-ಪ್ರೋತವಾಗಿರುತ್ತದೆ. ಆ ಚೈತನ್ಯ ರಾಶಿಯ ಆನಂದ ಸ್ವರೂಪವು ತಾನೇ ಆಗಿರುತ್ತದೆ. ಆ ಅದ್ವೈತ ದರ್ಶನವು ಭಗವಂತನ ದರ್ಶನವೂ ಆಗಿರುತ್ತದೆ. ತಾನು ಸ್ವರೂಪತಃ ಭಗವಂತನೇ ಎನ್ನುವ ಬಗ್ಗೆ ಯಾವ ಸಂಶಯವೂ ಉಳಿಯುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಆತ್ಮ ನಿವೇದನೆಯು ಹೇಗೆ ಸಾಧ್ಯವಾಗುತ್ತದೆ? ಅಂದರೆ ತಾನೇ ತಾನಾಗಿ ನಿವೇದನೆಯನ್ನು ಮಾಡಿಕೊಳ್ಳಬೇಕಷ್ಟೆ. ಅಂದರೆ ಆತ್ಮನಿವೇದನೆಯು ಸಾಧ್ಯವಿಲ್ಲ.

**ಓ.ಸಂ.232 :** ಹೀಗೆ ಭಕ್ತನೇ ಭಗವಂತನಾಗಬೇಕು. ಅಂತಹವನಿಗೆ ಬಂಧ-ಮೋಕ್ಷಗಳಿಲ್ಲ. ನಿಜವಾಗಿ ಆತ್ಮನಿವೇದನವನ್ನು ಮಾಡುವ ರೀತಿ ಹೀಗೆ ಮನುಷ್ಯನದ್ದಾಗಿರುತ್ತದೆ.

**ವಿವರಣೆ :** ಹೀಗೆ ಭಕ್ತನು ಭಗವಂತನನ್ನು ಅನೇಕ ದೃಷ್ಟಿಕೋನಗಳಿಂದ ಶೋಧಿಸಿ ಅವನ ಸ್ವರೂಪವನ್ನು ತಿಳಿದುಕೊಂಡ ಮೇಲೆಯೇ ಭಕ್ತ-ಭಗವಂತರ ಸಂಬಂಧವನ್ನು ಬೆಳಸಬಹುದು. ಭಕ್ತನಿಗೆ ತಾನು ಭಗವಂತನಿಗಿಂತ ಭಿನ್ನನಲ್ಲವೆಂಬುದು ತಿಳಿದಾಗಲೇ ನಿಜವಾದ ಆತ್ಮನಿವೇದನವು ಆಗುವುದು. ಹೀಗೆ ಭಕ್ತನೇ ಭಗವಂತನಾದರೆ ಆಗ ಅವನಿಗೆ ಬಂಧ-ಮೋಕ್ಷಗಳಿಲ್ಲ. ಬಂಧವಿದ್ದವರಿಗೆ ಮಾತ್ರ ಮೋಕ್ಷದ ಅವಶ್ಯಕತೆಯಿರುತ್ತದೆ. ಮೋಕ್ಷ ಸಿಕ್ಕಮೇಲೆ ಅವನಿಗೆ ಮೋಕ್ಷಾವಸ್ಥೆಯು ನಿತ್ಯವೂ ನಿರಂತರವೂ ಇದ್ದು ಅವನಿಗೆ ಬಂಧನವಿರಲೇ ಇಲ್ಲ ಎನ್ನುವಂತೆ ಅನ್ನಿಸುತ್ತದೆ. ಈರೀತಿ ಪರಮ ಪುರುಷಾರ್ಥವನ್ನು ಸಾಧಿಸುವುದೇ ಯಾವುದೇ ಪುರುಷನ ಕರ್ತವ್ಯವಾಗಿರುತ್ತದೆ. ಇದನ್ನು ಸಾಧಿಸಿದ ಮೇಲೆ ಮನುಷ್ಯನು ಕೃತಕೃತ್ಯನಾಗುತ್ತಾನೆ. ಇದೇ ನಿಜವಾದ ಆತ್ಮನಿವೇದನೆ ಮಾಡುವ ಕ್ರಮವಾಗಿದೆ. ಜ್ಞಾನನಿಷ್ಠರಿಗೆ ಆತ್ಮನಿವೇದನವನ್ನು ಮಾಡುವ ಬಗ್ಗೆ ಇದೇ ಕೊನೆಯ ಓವೀಯಾಗಿರುತ್ತದೆ. ಜ್ಞಾನನಿಷ್ಠರಲ್ಲದ ಉಳಿದ ಭಕ್ತರಿಗಾಗಿ ಮುಂದಿನ ಕೆಲವು ಓವೀಗಳಿರುತ್ತವೆ.

**ಓ.ಸಂ.233 :** ಈವರೆಗೆ ಜ್ಞಾನನಿಷ್ಠರಿಗೆ ಹೇಳಿದ ಆತ್ಮನಿವೇದನ ಕ್ರಮವು ಎಲ್ಲರಿಗೂ ಸಾಧ್ಯವಿಲ್ಲವಾದ್ದರಿಂದ ಅಂತಹವರು ದೇವರ ಸ್ವರೂಪವನ್ನು ತಿಳಿಯದಿದ್ದರೂ ಕೂಡ ತನ್ನನ್ನು ತಾನು ದೇವನಿಗೆ ಸಂಪೂರ್ಣ ಸಮರ್ಪಣೆಮಾಡಿಕೊಳ್ಳಬೇಕು.

**ವಿವರಣೆ :** ಈವರೆಗೆ ಹೇಳಿದ ಜ್ಞಾನನಿಷ್ಠರ ಕ್ರಮವು ಇತರರಿಗೆ ಬಹಳ ಕಷ್ಟವಾಗಿ ತೋರುತ್ತದೆ. ಏಕೆಂದರೆ ಅವರಿಗೆ ಈ ವಿಚಾರ ಕ್ರಮವು ಹಿಡಿಸುವುದಿಲ್ಲ. ಅವರಿಗೆ ವಿಚಾರಕ್ಕಿಂತ ಭಕ್ತಿ–ಭಾವಗಳನ್ನು ದೇವನಲ್ಲಿ ತೋರಿಸುವುದೇ ಸರಿಯೆನಿಸುತ್ತದೆ. ಅಂತಹವರು ದೇವರ ಸ್ವರೂಪದ ಬಗ್ಗೆ ವಿಚಾರಮಾಡುವುದಕ್ಕೇ ಹೋಗುವುದಿಲ್ಲ. ಹೀಗೆ ದೇವನ್ಯಾರೆಂದು ತಿಳಿಯದಿದ್ದರೂ ಕೂಡಾ ಅವರ ಕಲ್ಪನೆಯಲ್ಲಿದ್ದ ದೇವನೇ ಅವರ ಆರಾಧ್ಯ ದೈವವಾಗಿರುತ್ತಾನೆ. ಆಗ ಅವರವರ ಕಲ್ಪನೆಗೆ ತಕ್ಕಂತೆ ದೇವನನ್ನು ಇಟ್ಟುಕೊಂಡು ಅಂತಹವರು ತಮ್ಮ ಸರ್ವಸ್ವವನ್ನೂ ದೇವನಿಗೆ ಅರ್ಪಣ ಮಾಡಬೇಕು. ಇಲ್ಲಿ ಭಕ್ತಿ–ಭಾವ ಹಾಗೂ ನಂಬಿಕೆಗಳು ಬಹಳ ಮುಖ್ಯವಾಗುತ್ತವೆ. ಭಕ್ತನು ತನ್ನ ಪ್ರಾಮಾಣಿಕತನದಿಂದ ಜೀವನವನ್ನು ಹೀಗೆಯೇ ಸಾಗಿಸುತ್ತಿರಬೇಕು. ನಿಷ್ಠೆಯನ್ನು ಅವನು ಎಂದೂ ಬಿಡಬಾರದು.

**ಓ.ಸಂ.234 :** ಇಂತಹ ಭಕ್ತನಿಗೆ ತಾನು ಭಗವಂತನಿಗಿಂತ ಅನ್ಯನೆಂದು ಸ್ವಪ್ನದಲ್ಲೂ ಅವನಿಗೆ ಬರಬಾರದು. ದೇವನಾರೆಂದು ಅವನಿಗೆ ತಿಳಿದರೂ ಅಥವಾ ತಿಳಿಯದಿದ್ದರೂ ಕೂಡ ಆ ಭಗವಂತನು ತಾನೇ ಇದ್ದೇನೆ ಎಂಬುದೇ ನಿತ್ಯ ಅವನಲ್ಲಿ ಸ್ಫುರಿಸುತ್ತಿರಬೇಕು.

**ವಿವರಣೆ :** ಜ್ಞಾನನಿಷ್ಠರಲ್ಲದಿದ್ದರೂ ಈ ಭಕ್ತರು ತಾವು ಎಂದೂ ಭಗವಂತನಿಗಿಂತ ಬೇರೆಯಲ್ಲವೆಂದು ಸದಾ ಚಿಂತಿಸುತ್ತಿರಬೇಕು. ಅವನಿಗೆ ಭಗವಂತನ ಸ್ವರೂಪವು ಏನೆಂದು ತಿಳಿಯದಿದ್ದರೂ ಕೂಡ ಆ ಭಗವಂತನು ತನ್ನಲ್ಲೇ ಇದ್ದಾನೆಂದು ತಿಳಿದುಕೊಂಡು ತಾನು ಸದಾ ಅವನ ಜೊತೆಯಲ್ಲೇ ಇದ್ದೇನೆಂದು ತಿಳಿದುಕೊಳ್ಳಬೇಕು. ಸಕಲವೂ ಭಗವಂತನದ್ದೆಂದೂ ತಿಳಿದುಕೊಂಡು ಎಲ್ಲವೂ ಅವನಿಂದ, ಅವನಿಗಾಗಿ ಹಾಗೂ ಅವನಿಗೋಸ್ಕರ ಎಂದು ತಿಳಿದುಕೊಂಡು ಜೀವಿಸಬೇಕು. ನಿತ್ಯವೂ ಭಗವಂತನೇ ತಾನೆಂದು ತಿಳಿದುಕೊಂಡಿರಬೇಕು. ಯಾವುದೇ ರೀತಿಯಲ್ಲಿ ತಾನು ಭಗವಂತನಿಗಿಂತ ಭಿನ್ನನೆಂದು ತಿಳಿಯಬಾರದು. ಇದು ಅತ್ಯಂತ ಮುಖ್ಯವಾದ ವಿಷಯವಾಗಿರುತ್ತದೆ. ಇದು ಕ್ರಮೇಣ ಅವರ ಮೇಲೆ ಪರಿಣಾಮ ಉಂಟಾಗುತ್ತದೆ.

**ಓ.ಸಂ.235 :** ಇಂತಹ ಭಕ್ತರಿಗೆ ಕೊನೆಗೆ ಸದ್ಗುರುವಿನ ಅನುಗ್ರಹದಿಂದ ಬ್ರಹ್ಮಾತ್ಮೈಕ್ಯ ಜ್ಞಾನವಾಗುವುದು. ಈವರೆಗೆ ನವವಿಧ ಭಕ್ತಿಗಳನ್ನು ಮೋಕ್ಷ ಸಾಧನೆಗೆ ಸುಲಭವಾಗುವ ಹಾಗೆ ಯೋಜಿಸಲಾಗಿದೆ.

**ವಿವರಣೆ :** ಇಂತಹ ಭಕ್ತರಿಗೆ ತಮ್ಮದೇ ಆದ ರೀತಿಯಲ್ಲಿ ಭಗವಂತನನ್ನು ಭಜಿಸುವ ಕ್ರಮದಿಂದ ಕ್ರಮೇಣ ಚಿತ್ತಶುದ್ಧಿಯು ಉಂಟಾಗುತ್ತದೆ. ಅಂತಹ ಭಕ್ತರಿಗೆ ಅವಶ್ಯವಾಗಿ ಸದ್ಗುರುವಿನ ಸೇವೆಯ ಅವಕಾಶವು ಸಿಕ್ಕು ಅವರಿಂದ ಬ್ರಹ್ಮಾತ್ಮೈಕ್ಯ ಜ್ಞಾನದ ಉಪದೇಶವು ಸಿಗುತ್ತದೆ. ಅಂತಹವರು ಕ್ರಮೇಣ ಜ್ಞಾನವನ್ನು ಪಡೆದು ಉದ್ಧಾರವಾಗುತ್ತಾರೆ. ಈವರೆಗೆ ನವವಿಧ ಭಕ್ತಿಗಳನ್ನು ಮೋಕ್ಷ ಸಾಧನೆಗೆ ಅನುಗುಣವಾಗುವಂತೆ

ಯೋಜಿಸಲಾಗಿದೆ. ಪ್ರತಿಯೊಂದರಲ್ಲೂ ಜ್ಞಾನನಿಷ್ಠರಿಗಾಗಿ ಅನುಸರಿಸುವ ಕ್ರಮವು ಹಾಗೂ ಸಾಮಾನ್ಯ ಭಕ್ತರಿಗಾಗಿ ಅನುಸರಿಸಬೇಕಾದ ಕ್ರಮಗಳನ್ನು ಬೇರೆ-ಬೇರೆಯೇ ವಿವರಿಸಲಾಗಿದೆ. ಭಕ್ತಿಯೆನ್ನುವುದು ಜ್ಞಾನನಿಷ್ಠರಿಗಲ್ಲವೆಂದೂ ಜ್ಞಾನೀ-ಭಕ್ತರು 'ಹೇಗೆ' ಮತ್ತು 'ಯಾವ ಕ್ರಮವನ್ನು ಅನುಸರಿಸಬೇಕು' ಎಂಬುದನ್ನೂ ಬಹಳ ಸ್ಪಷ್ಟವಾಗಿ ತೋರಿಸಲಾಗಿದೆ. ಹಾಗೆಯೇ ಉಳಿದ ಸಾಮಾನ್ಯ ಭಕ್ತರಿಗೂ ಕೂಡ ಅನುಸರಿಸುವ ಕ್ರಮಗಳನ್ನು ಸ್ಪಷ್ಟಪಡಿಸಲಾಗಿದೆ.

**ಓ.ಸಂ.236 :** ಬಲಿ ಚಕ್ರವರ್ತಿಯು ಈ ಆತ್ಮನಿವೇದನ ಭಕ್ತಿಯನ್ನು ತೋರಿಸಿಯೇ ಭವ ಬಂಧನವನ್ನು ಕಳಚಿಕೊಂಡನೆಂದು ಪುರಾಣಗಳು ಹೇಳುತ್ತವೆ. ಆದುದರಿಂದ ಯೋಗ್ಯ ಪುರುಷರು ಈ ನವವಿಧ ಭಕ್ತಿಯಿಂದ ತಮ್ಮ ಉದ್ಧಾರವನ್ನು ತಾವು ಮಾಡಿಕೊಳ್ಳಬೇಕು.

**ವಿವರಣೆ :** ಬಲಿ ಚಕ್ರವರ್ತಿಯು ಆತ್ಮನಿವೇದನೆಯಿಂದಲೇ ಮುಕ್ತಿಯನ್ನು ಪಡೆದನೆಂದು ಪುರಾಣಗಳಲ್ಲಿ ಉಲ್ಲೇಖವಿದೆ. ಬಲಿ ಚಕ್ರವರ್ತಿಗೆ ಒಮ್ಮೆ ವಾಮನವೆಂಬ ವಟುವಿಗೆ ಅವನ ಮೂರು ಪಾದಗಳಷ್ಟು ಜಾಗವನ್ನು ದಾನಕೊಡುವ ಸಂದರ್ಭ ಬಂತು. ದಾನ ಸ್ವೀಕಾರ ಸಮಯದಲ್ಲಿ ವಾಮನನು ತ್ರಿವಿಕ್ರಮನಾಗಿ ತನ್ನ ಒಂದು ಪಾದದಿಂದ ಇಡೀ ಭೂಮಂಡಲವನ್ನೂ, ಎರಡನೆಯ ಪಾದದಿಂದ ಇಡೀ ಅಂತರಿಕ್ಷವನ್ನೂ, ಅಳೆದು ಮೂರನೆಯ ಪಾದವನ್ನು ಎಲ್ಲಿಡಲೀ ಎಂದು ಕೇಳಿದಾಗ ಭಕ್ತಿಗ್ರೇಸರನಾದ ಬಲಿಯು ಸಂಪೂರ್ಣವಾಗಿ ನಿವೇದನಾ ಭಾವದಿಂದ ಮೂರನೆಯ ಕಾಲನ್ನು ತನ್ನ ತಲೆಯ ಮೇಲೆ ಇಡಲು ಕೇಳಿಕೊಳ್ಳುತ್ತಾನೆ. ಹಾಗಾಗಿ ಅವನನ್ನು ಪಾತಾಳಕ್ಕೆ ತಳ್ಳುತ್ತಾನೆ. ಹೀಗೆ ಬಲಿಯು ಆತ್ಮನಿವೇದನದಿಂದಲೇ ತನ್ನ ಭವ-ಬಂಧನದಿಂದ ಪಾರಾದ ಕಥೆಯು ಪುರಾಣಗಳಲ್ಲಿ ಪ್ರಸಿದ್ಧಿಯಾಗಿರುತ್ತದೆ. ಆದುದರಿಂದ ನಾವೂ ಕೂಡ ಈ ನವವಿಧ ಭಕ್ತಿಯನ್ನು ಮಾಡಿಯೇ ನಮ್ಮ ಆತ್ಮೋದ್ಧಾರವನ್ನು ಮಾಡಿಕೊಳ್ಳಬೇಕಾಗುತ್ತದೆ.

**ಓ.ಸಂ.237 :** ದೇಹದ ಪೋಷಣೆಗೆ ಇಡೀ ಆಯುಷ್ಯವನ್ನು ವ್ಯರ್ಥಮಾಡುವುದು ಪಶುಗಳಿಗೆ ಮಾತ್ರ ಶೋಭಿಸುವುದೇ ಹೊರತು ಮನುಷ್ಯರಿಗಲ್ಲ.

**ವಿವರಣೆ:** ಪಶುಗಳಿಗೆ ಪರಮಾತ್ಮನು ಬುದ್ಧಿಯನ್ನು ದಯಪಾಲಿಸಿಲ್ಲ. ಆದುದರಿಂದ ಅವುಗಳು ಕೇವಲ ದೇಹವೇ ತಾವೆಂಬ ಭಾವನೆಯಿಂದ ವರ್ತಿಸುತ್ತವೆ. ಹಾಗಿದ್ದಾಗ ಅವು ಇಡೀ ತಮ್ಮ ಆಯುಷ್ಯವನ್ನು ತಮ್ಮ ಆಹಾರ ಹುಡುಕುವುದರಲ್ಲಿಯೇ ಕಳೆಯುತ್ತವೆ. ಇದೇನು ಅವುಗಳ ತಪ್ಪಲ್ಲ. ಅವು ಅನಿವಾರ್ಯವಾಗಿ ಅವುಗಳನ್ನು ಮಾಡಲೇಬೇಕಾಗುತ್ತದೆ. ಬುದ್ಧಿ ಜೀವಿಯಾದ ಮನುಷ್ಯಪ್ರಾಣಿಯು ಹೀಗೆ ಮಾಡಿದರೆ ಅದು ಅವನಿಗೆ ಶೋಭಿಸುವುದಿಲ್ಲ. ಏಕೆಂದರೆ 'ಮನುಷ್ಯನು ಏತಕ್ಕಾಗಿ ತಿನ್ನಬೇಕು' ಹಾಗೂ 'ಏತಕ್ಕಾಗಿ ನಮ್ಮ ಆರೋಗ್ಯ ಕಾಪಾಡಿಕೊಳ್ಳಬೇಕು' ಎಂಬ ಪ್ರಶ್ನೆಗಳು ಎಲ್ಲರಿಗೂ ಬಂದೇ ಬರುತ್ತವೆ. ಇದಕ್ಕೆ ಉತ್ತರವು ಪ್ರತಿಯೊಬ್ಬ ಮನುಷ್ಯನಿಗೂ ತಿಳಿದಿರಲೇಬೇಕಾಗುತ್ತದೆ. ಇವುಗಳನ್ನೇ ಪುರುಷಾರ್ಥಗಳೆಂದು ಕರೆಯಲಾಗುತ್ತದೆ. ಇವೇ

ಧರ್ಮ-ಅರ್ಥ-ಕಾಮ ಮತ್ತು ಮೋಕ್ಷಗಳು. ಇವುಗಳ ಗುರಿಯು ಮನುಷ್ಯನಿಗೆ ಇರಲೇಬೇಕಾಗುತ್ತದೆ. ಇದಿಲ್ಲದಿದ್ದರೆ ಅವನು ಪಶುವಿಗೆ ಸಮಾನನಾಗುತ್ತಾನೆ.

ಓ.ಸಂ.238 : ಎಲ್ಲ ಕಡೆ ಕಾಣುವ ಜಡವೇ ಸತ್ಯವಿದೆ. ದೇವನೆಂಬುವನು ಇಲ್ಲವೇ ಇಲ್ಲ. ಚೈತನ್ಯವೆಂಬುದು ಜಡದ ಶಕ್ತಿಯಾಗಿದೆ. ಚೈತನ್ಯವು ಜಡದಲ್ಲೇ ಉತ್ಪತ್ತಿ-ನಾಶಗಳನ್ನು ಹೊಂದುತ್ತದೆ ಎಂಬುದು ಕೆಲವರ ಅಭಿಪ್ರಾಯವಾಗಿದೆ.

ವಿವರಣೆ : ಈ ಓವೀಯಲ್ಲಿ ಕೆಲವು ವೈಜ್ಞಾನಿಕ ಜನರ ಅಭಿಪ್ರಾಯಗಳನ್ನು ಕೊಡಲಾಗಿದೆ. ಅದನ್ನು ಮುಂದಿನ ಓವೀಯಲ್ಲಿ ಖಂಡಿಸಲಾಗಿದೆ. ಇವರ ಪ್ರಕಾರ ನಮಗೆ ಕಾಣುವ ಜಡವೇ ಸರ್ವವಿಧದಲ್ಲಿ ಸತ್ಯವಾಗಿರುತ್ತದೆ. ನಮ್ಮ ಅನುಭವಕ್ಕೆ ಬರುತ್ತಿರುವ ಚೈತನ್ಯವು ಸ್ವತಂತ್ರವಾಗಿ ಸತ್ಯವಲ್ಲ. ಅದು ಜಡದ ಶಕ್ತಿಯಾಗಿದೆ. ಅದು ಜಡದಲ್ಲೇ ಹುಟ್ಟಿ ಜಡದಲ್ಲೇ ಬೆಳೆಯುತ್ತದೆ. ನಂತರ ಜಡದಲ್ಲೇ ನಾಶವಾಗುತ್ತದೆ. ನಮ್ಮ ಚೈತನ್ಯವು, ದೇಹವು ಅವಸಾನವಾದಾಗಲೇ ಅದರ ಜೊತೆಗೆ ನಾಶವಾಗುತ್ತದೆ. ಆದುದರಿಂದ ಪುನರ್ಜನ್ಮದ ಸಂಭವವಾಗಲೀ ಕರ್ಮನಿಯಮವಾಗಲೀ ಯಾವುದೂ ಸತ್ಯವಲ್ಲ. ಹಾಗೆಯೇ ದೇವರು ಇದ್ದಾನೆಂಬುದೂ ಕೂಡ ಸತ್ಯವಲ್ಲ. ಇವೆಲ್ಲ ಕೇವಲ ನಂಬಿಕೆಗಳಾಗಿವೆ. ಆದುದರಿಂದ ಪುಣ್ಯ-ಪಾಪವೆಂಬುದಾಗಲೀ ಅಥವಾ ಮೋಕ್ಷವೆಂಬುದಾಗಲೀ ಇರುವುದಿಲ್ಲ. ಇವೆಲ್ಲವೂ ವಿಜ್ಞಾನದ ಆವಶ್ಯಕ ನಂಬಿಕೆಗಳಲ್ಲ. ಆದರೂ ಕೆಲವು ವಿಜ್ಞಾನಿಗಳು ಈ ಅಭಿಪ್ರಾಯವನ್ನು ಹೊಂದಿದ್ದಾರೆ.

ಓ.ಸಂ.239 : ಹೀಗೆಂದು ಭಾವಿಸಿಕೊಂಡಿರುವವರು ನಿಶ್ಚಿತವಾಗಿ ಜಡತ್ವವನ್ನು ಅನುಭವಿಸುವರು. ಅವರು ನಿರಂತರವೂ ಜಡದ ಪರಿಣಾಮಗಳನ್ನು ಭೋಗಿಸಬೇಕಾಗುವುದು.

ವಿವರಣೆ : ಸಾಯುವಾಗ ತಾವು ಏನೆಂದು ಭಾವಿಸಿಕೊಂಡಿರುವರೋ ಅದರಂತೆ ಮುಂದಿನ ಜನ್ಮದಲ್ಲಿ ಹುಟ್ಟುವರು. ಆದುದರಿಂದ ಇಂತಹ ಜನರು ನಿಶ್ಚಿತವಾಗಿ ಮುಂದಿನ ಜನ್ಮದಲ್ಲಿ ಜಡತ್ವವನ್ನು ಅನುಭವಿಸುವರು. ಅಂದರೆ ಈ ಸ್ಥಿತಿಯು ಪಶುಗಳಿಗಿಂತ ಹೆಚ್ಚಿನದೇನಲ್ಲ. ಅವುಗಳಿಗೆ ತಮ್ಮ ಆತ್ಮದ ಬಗ್ಗೆಯಾಗಲೀ ಅಥವಾ ಚೈತನ್ಯದ ಬಗ್ಗೆಯಾಗಲೀ ಯಾವುದೇ ಚಿಂತೆಯು ಯಾವಾಗಲೂ ಕಾಡುವುದಿಲ್ಲ. ಈ ಜನರು ಪಶುಗಳಂತೆ ನಿರಂತರ ಜಡದ ಪರಿಣಾಮಗಳನ್ನೇ ಭೋಗಿಸಬೇಕಾಗುತ್ತದೆ. ಪಶುಗಳಿಗೆ ನಿರಂತರವಾಗಿ ಜಡದ ವಿಷಯವೇ ಸದಾ ಕಾಡುತ್ತದೆ. ಆಹಾರ ಅವುಗಳಿಗೆ ಸಿಗುತ್ತದೋ ಇಲ್ಲವೋ, ಮತ್ತೆ ಕ್ರೂರ ಪ್ರಾಣಿಗಳಿಂದ ತಮ್ಮ ರಕ್ಷಣೆಯನ್ನು ಹೇಗೆ ಮಾಡಿಕೊಳ್ಳುವುದು, ಹೀಗೆ ಮುಂತಾದ ವಿಚಾರಗಳನ್ನು ತಮ್ಮ ದೇಹದ ಬಗ್ಗೆಯೇ ಅವು ಯೋಚಿಸುತ್ತವೆ. ಹೀಗೆ ತಮ್ಮ ದೇಹವನ್ನು ಬಿಟ್ಟು ಯಾವುದೇ ಬೇರೆ ಯೋಜನೆಯು ಅವುಗಳಿಗೆ ಬರುವುದಿಲ್ಲ.

**ಓ.ಸಂ.240 :** ಯಾರಿಗೆ ತಮ್ಮ ಹಿತರಕ್ಷಣೆಯು ಮುಖ್ಯವಾಗಿರುವುದೋ ಅಂತಹವರು ಈ ಭಕ್ತಿಮಾರ್ಗವನ್ನು ಹಿಡಿದು ತಮ್ಮ ನಿಜ ಸ್ವರೂಪವನ್ನು ತಿಳಿದುಕೊಳ್ಳಬೇಕು.

**ವಿವರಣೆ :** ಹಿಂದೆ ತಿಳಿಸಿದ ನಾಸ್ತಿಕ ಅಭಿಪ್ರಾಯಗಳನ್ನು ಬಿಟ್ಟು ಯಾರು ತಮಗೆ ತಮ್ಮ ಹಿತ ರಕ್ಷಣೆಯು ಮುಖ್ಯವೆನಿಸುವುದೋ ಅಂತಹವರು ಈ ಭಕ್ತಿಮಾರ್ಗವನ್ನು ಹಿಡಿದು ತಮ್ಮ ಉದ್ಧಾರವನ್ನು ತಾವು ಮಾಡಿಕೊಳ್ಳಬೇಕು. ತಾವು ತಮ್ಮ ಮನೋಧರ್ಮಕ್ಕನುಸರಿಸಿ ದೇವರನ್ನು ತಮ್ಮ ಯಜಮಾನನೆಂದೋ, ಸಖನೆಂದೋ ಅಥವಾ ತಂದೆ ಎಂದೋ ಪರಿಗಣಿಸಿ ಆ ಪ್ರಕಾರ ದೇವನನ್ನು ಭಜಿಸಬೇಕಾಗುತ್ತದೆ. ಹಿಂದೆ ತಿಳಿಸಿದಂತೆ ಭಗವಂತನ ಸ್ವರೂಪವೇನೆಂದು ಮೊದಲು ತಿಳಿಯಲು ಪ್ರಯತ್ನಿಸಬೇಕು. ಒಂದು ವೇಳೆ ದೇವನನ್ನು ತಿಳಿಯುವ ಸಾಮರ್ಥ್ಯವಿರದಿದ್ದಲ್ಲಿ ಆಗ ಮಾತ್ರ ಸಾಮಾನ್ಯದವರಿಗೆ ಹೇಳಿದ ಮಾರ್ಗೋಪಾಯದಿಂದ ಚಿತ್ತಶುದ್ಧಿಯನ್ನು ಪಡೆದು ನಂತರ ಶ್ರೀಸದ್ಗುರುಗಳ ಕೃಪೆಯಿಂದ ಬ್ರಹ್ಮಾತ್ಮೈಕ್ಯ ಜ್ಞಾನವನ್ನು ಪಡೆಯಬೇಕು. ಈ ಮಾರ್ಗದಲ್ಲಿ ಶ್ರದ್ಧೆ ಹಾಗೂ ಪ್ರಾಮಾಣಿಕತೆಗಳು ಬಹಳ ಮುಖ್ಯ. ಚಿತ್ತಶುದ್ಧಿಯಾಗುವತನಕ ಅಂದರೆ ಜೀವಿತದ ಕೊನೆಯ ಕಾಲದವರೆಗೆ ತಮ್ಮ ನಂಬಿಕೆಯನ್ನೂ ಮತ್ತು ಸಾಧನೆಯನ್ನೂ ಬಿಡಬಾರದು.

**ಓ.ಸಂ.241 :** ಬಹಳ ಹಿಂದೆ ತಿಳಿಸಿದಂತೆ ಚಿತ್ತಶುದ್ಧಿ ಮತ್ತು ಏಕಾಗ್ರತೆಗಾಗಿ ( ಚಿತ್ತಸ್ಥೈರ್ಯ ) ಭಕ್ತಿ ಮತ್ತು ಯೋಗ ಎಂಬ ಎರಡು ವಿಷಯಗಳನ್ನು ನಿಮಗೆ ವಿವರವಾಗಿ ತಿಳಿಸುವುದು ಎಂಬುದಾಗಿ ಹೇಳಲಾಗಿತ್ತು.

**ವಿವರಣೆ :** ಬ್ರಹ್ಮಜ್ಞಾನ ಪಡೆಯಲು ಬೇಕಾದ ಸಾಮರ್ಥ್ಯಕ್ಕೆ ಮುಖ್ಯವಾಗಿ ಚಿತ್ತದ ಶುದ್ಧಿ ಹಾಗೂ ಚಿತ್ತದ ಏಕಾಗ್ರತೆಗಳು ( ಚಿತ್ತಸ್ಥೈರ್ಯ ) ಆವಶ್ಯಕವಾಗಿವೆ. ಇವುಗಳು ಇಲ್ಲದೇ ಸದ್ಗುರುವಿನ ಉಪದೇಶವು ಅರ್ಥವಾಗಲಿಕ್ಕಿಲ್ಲ. ವರ್ಣಾಶ್ರಮಕ್ಕನುಸರಿಸಿ ಮಾಡುವ ಕರ್ಮಯೋಗದಿಂದ ಅವನಿಗೆ ಈ ಚಿತ್ತಶುದ್ಧಿಯು ಬರುತ್ತದೆ. ಅಂದರೆ ಇದರಿಂದ ಸಾಧಕನು ಸಾಧನ-ಚತುಷ್ಟಯ ಸಂಪನ್ನನಾಗುತ್ತಾನೆ. ವಿವೇಕ, ವೈರಾಗ್ಯ, ಶಮದಮಾದಿ ಷಟ್ಕ ( ಶಮ, ದಮ, ಉಪರತಿ, ತಿತಿಕ್ಷಾ, ಸಮಾಧಾನ ಮತ್ತು ಶ್ರದ್ಧಾ ) ಮತ್ತು ಮುಮುಕ್ಷುತ್ವ ಇವೇ ನಾಲ್ಕು ಸಾಧನ ಚತುಷ್ಟಯಗಳು. ಸಾಧಕನಿಗೆ ಇವಿಷ್ಟೇ ಇದ್ದರೆ ಸಾಲದು. ಅವನಿಗೆ ಗುರುಗಳು ಹೇಳುವ ಕ್ಲಿಷ್ಟ ವೇದಾಂತ ವಿಷಯಗಳಲ್ಲಿ ಏಕಾಗ್ರತೆಯನ್ನು ವಹಿಸಿಕೊಳ್ಳುವುದು ಬೇಕಾಗುವುದು. ಇದಕ್ಕಾಗಿ ಮುಖ್ಯವಾಗಿ ಎರಡು ವಿಷಯಗಳು ಇರುವುವು. ಒಂದನೆಯದು ನವವಿಧ ಭಕ್ತಿಯಿಂದ ಪರಮಾತ್ಮನಲ್ಲಿ ಏಕಾಗ್ರತೆಯನ್ನು ವಹಿಸುವುದು; ಎರಡನೆಯದು 'ಯೋಗ' ವಾಗಿರುವುದು. ಈ ಅಧ್ಯಾಯದಲ್ಲಿ ನವವಿಧ ಭಕ್ತಿಯನ್ನು ಹೇಳಿದ್ದಾರೆ. ಮುಂದಿನ ಅಧ್ಯಾಯದಲ್ಲಿ ಯೋಗವನ್ನು ತಿಳಿಸುವರು.

**ಓ.ಸಂ.242 :** ಶ್ರೀಗಳು ಭಕ್ತಿಮಾರ್ಗದಲ್ಲಿ ಒಂಭತ್ತು ವಿಧದ ಭಕ್ತಿಗಳನ್ನು ವಿವರಿಸುವುದರಲ್ಲಿಯೇ ಈ ಅಧ್ಯಾಯನ್ನು ವಿಸ್ತಾರವಾಗಿ ಬರೆದಿದ್ದಾರೆ. ಆದುದರಿಂದ ಮುಂದಿನ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಯೋಗವನ್ನು ಹೇಳುತ್ತಾರೆ.

**ವಿವರಣೆ :** 'ಭಕ್ತಿ' ಹಾಗೂ 'ಯೋಗ'ದಿಂದ ಮುಖ್ಯವಾಗಿ ಜ್ಞಾನನಿಷ್ಠನಿಗೆ ಬೇಕಾಗುವ ಏಕಾಗ್ರತೆಯು ನಮಗೆ ಸಿಗುತ್ತದೆ. ಭಕ್ತಿಯಿಂದ ಏಕಾಗ್ರತೆಯ ಜೊತೆಗೆ ದೇವರ ಬಗ್ಗೆ ಶ್ರದ್ಧೆಯೂ ಕೂಡ ಉಂಟಾಗುತ್ತದೆ. ನವವಿಧ ಭಕ್ತಿಯಲ್ಲಿ ಒಂದೊಂದನ್ನು ಪ್ರತ್ಯೇಕವಾಗಿ ತೆಗೆದುಕೊಂಡು ಮೊದಲು ಜ್ಞಾನನಿಷ್ಠನಿಗೆ ಆಗುವಂತೆ ಯಾವುದನ್ನು ಅಳವಡಿಸಿ ವಿವರಿಸಿದ್ದಾರೋ ಸಾಮಾನ್ಯ ಭಕ್ತನಿಗೂ ಸಹಾಯವಾಗುವಂತೆ ಅದನ್ನೇ ತೆಗೆದುಕೊಂಡು ವಿವರಿಸಲಾಗಿದೆ. ಹಾಗಾಗಿ ಈ ವರೆಗೆ ಅಧ್ಯಾಯವು ಬೃಹತ್ತಾಗಿ ಬೆಳೆದುದರಿಂದ ಯೋಗದ ಬಗ್ಗೆ ವಿವರವಾಗಿ ತಿಳಿಸಿ ಹೇಳಲು ಈ ಅಧ್ಯಾಯದಲ್ಲಿ ಆಗುವುದಿಲ್ಲ. ಹೀಗಾಗಿ 'ಯೋಗ'ದ ಬಗ್ಗೆಯೇ ಮುಂದಿನ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ ಎಂದು ಶ್ರೀಗಳು ತಿಳಿಸಿದ್ದಾರೆ.

**ಓ.ಸಂ.243 :** ಈ ಅಧ್ಯಾಯದಲ್ಲಿ ನವವಿಧ ಭಕ್ತಿಗಳನ್ನು ವಿವರಿಸಿರುವುದರಿಂದ ಯಾವನ ಮನಸ್ಸು ಭಕ್ತಿಯಲ್ಲಿ ಆಸಕ್ತಿವಹಿಸುವುದೋ ಅವನಿಗೆ ಈ ಅಧ್ಯಾಯವು ಭವಸಮುದ್ರವನ್ನು ದಾಟಿಸುವುದರಲ್ಲಿ ಸಂಶಯವು ಇಲ್ಲ.

**ವಿವರಣೆ :** ಯಾರಿಗೆ ಈ ನವವಿಧಭಕ್ತಿಗಳಲ್ಲಿ ಮನಸ್ಸು ಹೋಗುವುದೋ ಅವರಿಗೆ ಈ ಓವೀಯಿಂದ ಉಂಟಾಗುವ ಫಲವನ್ನು ತಿಳಿಸಲಾಗಿದೆ. ನಿಜವಾದ ಭಕ್ತನು ಈ ಅಧ್ಯಾಯದಲ್ಲಿ ತಿಳಿಸಿರುವಂತೆ ಯಾವುದೇ ಒಂದು ವಿಧದ ಭಕ್ತಿಯಲ್ಲಿ ಮನಸ್ಸನ್ನು ಇಟ್ಟು ಅದನ್ನೇ ತನ್ನ ಜೀವನ ಪರ್ಯಂತ ನಿಷ್ಠೆಯಿಂದ ಆಚರಿಸಬೇಕು. ಅವನು ಜ್ಞಾನನಿಷ್ಠನಾದಲ್ಲಿ ಅವನು ಜ್ಞಾನಿ–ಭಕ್ತನೇ ಆಗಿಬಿಡುತ್ತಾನೆ. ಅವನಿಗೆ ಇಲ್ಲಿಯೇ ಈಗಲೇ ಸದ್ಯೋಮುಕ್ತಿಯು ಸಿಗುವುದು. ಇಲ್ಲದಿದ್ದಲ್ಲಿ ಅವನು ಸಾಮಾನ್ಯನಾಗಿದ್ದರೂ ಕೂಡ ನಿಷ್ಠೆಯಿಂದ ತನಗೆ ಬೇಕಾದ ವಿಧದಲ್ಲಿ ಮನಸ್ಸುಕೊಟ್ಟು ಪ್ರಾಮಾಣಿಕತೆಯಿಂದ ಅಭ್ಯಾಸ ಮಾಡಿದಲ್ಲಿ ಕೊನೆಗೆ ಶ್ರೀಗುರುಕೃಪೆಯು ನಿಶ್ಚಿತವಾಗಿಯೇ ದೊರಕಿ ಅವನಿಗೆ ಬ್ರಹ್ಮಾತ್ಮೈಕ್ಯದ ಜ್ಞಾನವು ಬೋಧೆಯಾಗುವುದು ಮತ್ತು ಅವನೂ ಕೂಡ ಭವರೋಗದಿಂದ ಮುಕ್ತನಾಗುವನು.

**ಓ.ಸಂ.244 :** ಹೀಗೆ ಶ್ರೀಪದ್ಮನಾಭ ತೀರ್ಥ ಯತೀಂದ್ರರು ರಚಿಸಿದ 'ಆತ್ಮಾನುಭವ' ಗ್ರಂಥದಲ್ಲಿ 'ಕರ್ಮ' ಹಾಗೂ 'ಭಕ್ತಿ'ಯನ್ನೊಳಗೊಂಡ ಮೂರನೆಯ ಅಧ್ಯಾಯವು ಇಲ್ಲಿಗೆ ಸಂಪೂರ್ಣವಾಯಿತು.

**ವಿವರಣೆ :** ಎಲ್ಲ ಅಧ್ಯಾಯಗಳಂತೆ ಈ ಅಧ್ಯಾಯದ ಕೊನೆಯ ಓವೀಯಾದ ಈ ಓವೀಯಲ್ಲಿ ಗ್ರಂಥಕರ್ತರ ಹೆಸರು, ಗ್ರಂಥದ ಹೆಸರು, ಈ ಅಧ್ಯಾಯದ ವಿಷಯಗಳನ್ನು ತಿಳಿಸಿದ್ದಾರೆ. ಗ್ರಂಥಕರ್ತರ ಹೆಸರನ್ನು ಶ್ರೀ ಪದ್ಮನಾಭ ತೀರ್ಥ ಯತೀಂದ್ರರು ಎಂದೂ, ಅವರು ರಚಿಸಿದ ಗ್ರಂಥವು 'ಆತ್ಮಾನುಭವ'ವೆಂದೂ, ಇದು

ಮೂರನೆಯ ಅಧ್ಯಾಯವಾಗಿದ್ದು ಇದರ ವಿಷಯವು 'ಕರ್ಮ' ಹಾಗೂ 'ನವವಿಧ ಭಕ್ತಿ' ಗಳೇ ಆಗಿವೆಯೆಂದು ತಿಳಿಸಿದ್ದಾರೆ. ಶ್ರೀಗಳು ಈ ವಿಷಯಗಳನ್ನು ನಮಗೆ ಕೊಟ್ಟಿರುವುದು ಅವರಿಗಿರುವ ಚಾರಿತ್ರಿಕ ಪ್ರಜ್ಞೆಗೆ ಹಿಡಿದ ಕನ್ನಡಿಯಾಗಿರುವುದು ಹಾಗೂ ಅಲ್ಲದೇ ಇಂತಹ ವಿಷಯಗಳು ನಮಗೆ ಸಿಕ್ಕಿರುವುದು ನಮ್ಮ ಭಾಗ್ಯವೇ ಸರಿ. ಇದಲ್ಲದೇ ಈ ಓವೀಯ ನಂತರ ಈ ಅಧ್ಯಾಯದ ಒಟ್ಟು ಓವೀಗಳ ಸಂಖ್ಯೆಯು 244 ಎಂದೂ ಹಾಗೂ ಮೊದಲನೆಯ ಅಧ್ಯಾಯದಿಂದ ಈ ಓವೀಯವರೆಗೆ ಒಟ್ಟು ಓವೀಗಳ ಸಂಖ್ಯೆಯು 517 ಎಂದೂ ತಿಳಿಸಿದ್ದಾರೆ.

ಶ್ರೀ ಶ್ರೀ ಶ್ರೀ

( ಇತಿ ತೃತೀಯೋಧ್ಯಾಯ ಸಮಾಪ್ತಃ )

ಇಲ್ಲಿಗೆ ಮೂರನೇಯ ಅಧ್ಯಾಯವು ಸಮಾಪ್ತಿಯಾಗಿದೆ.